# CHARITRASANGRAHA

OR

# A COLLECTION OF BIOGRAPHICAL SKETCHES

Part I.

BY

RÁMACHANDRA H. DEŚAPÂNDE, M.A.
*Fellow of the University of Bombay,
sometimes Daxina Fellow Deccan College, Poona,
Honorary Secretary K. V. V. Sangha Dhârawâd,
and author of several Kannada books.*

**Second Edition, revised and enlarged. 1000 Copies.**

Lives of great men all remind us
We can make our lives sublime
And, departing, leave behind us
Footprints on the sands of time.—*Longfellow.*



**DHÂRAWÂD**

1898



**Price: 1 Rupee.**

# ಚರಿತ್ರಸಂಗ್ರಹ

## ೧ನೆಯ ಭಾಗ


ಮುಂಬಯಿ ವಿಶ್ವವಿದ್ಯಾಲಯದ ಫೆಲೊಗಳೂ,

ಕೆಲಕಾಲ ಪುಣೆಯ ಡೆಕ್ಕನ್ ಕಾಲೇಜದ ಫೆಲೊಗಳೂ,

ಧಾರವಾಡದ ಕ. ವಿ. ವ. ಸಂಘದ

ಸನ್ಮಾನಿತಕಾರ್ಯದರ್ಶಿಗಳೂ, ಹಲವು ಕನ್ನಡ ಪುಸ್ತಕಗಳ ಕರ್ತರೂ ಆದ

**ರಾಮಚಂದ್ರ ಹಣಮಂತ ದೇಶಪಾಂಡೆ,** ಎಮ್. ಎ.

ಇವರು ಬರೆದುದು.



ತಿದ್ದಿ ಬೆಳಿಸಿದ ೨ನೆಯಾವೃತ್ತಿ, ೧೦೦೦ ಪ್ರತಿಗಳು.


ಅರಸೊಳಿತನೆ ಗೆಯ್ವಂ ದ್ವೇಷಿಯಪ್ಪಂ ಪ್ರಜರ್ಗೆ ।
ದೊರೆ ಪ್ರಜೆಯೊಳಿತನ್ನೇ ಗೆಯ್ವನಂ ಮುಂದೆ ನೋಡಂ ॥
ಪಿರಿದೆನಿಪ ವಿರೋಧಂ ತಾನಿದಕ್ಕಂ ಸಮಾನಂ ।
ದೊರೆಪ್ರಜೆಯುಭಯರ್ಗಂ ದುರ್ಲಭಂ ಕ್ಷೇಮಕರ್ತಂ ॥ ೧ ॥

ಕಾಲಾಹ್ವಾನದ ವಾಲುಕಾಸ್ಥಳಿಯೊಳಾರ್ ಆತ್ಮೀಯನಾಮಂಗಳಂ ।
ಮೇಲೆಂಬಂತೆ ಯಶಸ್ಸುವರ್ಣರಸದಿಂದುಲ್ಲೇಖಿಸಿರ್ಪರ್ ಸ್ಥಿರಂ ॥
ಈಲೋಕಕ್ಕೆ ವದಾನ್ಯರೆಂದೆನಿಪರಾರ್ ಆಮಾನ್ಯರಾಯುಷ್ಯದ ।
ತ್ರೀಲೇಖಂಗಳ ನೋಡದೋದದ ನರಂಗೇನಕ್ಷರಾಭ್ಯಾಸದಿಂ ॥ ೨ ॥




**ಧಾರವಾಡ**

೧೮೯೮





ಬೆಲೆ: ೧ ರೂಪಾಯಿ [illegible] ೦

Dedicated

( by permission )

TO

Cowasjee Cursetjee Jamesetjee Jejeebhoy Esq.

*Brother of Jamesetjee Jejeebhoy, Baronet,* C. S. I.

*and Assistant Collector of Salt Revenue,*

out of

Admiration for his endearing qualities

AND

**Amiable and liberal disposition.**

# ಈ ಗ್ರಂಥವು

ಬಾರೊನೆಟ್ಟರೂ ಸಿ. ಎಸ್. ಐ. ಎಂಬ ಬಿರುದನ್ನು ಧರಿಸಿದವರೂ ಆದ

**ಜೇಮುಸೆಡ್ಜಿ ಜೀಜಿಭಾಯಿ ದೊರೆಗಳ**

ತಮ್ಮಂದಿರೂ ಉಪ್ಪಿನ ಖಾತೆಯ ಅಸಿಸ್ಟಂಟ ಕಲೆಕ್ಟರರೂ ಆದ

## ಮೆ. ಕಾವಸ್ಜಿ ಕರಸೆಡ್ಜಿ ಜೇಮುಸೆಡ್ಜಿ ಜೀಜಿಭಾಯಿ

ಇವರಿಗೆ

ಇವರ ಪ್ರೀತ್ಯಾಸ್ಪದಗುಣಗಳಿಗೂ ಮನೋಹರವಾದ ಮತ್ತು

ಉದಾರವಾದ ಸ್ವಭಾವಕ್ಕೂ ಮೆಚ್ಚಿ

(ಅಪ್ಪಣೆ ಪಡೆದುಕೊಂಡು)

**ಕಾಣಿಕೆಯಾಗಿ ಅರ್ಪಿಸಲ್ಪಟ್ಟಿರುತ್ತದೆ.**

## Preface to the 2nd Edition.

In presenting this edition to the public, I have much pleasure to state that the first edition was received with more favour than I expected, notwithstanding the defects it contained. In the preface to that edition a promise was made to bring out an improved and enlarged edition as soon as it was over. But owing to several causes, over which I had no control, the promise could not be kept. It is therefore hoped that the indulgent public would not mind the delay.

Several important changes have been made in this edition. As the first five lives in the first edition were removed to another book, viz. *Founders and Reformers of Religion in India,* published two years ago, they are omitted here. The remaining seven lives have been improved and enlarged, as far as possible. Moreover the lives of Empress Nurjahán, Báláji Vishvanátha, Náná Fadanavis, Tipu Sultan Ranajitasing, Affonso Albuquerque, Dupleix, Marquis Wellesley and Lord Dalhousie have been added, making the book thus a repository of 16 biographies. To make the book more interesting and attractive I had, at a considerable expense and trouble, to get the wood-cuts prepared of all the personages, except those of Báláji Višvavanáth and Dupleix whose originals it was beyond my power to secure. In connection with this I express

my obligations to my worthy teacher Mr. V. N. Páthak, M. A., who kindly lent me the ivory-paintings of Jáhangir and Nurjahán for my purpose.

In addition to the books consulted for the first edition, I had to draw my information from several authors, whose names would make too long a list to be given here. But I am mainly indebted to Orme's History of India, Rulers of India Series, edited by Dr. Hunter; Peshwa's Bakhar, History of Mysore by my esteemed friend Mr. M. Shamarao, M. A., Grant Duff's History of the Maharattas, Dow's History of Hindoostan, etc. I therefore take this opportunity of expressing my obligation to the authors, editors, and publishers of these valuable works.

I also take this opportunity of expressing my sincere thanks to Mr. Cowasjee, Jamesetjee, Jejeebohy, who kindly accepted the dedication of this book.

Any suggestions for the improvement of the book would be most thankfully received.

KÁMANAKATTI, DHARWAD.
*27th March 1898.*

***R. H. D.***

# PREFACE.

For the information contained in the following pages, I am mainly indebted to Elphinstone's History of India, Macaulay's Essays, etc. These lives were originally written for the use of my pupils in the Kannada Training College. I have now at the request of my friends and pupils revised and published them.

There may be several defects in the following lives. But if my beloved countrymen patronize this little book as liberally as they did my previous publications, I shall, ere long, bring out an improved and enlarged edition of it. The life of Akbar has been omitted, as it is shortly to appear in a separate volume.

Any suggestions for the improvement of the book will be most thankfully received.

DHARWAD,
*7th May 1892.*

***R. H. D.***

# CONTENTS.

# ಅನುಕ್ರಮಣಿಕೆ.

# ಚರಿತ್ರಸಂಗ್ರಹ

## ಮೊದಲನೆಯ ಭಾಗ.

### ೧ನೆಯ ಪ್ರಕರಣ, ಮೊಗಲರು.




೧. ಬಾಬರ (ಹುಲಿ).

-ಭರತಖಂಡದಲ್ಲಿ ಆಳಿದ ಪರದೇಶದ ಅರಸುಮನೆ
ತನಗಳಲ್ಲಿ ಮೋಗಲ್‌ಮನೆತನವೇ ಹೆಚ್ಚು ಹೆಸರು

ವಾಸಿಯಾದುದು. ಈಮನೆತನವನ್ನು ಸ್ಥಾಪಿಸಿದವನು ಬಾಬರನು. ಇವನ ಚರಿತ್ರವೇನಂದರೆ: ತೈಮೂರಲಿಂಗನ ಮರಿಮಗನಾದ **ಅಬು ಸಯಿದನಿಗೆ** ೧೧ ಮಂದಿ ಗಂಡುಮಕ್ಕಳಿದ್ದರು. ಅವರೊಳಗೆ ಆರನೆಯವನಾದ **ಅಮೀರಶೇಖಮಿರ್ಝನು** ಇಂಡಿಜಾ-ಫರಗಣಾಪ್ರಾಂತಗಳ ಒಡೆಯನಾಗಿದ್ದನು. ಅವನು ಕಾಟಕ್‌ನೆಗರ ಎಂಬಾಕೆಯನ್ನು ಮದುವೆಯಾಗಿದ್ದನು. ಅವರಿಬ್ಬರಿಂದ ಬಾಬರನು **ಕೇಶವೆಂಬ** ಗ್ರಾಮದಲ್ಲಿ ಹುಟ್ಟಿದನು (೧೪೮೨). ಅಮೀರಶೇಖಮಿರ್ಝನು ೧೪೯೪ರಲ್ಲಿ ಮಡಿದನು. ಆಗ ಬಾಬರನು ಚಿಕ್ಕವನಿದ್ದುದರಿಂದ ಅವನ ಕಕ್ಕಂದಿರು ಅವನ ನಾಡಿನ ದೊಡ್ಡ ಭಾಗವನ್ನು ಕಸಕೊಂಡರು. ಆದರೂ ಹೆದರದೆ, ಬಾಬರನು ತನ್ನ ಉಳಿದಷ್ಟು ರಾಜ್ಯದಲ್ಲಿ ವ್ಯವಸ್ಥೆಯನ್ನುಂಟುಮಾಡಿ, **ಸಮರಕಂದ** ಪಟ್ಟಣವನ್ನು ಮುತ್ತಿ, ಅದನ್ನು ಹಿಡಿದುಕೊಂಡನು (೧೪೯೭). ಆಗ ಅವನು ತನ್ನ ಪಡೆಗಾರರಿಗೆ ಆಪಟ್ಟಣವನ್ನು ಸುಲಿಯಗೊಡಲಿಲ್ಲ. ಆದ್ದರಿಂದ ಸಾವಿರಾರು ಮಂದಿ ದಂಡಾಳುಗಳು ಅವನನ್ನು ಬಿಟ್ಟು ಹೋದರು. ಅಷ್ಟರಲ್ಲಿ ಅವನ ತಮ್ಮನಾದ **ಜಹಂಗೀರನು** ಫರಗಣಾಪ್ರಾಂತವನ್ನೊಳನುಗ್ಗಿ, ಬಾಬರನ ರಾಜಧಾನಿಯಾದ ಇಂಡಿಜಾವನ್ನು ಹಿಡಿದುಕೊಂಡನೆಂಬ ಸುದ್ದಿಯು ಬಂತು. ಆಗ ಬಾಬರನು ಅವಸರದಿಂದ ಸಮರ್ಕಂದವನ್ನು ಬಿಟ್ಟು ಅಲ್ಲಿಗೆ ಹೋಗಲು, ಇಂಡಿಜಾವು ಅವನ ಕಯ್ಸೇರಲಿಲ್ಲ, ಮತ್ತು ಸಮರ್ಕಂದವು ಹಗೆಗಳ ವಶವಾಯಿತು.

ಇಷ್ಟಾದರೂ ಬಾಬರನು ಎದೆಗುಂದಲಿಲ್ಲ. ಅವನು ಹೊಸ ದಂಡನ್ನು ಕೂಡಿಸಿ, ಜಹಂಗೀರನಿಂದ ಇಂಡಿಜಾ-ಫರಗಣಾಗಳನ್ನು ತಿರುಗಿ ತೆಗೆದುಕೊಂಡು, ಸಮರ್ಕಂದವನ್ನು ಹಿಡಿದುಕೊಳ್ಳಲಿಕ್ಕೆ ಎರಡು ಸಾರೆ ದಂಡೆತ್ತಿ ಹೋದನು. ಆದರೆ ಆಯತ್ನದಿಂದ ಏನೂ ಫಲವಾಗಲಿಲ್ಲ. ಆದರೂ ಅವನು ನಿರಾಶನಾಗದೆ ಮೂರನೆಯ ಸಾರೆ ಯತ್ನಮಾಡಿ, ಆಹೆಸರಾದ ಪಟ್ಟಣವನ್ನು ವಶಮಾಡಿಕೊಂಡು,

ಪಿತ್ರಾರ್ಜಿತ-ರಾಜ್ಯವನ್ನು ತನ್ನ ತಮ್ಮನಾದ ಜಹಂಗೀರನಿಗೆ ಕೊಟ್ಟನು (೧೫೦೦).

ಮುಂದೆ ಬಾಬರನು ಬಹಳ ದಿವಸ ನಿಶ್ಚಿಂತನಾಗಿ ಆಪಟ್ಟಣದಲ್ಲಿರಲಿಲ್ಲ. ಯುಜಬೆಕ್ಕರೆಂಬ ಮುಸಲ್ಮಾನರು ದೊಡ್ಡ ದಂಡಿನೊಡನೆ ಸಮರ್ಕಂದದ ಮೇಲೆ ಸಾಗಿ ಬಂದರು. ಬಾಬರನು ತಾನು ಮೊದಲು ಆಲೋಚಿಸಿದಂತೆ ಹಗೆಗಳಿಗಿದುರಾಗಲಿಕ್ಕೆ ಬುಖಾರಾದ ಹಾದಿಯ ಮೇಲೆ ನಿಂತಿದ್ದರೆ, ಯುಜಬೆಕ್ಕರ ಆಟವು ಸಾಗುವಂತೆ ಇದ್ದಿಲ್ಲ. ಆದರೆ ಹಾಗೆ ಮಾಡದೆ ಅವನು ಜೋಯಿಸರ ಮಾತು ಕೇಳಿ, ಮುಂದಕ್ಕೆ ಸಾಗಿದ್ದರಿಂದ ಸೋತು ಕೋಟೆಯನ್ನು ಸೇರಬೇಕಾಯಿತು. ಯುಜಬೆಕ್ಕರು ೫ ತಿಂಗಳ ವರೆಗೆ ಎಡೆಬಿಡದೆ ಅದನ್ನು ಮುತ್ತಿದ್ದರಿಂದ ಎಲ್ಲ ಅನ್ನಸಾಮಗ್ರಿಯು ತೀರಿಹೋಯಿತು. ಆದಕಾರಣ ಬಾಬರನು ನಿರುಪಾಯನಾಗಿ ಸಮರ್ಕಂದವನ್ನು ಹಗೆಗಳಿಗೊಪ್ಪಿಸಿ, ಮುಂದೆ ೩ ವರುಷಗಳ ವರೆಗೆ ರಾಜ್ಯವಿಲ್ಲದೆ ಗುಡ್ಡಗಾಡುಗಳಲ್ಲಿ ಕಾಲಕಳೆದನು (೧೫೦೧–೧೫೦೪).

ಬಳಿಕ ಬಾಬರನು ತುರ್ಮುಜದ ಅರಸನ ಉಪದೇಶದಂತೆ ಕಾಬೂಲಕ್ಕೆ ದಂಡೆತ್ತಿಹೋಗಿ ಆರಾಜ್ಯವನ್ನು ಗೆದ್ದುಕೊಂಡನು (ಅಕ್ಟೋಬರ ೧೫೦೪). ಈಕಾಲದಿಂದ ಅವನ ದೆಸೆಯು ತಿರುಗಿತೆನ್ನಬಹುದು.

ಮುಂದೆ ಬಾಬರನು ಖಿಲಾತ, ಗಜನಿ, ಕಂದಹಾರ ಮುಂತಾದ ಪ್ರಾಂತಗಳನ್ನು ಹಿಡಿದುಕೊಂಡು, ೧೫೦೯ರಲ್ಲಿ ಕಾಬೂಲದೊಳಿದ್ದ ಬಂಡಾಯವನ್ನು ಮುರಿದನು; ಮರುವರುಷ ಅವನ ಕಡುಹಗೆಯೂ ಯುಜಬೆಕ್ಕರ ದಳವಾಯಿಯೂ ಆದ ಸಾಯಬಾನಿಯು ಸತ್ತುದರಿಂದ ಅವನಿಗೆ ಮತ್ತೆ ಧೈರ್ಯಬಂತು. ಆದ್ದರಿಂದ ಅವನು ಇರಾಣದ ಬಾದಶಹನ ಸಹಾಯತೆಗೆದುಕೊಂಡು, ಯುಜಬೆಕ್ಕರನ್ನು ಸೋಲಿಸಿ, ಬುಖಾರಾ-ಸಮರ್ಕಂದಗಳನ್ನು ಹಿಡಿದುಕೊಂಡನು (೧೫೧೧). ಆದರೆ ಆಪ್ರಾಂತಗಳು ಬಹುದಿವಸ ಅವನ ವಶದಲ್ಲುಳಿಯಲಿಲ್ಲ. ಮುಂದೆ ೯ ತಿಂಗಳಲ್ಲೇ ಯುಜಬೆಕ್ಕರು

ದಂಡುಕಟ್ಟಿಕೊಂಡು ಬಂದು, ಅವುಗಳನ್ನು ಹಿಡಿದುಕೊಂಡರು. ಬಳಿಕ ಬಾಬರನು ಇರಾಣದವರ ನೆರವಿನಿಂದ ಅವುಗಳನ್ನು ವಶಮಾಡಿಕೊಳ್ಳಲಿಕ್ಕೆ ಮಾಡಿದ ಎತ್ತುಗಡೆಯು ವ್ಯರ್ಥವಾಯಿತು, ಮತ್ತು ಅವನ ದಂಡಿನವರು ಅವನನ್ನು ಕೊಲ್ಲಲಿಕ್ಕೆ ಒಳಸಂಚು ಮಾಡಿದ್ದರಿಂದ ಅವನು ಒಬ್ಬನೇ ಕಾಬೂಲಕ್ಕೆ ಓಡಿಹೋದನು (೧೫೧೭).

ಇದೇ ಕಾಲಕ್ಕೆ ಬಾಬರನ ದೃಷ್ಟಿಯು ನಮ್ಮ ದೇಶದ ಮೇಲೆ ಬಿತ್ತು. ಅದು ಹೇಗಂದರೆ:—ಪಂಜಾಬ, ವಾಯುವ್ಯಪ್ರಾಂತ, ಮಧ್ಯಹಿಂದುಸ್ಥಾನ, ಪಶ್ಚಿಮವಿಹಾರ ಈಪ್ರಾಂತಗಳೊಡೆಯನಾದ **ಶಿಕಂದರ ಲೋಡಿಯು** ೧೫೧೭ರಲ್ಲಿ ಸತ್ತನು. ಆಗ ಬೇರೆ ಬೇರೆ ಪ್ರಾಂತಗಳ ಸುಬೇದಾರರು ಶಿಕಂದರ ಬಾದಶಹನ ಮಕ್ಕಳಾದ **ಇಬ್ರಾಹಿಮ-ಜಲಾಲರೊಳಗೆ** ಜಗಳಹುಟ್ಟಿಸಿ, ತಾವು ಸ್ವತಂತ್ರರಾಗಲಿಕ್ಕೆ ಹವಣಿಸಿದರು. ಆದ್ದರಿಂದ ಇಬ್ರಾಹಿಮನು ತನ್ನ ತಮ್ಮನಾದ ಜಲಾಲನನ್ನು ಕೊಲ್ಲಿಸಿ, ಸರದಾರರ ಪಾರಪತ್ಯಮಾಡಲಾರಂಭಿಸಿದನು. ಈಯೊಳಜಗಳದ ಸುದ್ದಿಯನ್ನು ಕೇಳಿ ಬಾಬರನು ಸಮರ್ಕಂದದ ಉಸಾಬರಿಯನ್ನು ಬಿಟ್ಟು, ಈದೇಶವನ್ನೊಳನುಗ್ಗಿ, ಜೆಹಲಮ್ ಹೊಳೆಯ ವರೆಗೆ ರಾಜ್ಯವನ್ನು ಗೆದ್ದುಕೊಂಡು, ತಾನು ಗೆದ್ದ ಸೀಮೆಗೆ ಒಬ್ಬ ಸುಬೇದಾರನನ್ನು ನಿಯಮಿಸಿ, ಮರಳಿ ಕಾಬೂಲಕ್ಕೆ ಹೋದನು (೧೫೧೯). ಅದೇ ವರುಷ ಅವನು ಲಾಹೋರವನ್ನು ತೆಗೆದುಕೊಳ್ಳುವ ಉದ್ದೇಶದಿಂದ ಮತ್ತೊಮ್ಮೆ ದಂಡೆತ್ತಿ ಪೇಶಾವರದ ವರೆಗೆ ಬಂದನು; ಆದರೆ ಅಷ್ಟರಲ್ಲಿ ಪರರಾಜರು ತನ್ನ ರಾಜ್ಯವನ್ನೊಳನುಗ್ಗಿದರೆಂದು ಸುದ್ದಿ ಬಂದುದರಿಂದ ಮರಳಿ ಹೋದನು. ಮರುವರುಷ ಮೂರನೆಯ ಸಾರೆ ಈ ದೇಶವನ್ನೊಳನುಗ್ಗಿ, ಪಾಲಕೋಟ-ಸೈದಪುರಗಳನ್ನು ಹಿಡಿದುಕೊಳ್ಳುವಷ್ಟರಲ್ಲಿ ಕಂದಹಾರದವರು ತನ್ನ ದೇಶದ ಮೇಲೆ ದಾಳಿಮಾಡಿದ್ದರಿಂದ ತಿರುಗಿ ತನ್ನ ದೇಶಕ್ಕೆ ಹೋಗಿ, ಕಂದಹಾರವನ್ನು ೩ ವರುಷಗಳ ವರೆಗೆ ಮುತ್ತಿ ಹಿಡಿದುಕೊಂಡನು (೧೫೨೩).

ಈಗೆಲವಿನಿಂದ ಬಾಬರನ ಕೀರ್ತಿಯು ಈದೇಶದಲ್ಲೆಲ್ಲ ಹ

ಬ್ಬಿತು. ಆದ್ದರಿಂದ ಪಂಜಾಬದ ಸುಬೇದಾರನಾದ **ದೌಲತ್ತಖಾನ ಲೋದಿಯು** ಇಬ್ರಾಹಿಮ ಬಾದಶಹನಿಗೆ ಹೆದರಿ, ಬಾಬರನ ನೆರವನ್ನು ಬೇಡಿ, "ತೂಕಡಿಸುವವರಿಗೆ ಹಾಸಿಗೆ ಹಾಕಿ ಕೊಟ್ಟಂತೆ" ಮಾಡಿದನು. ಆಗ ಬಾಬರನು ಅತ್ಯಾನಂದದಿಂದ ಸಹಾಯಮಾಡಲಿಕ್ಕೊಡಂಬಟ್ಟು, ಈದೇಶಕ್ಕೆ ದಂಡೆತ್ತಿ ಬಂದು, ಲಾಹೋರವನ್ನು ಹಿಡಿದುಕೊಂಡು, ಸುಲ್ತಾನಪುರದ ವರೆಗೆ ಹೋದನು. ಆದರೆ ಅಷ್ಟರಲ್ಲಿ ದೌಲತ್ತಖಾನನಿಗೂ ಅವನಿಗೂ ಜಗಳ ಬಂದುದರಿಂದ, ಮುಂದೆ ಹೋಗಲಿಕ್ಕೆ ಧೈರ್ಯ ಸಾಲದೆ, ಅವನು ಮರಳಿ ಕಾಬೂಲಕ್ಕೆ ತೆರಳಿದನು (೧೫೨೪).

ಮರುವರುಷ ಇಬ್ರಾಹಿಮ ಬಾದಶಹನ ತಮ್ಮನಾದ **ಅಲ್ಲಾವುದ್ದೀನನು** ಸಹಾಯಬೇಡಿದ್ದರಿಂದ, ಬಾಬರನು ಹುಮಾಯುನನೊಡನೆ ೫ನೆಯ ಸಾರೆ ಈದೇಶದ ಮೇಲೆ ದಂಡೆತ್ತಿ ಬಂದು, ದಿಲ್ಲಿಯ ವಾಯುವ್ಯಕ್ಕೆ ೫೩ ಮೈಲಿಗಿರುವ **ಪಾಣಿಪತದಲ್ಲಿ** ಪಾಳಯಕಟ್ಟಿಕೊಂಡು ನಿಂತನು. ಆಹೆಸರಾದ ರಣಭೂಮಿಯಲ್ಲಿ ಬಾಬರನಿಗೂ ಇಬ್ರಾಹಿಮನಿಗೂ ಕಡುಕಾಳಗವೆಸಗಿತು (೨೧ನೆಯ ಎಪ್ರಿಲ ೧೫೨೬). ಅದರಲ್ಲಿ ಇಬ್ರಾಹಿಮನು ಸತ್ತನು. ಬಳಿಕ ಜಯಶಾಲಿಯಾದ ಬಾಬರನು ೨೪ನೆಯ ಎಪ್ರಿಲ ದಿವಸ ದಿಲ್ಲಿಯನ್ನೂ ೪ನೆಯ ಮೇ ದಿವಸ ಆಗ್ರಾವನ್ನೂ ಹಿಡಿದುಕೊಂಡನು.

ಉತ್ತರಹಿಂದುಸ್ಥಾನದಲ್ಲಿ ಮುಸಲ್ಮಾನರು ನೂರಾರು ವರುಷ ರಾಜ್ಯಭಾರವ ಮಾಡುತ್ತಿದ್ದರೂ, ಅವರ ಆಳಿಕೆಯು ಅಲ್ಲಿ ನೆಲೆಗೊಂಡಿದ್ದಿಲ್ಲ. ಈಗ ಸ್ವಾಭಾವಿಕವಾಗಿ ಮುಸಲ್ಮಾನರೂ ಹಿಂದೂಜನರೂ ಬಾಬರನ ವಿರೋಧಿಗಳಾದರು. ಇದಲ್ಲದೆ ಗುಡ್ಡಗಾಡಿನಲ್ಲಿ ಜನ್ಮ ಕಳೆದ ಬಾಬರನ ದಳವಾಯಿಗಳಾದರೂ ತಮ್ಮ ನಾಡಿಗೆ ತಿರುಗಿ ಹೋಗಲಿಕ್ಕೆ ಹಾತೊರೆಯುತ್ತಿದ್ದರು. ಆದರೆ ಬಾಬರನ ಮನಸ್ಸಿನಲ್ಲಿ ಈಸಂಪತ್ತುಳ್ಳ ರಾಜ್ಯವನ್ನು ಬಿಟ್ಟುಹೋಗುವದಿದ್ದಿಲ್ಲ. ಆದ್ದರಿಂದ ಅವನು ತನ್ನ ದಳವಾಯಿಗಳನ್ನು ಇಲ್ಲಿಯೇ ನಿಲ್ಲಲಿಕ್ಕೆ ಒಡಂ

ಬಡಿಸಿ, ಈದೇಶದ ಬೇರೆಬೇರೆ ಅರಸರನ್ನು ತನ್ನ ಮಾಂಡಲಿಕರನ್ನು ಮಾಡಲಿಕ್ಕೆ ಎತ್ತುಗಡೆಮಾಡಿದನು.

ಈಕಾಲಕ್ಕೆ ಚಿತ್ತೂರಿನ ಅರಸನಾದ ಸಂಗರಾಜನು ರಜಪೂತರೊಳಗೆ ಬಲಿಷ್ಠ ಅರಸನಾಗಿದ್ದನು. ಅವನು ಬಕರವಳಿ, ಚಾತವಳಿ ಎಂಬ ಎರಡು ಸ್ಥಳಗಳಲ್ಲಿ ಆದ ಕಾಳಗಗಳಲ್ಲಿ ಇಬ್ರಾಹಿಮ ಲೋದಿಯನ್ನು ಸೋಲಿಸಿ, ತನ್ನ ರಾಜ್ಯವನ್ನು ಬೆಳೆಸಿದ್ದನು. ಬಾಬರನು ದಿಲ್ಲಿಯನ್ನು ತೆಗೆದುಕೊಂಡ ಬಳಿಕ ಸಂಗರಾಜನು ರಂಥಂಬರದ ಮೂಡಣಕ್ಕಿದ್ದ ಕಂದಹಾರ ಕೋಟೆಯನ್ನು ಹಿಡಿದುಕೊಂಡನೆಂಬ ಸುದ್ದಿಯು ಬಂತು. ಆಗ ಹುಮಾಯುನನು ಜಾನಪುರ, ದುವಾಬ ಮುಂತಾದ ಪ್ರಾಂತಗಳನ್ನು ಕಯ್ವಶಮಾಡಿಕೊಳ್ಳಲಿಕ್ಕೆ ಹೋಗಿದ್ದನು. ಅವನು ದಿಗ್ವಿಜಯಮಾಡಿಕೊಂಡು ತಿರುಗಿ ಬಂದ ಕೂಡಲೆ ಬಾಬರನು ಅವನೊಡನೆ ಸಂಗರಾಜನ ಮೇಲೆ ದಂಡೆತ್ತಿ ಹೋಗಿ, ಸಿಕ್ರಿಯೆಂಬಲ್ಲಿ ಪಾಳಯಹಾಕಿದನು. ಆಗ ಸಂಗರಾಜನು ಬಿಸ್ವಾರದಲ್ಲಿದ್ದನು. ರಜಪೂತರಿಗೂ ಮೊಗಲರಿಗೂ ಆದ ಸಣ್ಣಪುಟ್ಟ ಕಾಳಗಗಳಲ್ಲಿ ರಜಪೂತರಿಗೆ ಜಯ ಬಂದುದರಿಂದ ಮೊಗಲರು ಎದೆಗುಂದಿದರು.*

ಮುಂದೆ ತುಸು ದಿವಸದಲ್ಲೇ ರಜಪೂತರಿಗೂ ಮೊಗಲರಿಗೂ ಸಿಕ್ರಿಯಲ್ಲಿ ಭಯಂಕರವಾದ ಕದನವೆಸಗಿತು (೧೬ನೆಯ ಮಾರ್ಚ ೧೫೨೭); ಅದರಲ್ಲಿ ರಜಪೂತರು ಪೂರ್ಣವಾಗಿ ಸೋತರು; ಸಂಗರಾಜನು ಗುಂಡು ತಾಕಿ ರಣಭೂಮಿಯಲ್ಲಿ ಸತ್ತನು. ಬಳಿಕ ಜಯಶಾಲಿಯಾದ ಬಾಬರನು ಚಾಂದೇರಿಯ ಕೋಟೆಯನ್ನು ತೆಗೆದುಕೊಂಡು ತಿರುಗಿ ಬರುವಾಗ ಲೋದಿಯ ಪಕ್ಷದವರನ್ನು

---

*ಆಗ ಬಾಬರನು ಈಸೋಲುಗಳು ತಾನು ಕುರಾಣದ ವಿರುದ್ಧವಾಗಿ ಸರಾಯಿ ಕುಡಿಯುತ್ತಿರುವದರಿಂದ ಬಂದಿರಬಹುದೆಂದು ಎಣಿಸಿ, ತನ್ನ ಸರಾಯಿ ಕುಡಿಯುವ ಚಿನ್ನದ ಪಾತ್ರೆಗಳನ್ನು ತರಿಸಿ, ಅವುಗಳನ್ನು ಬಡಬಗ್ಗರಿಗೆ ದಾನಮಾಡಿಬಿಟ್ಟನು. ಬಾಬರನ ಈನಿಶ್ಚಯವನ್ನು ನೋಡಿ, ಅವನ ೪೦೦ ಮಂದಿ ಸರದಾರರು ಸರಾಯಿಕುಡಿಯಲಿಕ್ಕಿಲ್ಲೆಂದು ಆಣೆಯಿಟ್ಟುಕೊಂಡರು.

ಸೋಲಿಸಿ, ಲಖನೌ ಪಟ್ಟಣವನ್ನು ಹಿಡಿದುಕೊಂಡು, ಮರಳಿ ಆ ಗ್ರಾಕ್ಕೆ ಬಂದನು.

ಇಷ್ಟಾದರೂ ಬಾಬರನಿಗೆ ವಿಶ್ರಾಂತಿಯು ದೊರೆಯಲಿಲ್ಲ. ಜಾನಪೂರ, ಬಿಹಾರ ಮುಂತಾದ ಪ್ರಾಂತಗಳಲ್ಲಿದ್ದ ಮುಸಲ್ಮಾನರು ಶೀರಖಾನನೆಂಬ ಒಬ್ಬ ಬಾಬರನ ದಳವಾಯಿಯನ್ನೊಡಗೊಂಡು, ಲೋಡಿ ವಂಶದವನೊಬ್ಬನನ್ನು ಆಪ್ರಾಂತಗಳ ಅರಸನನ್ನು ಮಾಡುವ ಆಲೋಚನೆಮಾಡಿದರು. ಈಸುದ್ದಿಯು ಬಂದ ಕೂಡಲೆ ಬಾಬರನು ಹೊತ್ತುಗಳೆಯದೆ ದಂಡೆತ್ತಿಹೋಗಿ, ಹೆಸರಾದ ಚಾನರದ ಕೋಟೆಯನ್ನು ಹಿಡಿದುಕೊಂಡು, ಶೀರಖಾನನನ್ನು ಕಾಶಿಯಿಂದಟ್ಟಿ, ತಾನು ವಿಹಾರದ ಒಡೆಯನೆಂದು ಹೊಗಳಿಸಿಕೊಂಡನು (ಫೆಬ್ರುವರಿ ೧೫೨೯). ಬಳಿಕ ಬಂಗಾಲದ ನವಾಬನಾದ ನಸರತ್ತಶಹನು ಲೋಡಿಯ ಪಕ್ಷದವರಿಗೆ ನೆರವಾದ್ದರಿಂದ ಬಾಬರನು ಗಂಗಾ-ಗೋಗ್ರಾ ಹೊಳೆಗಳ ಕಾಳಗದಲ್ಲಿ ಅವನನ್ನು ನೆರೆಸೋಲಿಸಿ, ಪಶ್ಚಿಮ ವಿಹಾರಪ್ರಾಂತವನ್ನು ಸೆಳಕೊಂಡು, ಅವನ ಕೂಡ ಒಡಂಬಡಿಕೆಯನ್ನು ಮಾಡಿದನು.

ಈಪ್ರಕಾರ ಜಯಹೊಂದಿ ತಿರುಗಿ ಬಂದ ಬಳಿಕ ಬಾಬರನು ಬಹಳ ದಿವಸ ಬಾಳಲಿಲ್ಲ. ಸ್ವಲ್ಪ ದಿವಸದಲ್ಲೇ ಅವನ ಮೆಯ್ಯಲ್ಲಿ ರೋಗ ಸೇರಿತು. ಆಗ ಹುಮಾಯುನನು ಬದಕ್ಷಾನದ ಸುಬೇದಾರನಾಗಿದ್ದನು. ಅವನು ತಂದೆಯು ಬೇನೆಬಿದ್ದ ಸುದ್ದಿಯನ್ನು ಕೇಳಿದ ಕೂಡಲೆ, ತನ್ನ ತಮ್ಮನಾದ ಹಿಂಡಾಲನಿಗೆ ಆರಾಜ್ಯವನ್ನೊಪ್ಪಿಸಿ ತಾನು ಆಗ್ರಾಕ್ಕೆ ಬಂದನು. ಮುಂದೆ ಕೆಲವು ದಿವಸಗಳಲ್ಲಿ ಬಾಬರನಿಗೆ ತುಸು ಗುಣವಾಯಿತು. ಮತ್ತು ಕರ್ಮಧರ್ಮಸಂಯೋಗದಿಂದ ಹುಮಾಯುನನಿಗೆ ಬಹಳ ಜೇರು ಆಯಿತು. ಬಳಿಕ ಹುಮಾಯುನನಿಗೆ ಗುಣವಾಗುತ್ತ ನಡೆದಂತೆ ಬಾಬರನು ದಿನದಿನಕ್ಕೆ ಅಶಕ್ತನಾಗಲಾರಂಭಿಸಿದನು.* ಮುಂದೆ ಅದೇ

---

* ಹುಮಾಯುನನಿಗೆ ಜೇರು ಆದಾಗ ಬಾಬರನು ಒಬ್ಬ ಮುಸಲ್ಮಾನ ಸಾಧುವಿನ ಹೇಳಿಕೆಯಂತೆ ಅವನ ಹಾಸಿಗೆಯ ಸುತ್ತಲು ಮೂರು ಪ್ರದಕ್ಷಿಣೆಮಾಡಿದನೆಂ

ಬೇನೆಯಿಂದ ಅವನ ಅಂತವಾಯಿತು (೨೬ನೆಯ ದಶಂಬರ ೧೫೩೦). ಬಾಬರನ ಇಚ್ಛೆಯಂತೆ ಅವನ ಹೆಣವು ಕಾಬೂಲದಲ್ಲಿ ಹುಗಿಯಲ್ಪಟ್ಟಿತು.

ಬಾಬರನು ಕಡುಗಲಿಯೂ ಸಾಹಸಿಯೂ ಆಸಕ್ತಿಯುಳ್ಳವನೂ ಉದ್ಯೋಗಿಯೂ ಮಮತೆಯುಳ್ಳವನೂ ಆಗಿದ್ದನೆಂದು ಅವನ ಚರಿತ್ರದಿಂದ ಸ್ಪಷ್ಟವಾಗಿ ಕಾಣುತ್ತದೆ. ಈ ಗುಣಗಳಲ್ಲದೆ ಅವನಲ್ಲಿ ನ್ಯಾಯಬುದ್ಧಿಯೂ ದಯಾಲುತನವೂ ಕವಿತಾಚಾತುರ್ಯವೂ ಇದ್ದವು. ಅವನಲ್ಲಿ ದುರಭಿಮಾನವು ಎಳ್ಳಷ್ಟಾದರೂ ಇದ್ದಿಲ್ಲ. ಆದ್ದರಿಂದ ಅವನು ಸ್ವಚರಿತ್ರದಲ್ಲಿ ತನ್ನ ಗುಣದೋಷಗಳನ್ನು ಮಾಜದೆ ಬರೆದಿಟ್ಟಿದ್ದಾನೆ. ಅವನು ವಿಚಾರಿಯಾಗಿದ್ದರೂ ಹೆಣ್ಣುಹೆಂಡರುಗಳಿಗೆ ಮರುಳಾಗಿದ್ದನು.*

---

ತಲೂ ಅದರಿಂದ ಹುಮಾಯನನ ರೋಗವು ಬಾಬರನ ಮೈಯ್ಯಲ್ಲಿ ಸೇರಿತೆಂತಲೂ ಕೆಲ ಮುಸಲ್ಮಾನ ಗ್ರಂಥಕರ್ತರು ಬರೆಯುತ್ತಾರೆ.

* ಹುಮಾಯನ, ಸೇಲಿಮ್, ಶಹಾಜಹಾನ ಇವರ ಬಗ್ಗೆ ಮೋಗಲ್ ಬಾದಶಾಹಿ ಪೂರ್ವಾರ್ಧವನ್ನೂ, ಅಕಬರನ ಬಗ್ಗೆ ಅಕಬರ ಚರಿತ್ರವನ್ನೂ ನೋಡಿರಿ.




## ೨. ನೂರಜಹಾನ ರಾಣಿಯು.

ನಮ್ಮ ಈಭರತಖಂಡದಲ್ಲಿ ಎಷ್ಟೋ ಜನ ಬಡಬಗ್ಗರಾದ ಗಂಡಸರು ತಮ್ಮ ಗುಣಗಳಿಂದ ಅರಸುತನಕ್ಕೇರಿದ ಉದಾಹರಣಗಳುಂಟು. ಪೌರಾಣಿಕಕಾಲದಲ್ಲಿ ಅಂಬಿಗರಿಂದ ಸಾಕಲ್ಪಟ್ಟ ಕರ್ಣನು ಅಂಗದೇಶದ ಅರಸನಾದನು. ಐತಿಹಾಸಿಕಕಾಲದಲ್ಲಿ **ಹುಕ್ಕ, ಬುಕ್ಕ, ಶಿವಾಜಿ, ಹೈದರಅಲ್ಲಿ, ಬಾಳಾಜಿ ವಿಶ್ವನಾಥ** ಮುಂತಾದ ಹಲವು ಜನರು ತಮ್ಮ ಗುಣಸಾಮರ್ಥ್ಯದಿಂದ ಅರಸರಾಗಿ ಹೋದರು. ಆದರೆ ಹೆಂಗಸರಲ್ಲಿ ಈತರದ ಉದಾಹರಣಗಳು ಬಹಳ ಅಪರೂಪವಾಗಿರುತ್ತವೆ. ಮರಾಟರಲ್ಲಿ **ತಾರಾಬಾಯಿಯೂ ಅಹಲ್ಯಾ**

**ಬಾಯಿಯೂ** ಹೆಸರಾದರು. ಹಾಗೆಯೇ ಮುಸಲ್ಮಾನರಲ್ಲಿ **ಚಾಂದಬೀಬಿಯು** ಪ್ರಸಿದ್ಧಳಾದಳು. ಆದರೆ ಇವರೆಲ್ಲರು ಅರಸುಮನೆತನಕ್ಕೆ ಸೇರಿದವರಾದ್ದರಿಂದ ಇವರ ಚರಿತ್ರಗಳು ತೀರ ಬಡ ತಾಯಿತಂದೆಗಳಿಂದ ಹುಟ್ಟಿ, ಹಿಂದುಸ್ಥಾನದ ಸಾರ್ವಭೌಮನ ರಾಣಿಯಾದ **ನೂರಜಹಾನಳ** ಚರಿತ್ರದಷ್ಟು ಮನೋರಂಜಕವಾಗಲಾರವು. ಆದ್ದರಿಂದ ನೂರಜಹಾನರಾಣಿಯ ಚರಿತ್ರವನ್ನು ಇಲ್ಲಿ ಸಂಕ್ಷೇಪವಾಗಿ ಕೊಡುತ್ತೇವೆ.

೧೬ನೆಯ ಶತಕದ ಕೊನೆಯಲ್ಲಿ ಇರಾಣದೇಶದೊಳಗೆ ೨ನೆಯ ಇಸ್ಮಾಯಿಲನೆಂಬೊಬ್ಬ ಹೇಡಿಯಾದ ಅರಸನು ಆಳುತ್ತಿದ್ದನು. ಆಕಾಲಕ್ಕೆ ಆನಾಡಿನಲ್ಲಿ ಸ್ವಾಸ್ಥ್ಯವಿದ್ದಿಲ್ಲ. ಅದಕ್ಕೂ ಮೊದಲು ಇರಾಣದ ಬಾದಶಹನ ನೆರವಿನಿಂದ ಕಾಬೂಲವನ್ನು ತಿರುಗಿ ತೆಗೆದುಕೊಂಡ ಹುಮಾಯುನನು ಈಖಂಡದಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿದ ಸುದ್ದಿಯೂ ಅವನ ಮಗನಾದ ಅಕಬರನು ತಂದೆಯ ರಾಜ್ಯವನ್ನು ಬೆಳಿಸಿ, ಪರದೇಶದಿಂದ ಬಂದ ಗುಣವುಳ್ಳ ಪುರುಷರಿಗೆ ಉದಾರಾಶ್ರಯ ಕೊಡುತ್ತಾನೆಂಬ ಸುದ್ದಿಯೂ ಇರಾಣದೇಶದಲ್ಲೆಲ್ಲ ಹಬ್ಬಿತ್ತು. ಆದ್ದರಿಂದ ಎಷ್ಟೋ ಮಂದಿ ಸಾಹಸಿಕರು ತಮ್ಮ ದೇಶದಲ್ಲುಂಟಾದ ಅವ್ಯವಸ್ಥೆಗೆ ಬೇಸತ್ತು, ಇಲ್ಲಿ ಹೆಸರುವಾಸಿಗಳಾಗಬೇಕೆಂಬ ಕುತೂಹಲದಿಂದ ತಮ್ಮ ಜನ್ಮಭೂಮಿಯನ್ನು ಬಿಟ್ಟು ಬರಲಾರಂಭಿಸಿದರು. ಅವರೊಳಗೆ **ಖಾಜಾಅಯ್ಯಾಸ** (ಅಥವಾ ಮಿರ್ಜಾಗಿಯಾಸುದ್ದೀನ)ನೆಂಬವನೊಬ್ಬನಿದ್ದನು. ಅವನು ದೊಡ್ಡ ಮನೆತನದವನಾದರೂ ಆಕಾಲಕ್ಕೆ ತೀರ ಬಡವನಾಗಿದ್ದನು. ಆದ್ದರಿಂದ ಅವನು ತುಂಬಾ ಬಸುರಿದ್ದ ತನ್ನ ಹೆಂಡತಿಯನ್ನೂ ಹಿರಿಮಗನನ್ನೂ ಕಟ್ಟಿಕೊಂಡು, ಈಭರತಖಂಡದ ಹಾದಿಯನ್ನು ಹಿಡಿದನು. ದಾರಿಯಲ್ಲಿ ಅವನ ಹೆಂಡತಿಯು ಒಂದು ಹೆಣ್ಣುಗೂಸನ್ನು ಹೆತ್ತಳೆಂತಲೂ, ಆದಂಪತಿಗಳು ಆಕೂಸನ್ನು ಅಲ್ಲೇ ಬಿಟ್ಟು ಕೆಲದಾರಿ ಮುಂದೆ ಹೋಗಿ, ಮತ್ತೆ ಜೀವ ನಿಲ್ಲಲಾರದೆ ತಿರುಗಿ ಬಂದು, ಆ ಕೂಸನ್ನು ತೆಗೆದುಕೊಂಡು ಆಗ್ರಾಕ್ಕೆ ಹೋದರೆಂತಲೂ ಹೇಳು

ತ್ತಾರೆ. ಈಸಂಗತಿಯು ಸಟೆಯಾಗಲಿ ದಿಟವಾಗಲಿ, ಖಾಜಾ ಅಯ್ಯಾಸನು ಆಗ್ರಾಕ್ಕೆ ಬಂದು ಅಕಬರ ಬಾದಶಹನ ನೆರಳಿನಲ್ಲಿದ್ದಾಗ ಆವನಿಗೆ ಬಲು ಚೆಲುವೆಯಾದ ಒಂದು ವರುಷದ ಒಂದು ಹೆಣ್ಣುಗೂಸು ಇತ್ತು (೧೫೭೭). ಈಕೂಸೇ ಮುಂದೆ **ನೂರಜಹಾನ** ರಾಣಿಯೆಂದು ಹೆಸರಾಯಿತು.

ನೂರಜಹಾನಳ ಬಾಲ್ಯದ ಹೆಸರು **ಮ್ಹೇರ-ಉಲ್-ನಿಸ್ಸೆ** (ಹೆಂಗಸರೊಳಗೆ ಸೂರ್ಯಳು). ಖಾಜಾಅಯ್ಯಾಸನು ಅಕಬರನ ದರಬಾರದಲ್ಲಿ ಹೆಚ್ಚುಹೆಚ್ಚು ಘನತೆಯನ್ನು ಹೊಂದಿದ್ದರಿಂದ ಆವನು ತನ್ನ ಮಗಳಿಗೆ ಗಾಯನ ಚಿತ್ರಕಲಾ ಕಸೂತೆ ಹೊಲಿಗೆ ಕವಿತಾ ಮುಂತಾದ ಹೆಂಗಸರಿಗೆ ಯೋಗ್ಯವಾದ ವಿದ್ಯೆಗಳನ್ನು ಕಲಿಸಿದನು. ಆದ್ದರಿಂದ ಆಕೆಯ ಚೆಲುವಿಕೆಯು ಕುಂದಣ ಹಾಕಿದ ರತ್ನದಂತೆ ಒಪ್ಪಲಾರಂಭಿಸಿತು; ಮತ್ತು ದೊಡ್ಡ ದೊಡ್ಡ ಸರದಾರರ ಪ್ರಾಯದ ಮಕ್ಕಳು ಆಕೆಯನ್ನು ಮದುವೆಮಾಡಿಕೊಳ್ಳಬೇಕೆಂದು ಬಯಸಲಾರಂಭಿಸಿದರು. ಈ ಮೇಲಾಡುವವರಲ್ಲಿ ಬಾದಶಹನ ಮಗನಾದ ಸೇಲಿಮನು ಒಬ್ಬನಾಗಿದ್ದನು. ಅವನು ಒಂದು ದಿನ ಊಟದ ಸಮಾರಂಭದಲ್ಲಿ ಆಕಸ್ಮಾತ್ತಾಗಿ ಮ್ಹೇರ-ಉಲ್-ನಿಸ್ಸೆಯನ್ನು ನೋಡಿ, ಆಕೆಯ ಒನಪೊಯ್ಯಾರಬೆಡಗುಗಳಿಗೆ ಮೆಚ್ಚಿ ಮನಸೋತು ಮರುಳಾಗಿ, ಆಕೆಯನ್ನು ಮದುವೆ ಮಾಡಿಕೊಳ್ಳುವ ವಿಚಾರದಲ್ಲೇ ಕಾಲ ಕಳೆಯಲಾರಂಭಿಸಿದನು.

ಈಸುದ್ದಿಯು ಅಕಬರಬಾದಶಹನಿಗೆ ಕೂಡಲೆ ತಿಳಿಯಿತು. ಅವನು ಏನು ಕಾರಣ ಮ್ಹೇರ-ಉಲ್-ನಿಸ್ಸೆಯನ್ನು ಮದುವೆ ಮಾಡಿಕೊಳ್ಳಲಿಕ್ಕೆ ತನ್ನ ಮಗನಿಗೆ ಅಪ್ಪಣೆ ದಯಪಾಲಿಸಲಿಲ್ಲೆಂಬದರ ಬಗ್ಗೆ ಲೇಖಗಳೇನೂ ದೊರೆಯುವದಿಲ್ಲ. ಆಕೆಯನ್ನು ಲಗ್ನಮಾಡಿಕೊಂಡರೆ, ತನ್ನ ಮಗನು ವಿಷಯಾಸಕ್ತನಾಗಿ ರಾಜ್ಯದ ಪರವೆ ಇಲ್ಲದೆ ಕಾಲಕಳೆಯಬಹುದೆಂಬ ಅನುಮಾನದಿಂದಲೋ, ಈಮೊದಲೇ ತನ್ನ ಪ್ರಮುಖಸರದಾರನಾದ ರಾಜಾಮಾನಸಿಂಗನ ಮೊಮ್ಮಗಳನ್ನು ಸೇಲಿಮನಿಗೆ ಗೊತ್ತುಮಾಡಿದ್ದರಿಂದಲೋ, ಅಕಬರಬಾದಶ

ಹನು ಮ್ಹೇರ-ಉಲ್-ನಿಸ್ಸೆಯ ವಿವಾಹಕ್ಕೆ ಒಡಂಬಡದೆ, ಆಕೆಯು ನ್ನು ತನ್ನೊಬ್ಬ ಬಡ ಸರದಾರನಾದ ಅಲ್ಲಿಕುಲಿಬೆಗ್‌ಇಷ್ಟಾಜಲು ಎಂಬವನಿಗೆ ಮದುವೆ ಮಾಡಿಕೊಟ್ಟು, ಆದಂಪತಿಯನ್ನು ತನ್ನ ರಾಜಧಾನಿಯಿಂದ ದೂರದಲ್ಲಿದ್ದ ಬರ್ದವಾನಕ್ಕೆ ಕಳುಹಿಬಿಟ್ಟನು (೧೬೦೪)*



ಸೇಲಿಮ ಅಥವಾ ಜಹಂಗೀರ.

* ಮ್ಹೇರ-ಉಲ್-ನಿಸ್ಸೆಯ ಮದುವೆಗೂ ಬಾದಶಹನಿಗೂ ಸಂಬಂಧವೇನೆಂಬ ಪ್ರಶ್ನವು ವಾಚಕರ ಮನಸ್ಸಿನಲ್ಲಿ ಸ್ವಾಭಾವಿಕವಾಗಿ ಹುಟ್ಟಬಹುದು. ಇದರ ಕಾರಣವೇನಂದರೆ, ಮೊಗಲರು ಪರದೇಶದವರಾದ್ದರಿಂದ ತಮ್ಮ ಸರದಾರರು ತಮ್ಮ ಅಪ್ಪಣೆಯ ಹೊರತು ಶರೀರಸಂಬಂಧವನ್ನು ಮಾಡಕೂಡದೆಂದು ಕಟ್ಟುಮಾಡಿದ್ದರು; ಆದ್ದರಿಂದ ಖಾಜಾ-ಅಯ್ಯಾಸನು ಬಾದಶಹನ ಅಪ್ಪಣೆಯ ಮೇರೆಗೆ ತನ್ನ ಮಗಳನ್ನು

ಈಕಾಲಕ್ಕೆ ಸೇಲಿಮು-ಮ್ಹೆರ-ಉಲ್-ನಿಸ್ಸೆಯುವರ ಮನಸ್ಸಿನಲ್ಲಿ ಬಂದ ವಿಚಾರಗಳನ್ನು ಊಹಿಸಲಿಕ್ಕೆ ನಮಗೇನೂ ಆಧಾರವಿಲ್ಲ. ಆದರೂ ಸೇಲಿಮನು ಆಕೆಯನ್ನು ಕೂಡಲಿಕ್ಕೆ ಹೊಂಚುಹಾಕಿ ಕೊಂಡಿದ್ದನೆಂದು ಅವನ ಮುಂದಿನ ಕೃತಿಗಳಿಂದ ಅನುಮಾನ ಮಾಡಬಹುದು. ದೈವಯೋಗದಿಂದ ಸೇಲಿಮನಿಗೆ ಪರತಂತ್ರತನದ ಮೂಲಕವಾಗಿ ಆಕೆಯ ಸಂಬಂಧದಿಂದ ಬಹುದಿನ ಉಮ್ಮಳಿಸಬೇಕಾಗಲಿಲ್ಲ. ಏಕೆಂದರೆ ಮುಂದೆ ಒಂದು ವರುಷದಲ್ಲೇ ಅಕಬರಬಾದಶಹನು ಮರಣ ಹೊಂದಿದ್ದರಿಂದ ಸೇಲಿಮನು ಜಹಂಗೀರ (ಲೋಕದ ಜಯಶಾಲಿ)ನೆಂಬ ಬಿರುದಿನಿಂದ ಪಟ್ಟವೇರಿದನು (೨೧ನೆಯ ಅಕ್ಟೋಬರ ೧೬೦೫). ಬಾದಶಹನಾದ ಬಳಿಕ ಮ್ಹೆರ-ಉಲ್-ನಿಸ್ಸೆಯನ್ನು ತನ್ನರಮನೆಯಲ್ಲಿಟ್ಟುಕೊಳ್ಳುವ ಉದ್ದೇಶದಿಂದ ಅವನು ಮಾಡಿದ ಹಲವು ಕುಯುಕ್ತಿಗಳನ್ನು ಬೇರೆ ಕಡೆಯಲ್ಲಿ ವಿವರಿಸಿರುತ್ತೇವೆ.* ಆದ್ದರಿಂದ ಅವುಗಳನ್ನು ಮತ್ತೆ ಇಲ್ಲಿ ಬರೆಯುವುದು ಅವಶ್ಯವಿಲ್ಲ. ಆಪ್ರಯತ್ನಗಳೆಲ್ಲ ವ್ಯರ್ಥವಾದ ಬಳಿಕ ಜಹಂಗೀರನ ಪ್ರೀತಿಯ ಸುಬೇದಾರನಾದ ಕುತುಬನೆಂಬವನು ಬರ್ದವಾನಕ್ಕೆ ಹೋಗಿ ಅಲ್ಲಿಕುಲಿಬೆಗ್ ಇಸ್ತಾಜಲುವಿನೊಡನೆ ಕಾಲುಕೆದರಿ ಜಗಳತೆಗೆದನು, ಮತ್ತು ಆಜಗಳದಲ್ಲಿ ಅವರಿಬ್ಬರೂ ಮಡಿದರು (೧೬೦೭).

ಈಕಾಲಕ್ಕೆ ಮ್ಹೆರ-ಉಲ್-ನಿಸ್ಸೆಯ ಸಹನಶೀಲತೆಯೂ ಜಾಣ್ಮೆಯೂ ಕಂಡುಬಂದವು. ಆಕೆಯು ತನ್ನ ಗಂಡನು ಸತ್ತನೆಂದು ರಂಬಾಟವನ್ನು ಮಾಡಲಿಲ್ಲ, ಮತ್ತು ಬಾದಶಹನ ರಾಣಿಯಾಗುವೆನೆಂಬ ಬಯಲಾಶೆಗೆ ಒಳಗಾಗಿ ಹಿಗ್ಗಲಿಲ್ಲ. ಆಕೆಯು ತನ್ನ ಗಂಡನು

---

ಇಸ್ತಾಜಲುವನಿಗೆ ಕೊಟ್ಟನು. ಮುಂದೆ ಜಹಂಗೀರನ ಆಳಿಕೆಯಲ್ಲಿ ಮೊಹಬತ್ ಖಾನನೆಂಬ ಸರದಾರನು ಈ ತರದ ಅಪ್ಪಣೆಯನ್ನು ತೆಗೆದುಕೊಳ್ಳದೆ ತನ್ನ ಮಗನ ಮದುವೆ ಮಾಡಿದ್ದರಿಂದ ಬಾದಶಹನು ಸಿಟ್ಟಿಗೆದ್ದು ಅವನನ್ನು ಕೆಲಸದಿಂದ ದೂರ ಮಾಡಿದನು. (ಮೋಗಲ್ ಬಾದಶಾಹಿ, ಪೂರ್ವಾರ್ಧ, ಪುಟ ೧೦೧ ನೋಡಿರಿ.)

*ಮೋಗಲ್ ಬಾದಶಾಹಿ, ಪೂರ್ವಾರ್ಧ, ಪುಟ ೬೧, ೬೨, ೬೩ ನೋಡಿರಿ.

ತನ್ನ ಸಾವನ್ನು ಮುಂಗಂಡು ತಾನು ಸತ್ತ ಮೇಲೆ ಬಾದಶಹನ ಇಚ್ಛೆಯಂತೆ ನಡೆಯಲಿಕ್ಕೆ ತನ್ನಿಂದ ವಚನತೆಗೆದುಕೊಂಡಿರುತ್ತಾನೆಂದು ಕೇಳಿದವರಿಗೆ ಹೇಳಲಾರಂಭಿಸಿದಳು. ಬಳಿಕ ಬಾದಶಹನ ಅಪ್ಪಣೆಯ ಮೇರೆಗೆ ಬರ್ದವಾನದ ಹೊಸ ಸುಬೇದಾರನು ಆಕೆಯನ್ನು ದಿಲ್ಲಿಗೆ ಕಳುಹಿದನು. ದಿಲ್ಲಿಗೆ ಹೋಗುವಾಗ ಸಾರ್ವಭೌಮನ ರಾಣಿಯಾಗುವೆನೆಂಬ ಆಕೆಯ ಉಬ್ಬು ಹಿಡಿಯಲಾರದಷ್ಟು ಆಗಿರಬಹುದು. ಆದರೆ ದೈವಗತಿಯು ವಿಚಿತ್ರವಾದ್ದು. 'ಮನುಷ್ಯನು ಆಲೋಚಿಸುವದೊಂದು, ದೇವರು ಮಾಡುವದೊಂದು' ಎಂಬ ಗಾದೆಯಂತೆ ಆಕೆಯ ಹಾಡಾಯಿತು. ಆಕೆಯು ದಿಲ್ಲಿಗೆ ಹೋದ ಬಳಿಕ ಬಾದಶಹನು ಆಕೆಯನ್ನು ಕಣ್ಣೆತ್ತಿ ಸಹ ನೋಡದೆ, ತನ್ನ ಮಲತಾಯಿಯ ಸ್ವಾಧೀನದಲ್ಲಿಡಬೇಕೆಂತಲೂ ಆಕೆಯ ವೆಚ್ಚಕ್ಕಾಗಿ ದಿನಾಲು ಹದಿನಾಲ್ಕು ಆಣೆ ರೊಕ್ಕವನ್ನು ಮಾತ್ರ ಕೊಡಬೇಕೆಂತಲೂ ಗೊತ್ತುಮಾಡಿದನು. ಇದೇನು ಹಣೆಬರಹ? ಅರಮನೆಯು ಹೋಗಿ ಸೆರೆಮನೆಯಾಯಿತಲ್ಲ! ಆಕೆಯು ಮಾಡಿದ ತಪ್ಪೇನು? ಬಾದಶಹನು ಆಕೆಯ ಗಂಡನನ್ನು ವಿಶ್ವಪ್ರಯತ್ನಮಾಡಿ ಕೊಲ್ಲಿಸಬೇಕೇಕೆ? ಮತ್ತು ಮುಂದೆ ಈ ಮೇರೆಗೆ ಅನಾದರಮಾಡಬೇಕೇಕೆ?

ಈಪ್ರಶ್ನದ ಉತ್ತರವನ್ನು ಕೊಡುವದು ಶ್ರಮದ ಕೆಲಸವೇ ಸರಿ. ಏಕೆಂದರೆ ಈ ಬಗ್ಗೆ ಒಬ್ಬ ಇತಿಹಾಸಕರ್ತನಾದರು ಏನೂ ಬರೆಯುವದಿಲ್ಲ, ಮತ್ತು ಸೇಲಿಮನ ಸ್ವಚರಿತ್ರದಲ್ಲಾದರೂ ಈಸಂಬಂಧದಿಂದ ಲೇಖವಿಲ್ಲ. ಮ್ಹೇರ-ಉಲ್-ನಿಸ್ಸೆಯ ಸಂಬಂಧದಿಂದ ತನ್ನ ಜೀವದ ಗೆಳೆಯನಾದ ಕುತುಬನು ಸತ್ತನೆಂದು ದುಃಖಬಟ್ಟು ಬಾದಶಹನು ಹೀಗೆ ನಡೆದಿರಬಹುದೋ? ಇಲ್ಲವೆ ಆಕೆಯು ದೊರೆಯಬೇಕೆಂದು ತಾನು ಬಹಳ ಕೆಟ್ಟ ಕೆಲಸಗಳನ್ನು ಮಾಡಿದ್ದರಿಂದ ಪಶ್ಚಾತ್ತಾಪಬಟ್ಟು ಅವನು ಈತರದ ಉದಾಸೀನವೃತ್ತಿಯನ್ನು ಧರಿಸಿರಬಹುದೋ? ಇಲ್ಲವೆ ತನ್ನ ಸರಾಯಿ ಅಪೀಮಿನ ಗುಂಗಿನಲ್ಲಿ ಅವನು ಆಕೆಯನ್ನು ಮರೆತಿರಬಹುದೋ? ಇಲ್ಲವೆ, ಶ್ರಮಸಾ

ಧ್ಯವಸ್ತುಗಳು ಮಾತ್ರ ಬೆಲೆಬಾಳುತ್ತವೆಂಬ ಸಾಮಾನ್ಯನಿಯಮ ದಂತೆ, ಮ್ಹೇರ-ಉಲ್-ನಿಸ್ಸೆಯು ತನ್ನ ಕಯ್ಯಲ್ಲಿ ಸಿಕ್ಕಿದ್ದರಿಂದ ಬೆಲೆ ಬಾಳದ ಕುತ್ಸಿತಸ್ತ್ರೀಯಾಗಿ ಬಾದಶಹನ ಅನಾದರಕ್ಕೆ ಪಾತ್ರಳಾ ಗಿರಬಹುದೋ? ಈಕಾರಣಗಳಲ್ಲಿ ಯಾವದಾದರೊಂದು ಕಾರಣ ದಿಂದೇ ಆಗಲಿ, ಅಥವಾ ಈ ಎಲ್ಲ ಕಾರಣಗಳಿಂದೇ ಆಗಲಿ, ಬಾದ ಶಹನು ಮುಂದೆ ನಾಲ್ಕು ವರುಷಗಳ ವರೆಗೆ ಆಕೆಯ ಕಡೆಗೆ ಹಣಿಕಿ ಹಾಕಲಿಲ್ಲ!!

ಇಂತಹ ಪ್ರಸಂಗದಲ್ಲಿ ಹೆಂಗಸರು ಏನು ಮಾಡಬಹುದು? ಸಾಮಾನ್ಯರಾದ ಹೆಂಗಸರು ಚಿಂತೆಹಚ್ಚಿಕೊಂಡು ಅನ್ನನೀರುಬಿಟ್ಟು ಕೊರಗಿ ಸೊರಗಿ ಸವೆದು ಕ್ಷಯರೋಗಕ್ಕೆ ಆಹುತಿಯಾಗಬಹುದು; ಹೆಡ್ಡರಂತೂ ಮುಂಗಾಣದೆ ಆತ್ಮಹತ್ಯವೆಂಬ ದುರ್ಮರಣಕ್ಕೆ ಗುರಿ ಯಾಗಬಹುದು. ಆದರೆ ಹಿಂದೆ ಹೇಳಿದಂತೆ ಮ್ಹೇರ-ಉಲ್-ನಿಸ್ಸೆಯು ಸಾಮಾನ್ಯಸ್ತ್ರೀಯಾಗಿದ್ದಿಲ್ಲ. ಆಕೆಯು ತಾಳ್ಮೆಯುಳ್ಳವಳೂ ಜಾ ಣೆಯೂ ಆದ್ದರಿಂದ ತನ್ನ ಆಗಿನ ದುಃಸ್ಥಿತಿಯನ್ನು ವಿಚಾರಮಾಡು ತ್ತ ಉಮ್ಮಳಿಕೆಯಲ್ಲಿ ಕಾಲಕಳೆಯದೆ, ದೇವರ ಮೇಲೆ ಭಾರಹಾಕಿ, 'ತಾ ಬಲ, ಜಗ ಬಲ' ಎಂಬ ಗಾದೆಯನ್ನು ನೆನಪಿಗೆ ತಂದು, ಆನಂದ ವೃತ್ತಿಯನ್ನು ಧರಿಸಿ, ಚಿತ್ರಕಲಾಕೌಶಲ್ಯದ ಕೆಲಸಗಳಲ್ಲಿ ಕಾಲಕಳೆ ಯಲಾರಂಭಿಸಿದಳು.

ವಿದ್ಯವು ಧನವೆಂದು ಕಬ್ಬಿಗರು ಹೇಳುತ್ತಾರಷ್ಟೇ. ಆದರೆ ವಿದ್ಯವು ಮನುಷ್ಯನನ್ನು ಕೇವಲ ಹಣವುಳ್ಳವನನ್ನು ಮಾಡುತ್ತ ದೆಂಬದಿಷ್ಟೇ ಅಲ್ಲ; ಅದು ಅವನನ್ನು ಧನವಂತನನ್ನೂ ಮಾನಾರ್ಹ ನನ್ನೂ ಮಾಡುವದಲ್ಲದೆ ಒಮ್ಮೊಮ್ಮೆ ಅವನ ಕಠಿಣ ಬಯಕೆಗಳ ನ್ನಾದರೂ ಪೂರಯಿಸುತ್ತದೆ. ಈಮಾತಿನ ಅನುಭವವು ಮ್ಹೇರ- ಉಲ್-ನಿಸ್ಸೆಗೆ ಈಕಾಲಕ್ಕೆ ಬಂತು. ಆಕೆಯು ತೆಗೆದ ಹೊಸ ಹೊಸ ಚಿತ್ರಗಳೂ ಹೊಸ ಮಾದರಿಯ ಕಸೂತಿಗಳೂ ಎಲ್ಲ ನೋಟಕರ ನ್ನು ತಲೆದೂಗಿಸಿದವು. ದೊಡ್ಡ ದೊಡ್ಡ ಮನೆತನದ ಹೆಂಗಸರು ತಂತಮ್ಮ ಹೆಡ್ಡತನವನ್ನು ಮುಚ್ಚಿಕೊಳ್ಳಲಿಕ್ಕೆ ಆಕೆಯ ಚಿತ್ರಗಳ

ನ್ನು ಕೊಂಡು ತಂತಮ್ಮ ಮನೆಗಳನ್ನು ಅಲಂಕರಿಸಲಾರಂಭಿಸಿದರು. ಪ್ರಾಯದ ಬಾಲೆಯರು ಆಕೆಯ ಶಿಷ್ಯರಾದರು. ರಾಜಧಾನಿಯಲ್ಲಿ ಎಲ್ಲಿ ನೋಡಿದರೂ ಆಕೆಯ ಚಿತ್ರಗಳೇ ತೋರುತ್ತಿದ್ದವು; ಎಲ್ಲ ಅರಿವೆಗಳ ಮೇಲೆ ಆಕೆಯ ಹೊಸತರದ ಚೆಂದವಾದ ಕಸೂತಿಗಳೇ ಕಾಣುತ್ತಿದ್ದವು. ಈಮೇರೆಗೆ ಆಕೆಯ ಕೌಶಲ್ಯವು ಊರಲ್ಲೆಲ್ಲ ಹಬ್ಬಿ ಕರ್ಣೋಪಕರ್ಣವಾಗಿ ಬಾದಶಹನಿಗೆ ಗೊತ್ತಾಯಿತು. ಆಗ ಆಕೆಯ ಸಂಬಂಧದಿಂದಿದ್ದ ಅವನ ಪ್ರೇಮವು ಒಮ್ಮಿಂದೊಮ್ಮೆ ಉದ್ಭವಿಸಿ ಅವನನ್ನು ಪರವಶಮಾಡಿತು. ಆದ್ದರಿಂದ ಅವನು ಕೂಡಲೆ ಆಕೆಯನ್ನು ಕಾಣಲಿಕ್ಕೆ ಹೋದನು.

ಈಪ್ರಸಂಗದಲ್ಲಿ ಮೆಹೇರ-ಉಲ್-ನಿಸ್ಸೆಯು ತೋರಿಸಿದ ಜಾಣತನವೂ ನಮ್ರತೆಯೂ ಬಾದಶಹನ ಮನಸ್ಸನ್ನು ಪೂರ್ಣವಾಗಿ ಎಳೆದುಕೊಂಡವು. ಅವನು ಬಂದ ಕೂಡಲೆ ಆಕೆಯು ಎದ್ದು ನಿಂತು ಬಹುನಮ್ರತೆಯಿಂದ ಮುಜುರೆಮಾಡಿ, ಅಲ್ಲಿದ್ದ ತನ್ನ ಮಂಚದ ಮೇಲೆ ಕುಳ್ಳಿರಲಿಕ್ಕೆ ಬಿನ್ನವಿಸಿ, ತಾನು ಅವನಿಂದ ದೂರವಾಗಿ ತಲೆ ಬಾಗಿಸಿಕೊಂಡು ನಿಂತಳು. ಆಮಾತು ಈಮಾತು ಆದ ಮೇಲೆ ಬಾದಶಹನು ಆಕೆಯ ಸಾದಾ ಉಡಿಗೆಯನ್ನೂ ಆಕೆಯ ಹತ್ತರ ನಿಂತಿದ್ದ ದಾಸಿಯ ಜರತಾರೆಯುಡಿಗೆಯನ್ನೂ ನೋಡಿ, ಹೀಗೇಕೆಂದು ಕೇಳಲು, ಆಚದುರೆಯು—ಆಳುಗಳ ಉಡಿಗೆತೊಡಿಗೆಗಳು ಒಡೆಯರ ಅನುಗ್ರಹದ ಸೂಚಕಚಿಹ್ನಗಳಾಗಿರುತ್ತವೆ. ನಾನು ನನ್ನ ದಾಸಿಯರು ಚೆಲೊ ಅರಿವೆಗಳನ್ನು ಹಾಕಿಕೊಂಡು ಸುಖಿಗಳಾಗಿರಬೇಕೆಂದು ಬಯಸುತ್ತೇನೆ. ಆದರೆ ಸರಕಾರದ ತೊತ್ತಾದ ನಾನು ಸರಕಾರದ ಅನುಗ್ರಹಕ್ಕೆ ಪಾತ್ರಳಾಗದ್ದರಿಂದ ಈಮೇರೆಗೆ ಕೆಟ್ಟ ಅರಿವೆಗಳನ್ನು ಹಾಕಿಕೊಳ್ಳುತ್ತೇನೆ, ಎಂದಳು. ಈಜಾಣ್ನುಡಿಯನ್ನು ಕೇಳಿ ಬಾದಶಹನ ಚಿಕ್ಕಂದಿನ ಪ್ರೀತಿಯು ಉಕ್ಕೇರಿತು. ಅವನು ಕೂಡಲೆ ಸನ್ನೆಮಾಡಿ ದಾಸಿಯರನ್ನು ಹೊರಗೆ ಕಳುಹಿ, ಆಕೆಯನ್ನು ಕಯ್ಹಿಡಿದು ಕರೆದುಕೊಂಡು ಬಂದು, ತನ್ನ ಹತ್ತರ ಕುಳ್ಳಿರಿಸಿಕೊಂಡು ಪರಿಪರಿಯಿಂದ ಸಂತವಿಸಿ, ಮೊದಲು ತೋರಿಸಿದ ಅನಾ

ದರಕ್ಕೆ ಸೆರಗೊಡ್ಡಿ ಕ್ಷಮೆಬೇಡಿಕೊಂಡು, ಇನ್ನು ಮುಂದೆ ತನ್ನ ಪ್ರಾಣವಲ್ಲಭೆಯನ್ನು ಮಾಡಿಕೊಳ್ಳುವೆನೆಂದು ಆಕೆಗೆ ಮಾತು ಕೊಟ್ಟು, ಅಪ್ಪಣೆ ತೆಗೆದುಕೊಂಡನು.

ಈಸುದ್ದಿಯು ರಾಜಧಾನಿಯಲ್ಲಿ ಹಬ್ಬುವುದಕ್ಕಿಂತ ಮುಂಚೇ ಬಾದಶಹನು ಮ್ಹೇರ-ಉಲ್-ನಿಸ್ಸೆಗೆ **ನೂರಮಹಾಲ** (ಅರಮನೆಯ ಬೆಳಕು) ಎಂಬ ಹೆಸರನ್ನಿತ್ತು, ಆಕೆಯನ್ನು ಬಹುಸಮಾರಂಭದಿಂದ ಮದುವೆಮಾಡಿಕೊಂಡನು. ಇಷ್ಟರಿಂದಲೇ ಅವನ ಪ್ರೀತಿ ತೋರಿಸುವ ಇಚ್ಛೆಯು ಪೂರ್ಣವಾಗಲಿಲ್ಲ. ಅವನು ಮುಂದೆ ತುಸು ದಿವಸದಲ್ಲೇ ಆಕೆಗೆ **ನೂರಜಹಾನ** (ಜಗತ್ತಿನ ಬೆಳಕು) ಎಂಬ ಗೌರವದ ಬಿರುದನ್ನು ಕೊಟ್ಟು, ಆಕೆಯ ಮೋರೆಯನ್ನು ತನ್ನ ಮೋರೆಯೊಡನೆ ನಾಣ್ಯಗಳ ಮೇಲೆ ಮುದ್ರಿಸಬೇಕೆಂದು ಅಪ್ಪಣೆಕೊಟ್ಟನು (೧೬೧೧).

ನೂರಜಹಾನಳು (ಇನ್ನು ಮುಂದೆ ಮ್ಹೇರ-ಉಲ್-ನಿಸ್ಸೆಯನ್ನು ನೂರಜಹಾನಳೆಂದು ಕರೆಯುವುದು ಅವಶ್ಯವಿದೆ) ಆ ಕಾಲದ ಎಲ್ಲ ಹೆಂಗಸರಿಗಿಂತ ಚೆಲುವಿಕೆಯಿಂದ ಮಿಗಿಲಾದಷ್ಟೇ ತನ್ನ ಬುದ್ಧಿಚಾತುರ್ಯಗಳಿಂದ ಶ್ರೇಷ್ಠಳಾಗಿದ್ದಳು. ಆದ್ದರಿಂದ ಆಕೆಯು ಬಾದಶಹನ ಪ್ರೀತಿಯ ರಾಣಿಯಾಗಿ ಐಹಿಕಶ್ರೇಷ್ಠತ್ವಪಡೆದುದನ್ನು ನೋಡಿ, ಎಲ್ಲರಿಗೂ ಸಂತೋಷವಾಯಿತು. ಯೋಗ್ಯ ಸ್ತ್ರೀಯು ಯೋಗ್ಯಸ್ಥಳದಲ್ಲಿರಿಸಲ್ಪಟ್ಟಳೆಂದು ಗಂಡಸರೂ ಹೆಂಗಸರೂ, ಬಡವರೂ ದೈವುಳ್ಳವರೂ, ಮುಸಲ್ಮಾನರೂ ಹಿಂದೂಜನರೂ, ಸಣ್ಣವರೂ ದೊಡ್ಡವರೂ ಸೃಷ್ಟಿಕರ್ತನಾದ ದೇವರನ್ನು ಹೊಗಳಲಾರಂಭಿಸಿದರು. ಆಕೆಯ ಈಯಪೂರ್ವವಾದ ಏಳ್ಗೆಯು ಗುರುಹಿರಿಯರ ಮನಸ್ಸುನೋಯಿಸಲಿಲ್ಲ, ಸರಿಕರ ಹೊಟ್ಟೆಕಿಚ್ಚನ್ನು ಹುಟ್ಟಿಸಲಿಲ್ಲ, ಮತ್ತು ಕೆಳಗಿನ ಪ್ರತಿಯ ಜನರ ಅನಾದರಕ್ಕೆ ಇಂಬುಗೊಡಲಿಲ್ಲ. ಆಕೆಯು ಪಟ್ಟದ ರಾಣಿಯಾದ ಬಳಿಕ ಆಕೆಯ ತಂದೆಯು ಬಾದಶಹನ ಮುಖ್ಯಪ್ರಧಾನಿಯಾದನು; ಮತ್ತು ಆಕೆಯ ಅಣ್ಣತಮ್ಮಂದಿರು ದರಬಾರದಲ್ಲಿ ದೊಡ್ಡದೊಡ್ಡ ಸರದಾರರಾ

ದರು. ಅವರಾದರೂ ತಂತಮ್ಮ ಸ್ಥಳಗಳಿಗೆ ತಕ್ಕವರಿದ್ದುದರಿಂದ ಜನರ ಅಸೂಯೆಗೆ ಪಾತ್ರರಾಗಲಿಲ್ಲ.

ಈಜಗತ್ತಿನಲ್ಲಿ ಧನವು ಜೀವನದ, ಅದೇಕೆ, ಸಂಸಾರದ ಮುಖ್ಯ ಸಾಧನವಾಗಿರುತ್ತದೆ. ಆದ್ದರಿಂದ ಮುಮುಕ್ಷುಗಳಾದ ಯೋಗಿಗಳ ಹೊರತು ಎಲ್ಲ ಜನರು ಧನಾಕಾಂಕ್ಷೆಯಿಂದ ವಿಶ್ವಪ್ರಯತ್ನ ಮಾಡುತ್ತಾರೆ. ಇವರಲ್ಲಿ ಕೆಲವರ ಪ್ರಯತ್ನಗಳು ಸಫಲವಾಗುತ್ತವೆ, ಮತ್ತು ಕೆಲವರವು ನಿಷ್ಫಲವಾಗುತ್ತವೆ. ಸಫಲಪ್ರಯತ್ನರಾದ ಧನಿಕರಾದರೂ ಪೂರ್ಣ ಸುಖಿಗಳೆಂದು ತಿಳಿಯಕೂಡದು. ಈ ಜಗತ್ತಿನಲ್ಲಿ ಸೃಷ್ಟಿಕರ್ತನ ನೇಮದಂತೆ ಧನಕ್ಕಿಂತಲು ಸದ್ಗುಣವು ಹೆಚ್ಚು ಬೆಲೆಯುಳ್ಳದ್ದೂ ಹೆಚ್ಚು ಸುಖಕರವಾದ್ದೂ ಇರುತ್ತದೆ; ಏಕಂದರೆ ಧನಕ್ಕೆ ಒಂದು ದೊಡ್ಡ ಕುತ್ತು ಇರುತ್ತದೆ, ಅದಾವದೆಂದರೆ ಮದಾಂಧತನವು. ಆದ್ದರಿಂದ ಕನ್ನಡ ಕಬ್ಬಿಗರು || ಸಿರಿಯೆಂಬ ಸೊಡರಿಗೆ ಮಾಣದು ಅಭಿಮಾನ-ಬಿರುಗಾಳಿ ಎಚ್ಚರಿಕೆ || ಎಂದು ಉಪದೇಶ ಮಾಡುತ್ತಾರೆ. ಈಯೆಚ್ಚರಿಕೆಯುಳ್ಳವರೇ ಜನರಿಂದ ಅಹುದೆನಿಸಿಕೊಳ್ಳುತ್ತಾರೆ, ಮತ್ತು ಅವರೇ ಹೊಗಳಿಸಿಕೊಳ್ಳಲಿಕ್ಕೆ ಯೋಗ್ಯರು.

ನೂರಜಹಾನ ರಾಣಿಯು ತನ್ನ ಐಶ್ವರ್ಯದಿಂದ ಮೈಮ್ಮರೆಯಲಿಲ್ಲಾದ ಕಾರಣ ಜನರ ಸ್ತುತಿಗೆ ಪಾತ್ರಳಾದಳು. ಈಕಾಲದಿಂದ ಬಾದಶಹನ ಮರಣದ ವರೆಗೆ, ಅಂದರೆ ಸುಮಾರು ೧೬ ವರುಷ, ಆಕೆಯು ಮಾಡಿದ್ದೇ ಮಟ್ಟ, ಕಟ್ಟಿದ್ದೇ ಪಟ್ಟವಾಗಿತ್ತು. ಬಾದಶಹನು ಆಕೆಯ ಮಾತನ್ನು ಎಳ್ಳಷ್ಟಾದರೂ ಮೀರುತ್ತಿದ್ದಿಲ್ಲ. ಆಕೆಯು ಕಯ್ಬೀಸಿದರೆ, ಕೈಲಾಸವಿತ್ತು. ಇಷ್ಟು ಐಶ್ವರ್ಯವಿದ್ದರೂ ಇಷ್ಟು ಅಧಿಕಾರವಿದ್ದರೂ ಇಷ್ಟು ಒಳಿತು-ಕೆಡಕುಮಾಡುವ ಪ್ರಸಂಗಗಳಿದ್ದರೂ, ಆಕೆಯು ಬೇಕೆಂದು ತಿಳಿದೂ ತಿಳಿದೂ ಕೆಡಕು ಮಾಡಲಿಕ್ಕೆ ಮನಸ್ಸುಮಾಡಲಿಲ್ಲೆಂಬದು ಹೊಗಳತಕ್ಕಂತಹ ಸಂಗತಿಯೇ ಸರಿ. ಆಕೆಯು ತನ್ನ ಐಶ್ವರ್ಯವಿದ್ದಾಗ ಸುಮಾರು ೫೦೦ ಮಂದಿ ಪರದೇಶಿ ಹುಡುಗಿಯರ ಮದುವೆಯನ್ನು ಮಾಡಿಕೊಟ್ಟಿದ

ಲ್ಲದೆ, ತನ್ನ ತಂದೆ ಸತ್ತಾಗ ಅವನ ಹೆಸರಿನದೊಂದು ಭವ್ಯವಾದ ಕಟ್ಟಣವನ್ನು ಕಟ್ಟಿಸಿ ಬಡಬಗ್ಗರ ಹರಿಕೆಗೆ ಪಾತ್ರಳಾದಳು (೧೬೧೯).

ಮುಂದೆ ೬|೭ ವರ್ಷ ನೂರಜಹಾನಳಿಗೆ ಸಂಬಂಧಿಸಿದ ಹೆಚ್ಚಿನಾವ ಸಂಗತಿಯೂ ಒದಗಲಿಲ್ಲ. ಈಕಾಲದಲ್ಲಿ ಆಕೆಯು ಬಾರಿ ಬಾರಿಗೆ ಶಹಾಜಹಾನನು ನಂಬಿಗಸ್ಥನಲ್ಲೆಂದು ಹೇಳಿದ ಮಾತು ಸುಲ್ತಾನಪರ್ವೇಜನ ಕೊಲೆಯಿಂದಲೂ ಶಹಾಜಹಾನನು ಎಬ್ಬಿಸಿದ ಬಂಡಾಯದಿಂದಲೂ* ಬಾದಶಹನಿಗೆ ಸರಿಯೆಂದು ಕಂಡು ಬಂತು. ಈಕಾರಣದಿಂದ ಆಕೆಗೂ ಶಹಾಜಹಾನನಿಗೂ ಮೊದಲಿನಿಂದ ಮನಸ್ಸು ಕೆಟ್ಟಿತ್ತು. ಆಕೆಯು ರಾಜ್ಯಕಾರ್ಯದಲ್ಲಿ ಮೇಲಿಂದ ಮೇಲೆ ಕಯ್ಹಾಕುತ್ತಿದ್ದರೂ, ಆಕೆಯ ಅಣ್ಣನೂ ಮುಖ್ಯ ಮಂತ್ರಿಯೂ ಆದ **ಅಸಫಜಹನ** ಜಾಣ್ಮೆಯಿಂದ ಹೆಚ್ಚಿನಾವ ಗೊಂದಲವು ಏಳಲಿಲ್ಲ.

ಶಹಾಜಹಾನನ ಬಂಡಾಯವು ಮುಗಿದಂದಿನಿಂದ ನೂರಜಹಾನಳ ಏರಿಕೆಯ ಕಾಲವು ಮುಗಿದಂತಾಯಿತು. ಅವನು ಬಂಡಾಯವೆಬ್ಬಿಸಿದ ಭಯಂಕರಪ್ರಸಂಗದಲ್ಲಿ **ಮೊಹಬತ್ಖಾನನೆಂಬ** ಶೂರ ಸರದಾರನು ವಿಶ್ವಪ್ರಯತ್ನಮಾಡಿ ಆಬಂಡಾಯವನ್ನು ಮುರಿದು, ಆಬಂಡಿನಲ್ಲಿ ಸೇರಿದ **ಖಾನಖಾನನೆಂಬ** ಮತ್ತೊಬ್ಬ ಸರದಾರನನ್ನು ಸೆರೆಯಲ್ಲಿಡಿಸಿ, ಅವನ ಮಗನನ್ನು ಕೊಲ್ಲಿಸಿದನು. ಇದರಿಂದ ಹೊಟ್ಟೆಯುರಿದ ಖಾನಖಾನನು ತನ್ನ ಸೇಡುತೀರಿಸಿಕೊಳ್ಳುವ ಉದ್ದೇಶದಿಂದ ನೂರಜಹಾನ ರಾಣಿಯ ಕಡೆಗೆ ತನ್ನ ಕಡೆಯವರನ್ನು ಕಳುಹಿ, ಮೊಹಬತ್ಖಾನನು ಸುಲ್ತಾನಪರ್ವೇಜನನ್ನು ಪಟ್ಟದ ಮೇಲೆ ಕುಳ್ಳಿರಿಸಲಿಕ್ಕೆ ಒಳಸಂಚುನಡಿಸುತ್ತಾನೆಂದು ಆಕೆಯ ಕಿವಿಯೂದಿಸಿದನು. ಆಗ ರಾಣಿಯು ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂಬ ನಾಣ್ನುಡಿಯನ್ನು ಲಕ್ಷ್ಯಕ್ಕೆ ತಾರದೆ, ಚಾಡಿಯವರ ಮಾತಿನಲ್ಲಿ ನಂಬಿಗೆಯನ್ನಿಟ್ಟು, ಹಿತ್ತಾಳಿಕಿವಿಯಾದ

---

* ಮೋಗಲ್ ಬಾದಶಾಹಿ, ಪೂರ್ವಾರ್ಧ, ಪುಟ ೯೨, ೯೮ ನೋಡಿರಿ.

ಬಾದಶಹನ ಮನಸ್ಸಿನಲ್ಲಿ ಮೊಹಬತ್ಖಾನನು ರಾಜದ್ರೋಹಿಯೆಂಬ ವಿಚಾರವನ್ನು ಹುಟ್ಟಿಸಿದಳು.

ಮುಂದೆ ಬಾದಶಹನು ಮೊಹಬತ್ಖಾನನನ್ನು ಹೇಗೆ ಪೀಡಿಸಿದನೆಂಬದೂ ಅವನು ಆತ್ಮಸಂರಕ್ಷಣಾರ್ಥವಾಗಿ ಏನು ಸಾಹಸ ಮಾಡಿದನೆಂಬದೂ ಗ್ರಂಥಾಂತರವಿಷಯಗಳಾಗಿರುತ್ತವೆ.* ಆದ್ದರಿಂದ ಅವುಗಳನ್ನು ಇಲ್ಲಿ ವಿವರಿಸುವದು ಸರಿಯಾಗಲಿಕ್ಕಿಲ್ಲ. ಆದರೆ ಬಾದಶಹನು ಜೆಹಲಮ್ ಹೊಳೆಯ ದಂಡೆಯ ಮೇಲಿದ್ದ ತನ್ನ ಪಾಳಯದಲ್ಲಿರುವಾಗ ಮೊಹಬತ್ಖಾನನು ಅವನನ್ನು ಸೆರೆಹಿಡಿಯುವ ಉದ್ದೇಶದಿಂದ ದಂಡಿನೊಡನೆ ಅವನ ಡೇರೆಯನ್ನು ಹೊಗಲು, ಆ ಗದ್ದಲದಲ್ಲಿ ಅದೇ ಡೇರೆಯಲ್ಲಿದ್ದ ರಾಣಿಯು ಯುಕ್ತಿಯಿಂದ ತಪ್ಪಿಸಿಕೊಂಡು ಹೊಳೆಯನ್ನು ದಾಟಿ, ಮುಖ್ಯ ದಂಡನ್ನು ಕೂಡಿ ಜನರನ್ನು ಹುರಿದುಂಬಿಸಿ, ಅವರ ಸ್ವಾಮಿಭಕ್ತಿಯನ್ನು ಹೆಚ್ಚಿಸಿ, ತನ್ನ ಗಂಡನನ್ನು ಸೆರೆಯಿಂದ ಬಿಡಿಸುವ ಉದ್ದೇಶದಿಂದ ದಂಡಿನೊಡನೆ ತಾನೂ ಯುದ್ಧಕ್ಕೆ ಬಂದಳು. ಆದರೆ ದೂರದೃಷ್ಟಿಯಾದ ಮೊಹಬತ್ಖಾನನು ಆಹೊಳೆಯ ಪೂಲನ್ನು ಮೊದಲೇ ಸುಡಿಸಿಬಿಟ್ಟಿದ್ದನು. ಆಕಾಲಕ್ಕೆ ಮೋಗಲ್ ದಂಡಿನವರು ತೋರಿಸಿದ ನಿಸ್ಸೀಮಸ್ವಾಮಿಭಕ್ತಿಯೂ ನೂರಜಹಾನ ರಾಣಿಯು ತೋರಿಸಿದ ಆಕೆವಾಳತನವೂ ಬಣ್ಣಿಸತಕ್ಕಂತಹವುಗಳೇ ಸರಿ. ಜನರನ್ನು ಹುರಿದುಂಬಿಸುವಾಗ ನೂರಜಹಾನಳು ಸ್ಪೇನದ ಸೋಲಿಲ್ಲದ ಹಡಗುಪಡೆಯು ಇಂಗ್ಲಂಡ ದೇಶವನ್ನು ಒಳನುಗ್ಗಲಿಕ್ಕೆ ಬರುವ ಸಮಯದಲ್ಲಿ (೧೫೮೮) ಹಡಗುಪಡೆಗಾರರನ್ನು ಹುರಿದುಂಬಿಸಿದ **ಎಲಿಜಾಬೆಥ** ರಾಣಿಯೋ ಏನೋ ಎಂಬ ಹಾಗೆ ಕಾಣಿಸಿದಳು. ಆಕೆಯ ವೀರಾವೇಶದ ಮಾತುಗಳಿಂದ ಹುರಿದುಂಬಿದ ದಂಡಾಳುಗಳು ಪೂಲು ಸುಟ್ಟುಹೋದುದನ್ನು ನೋಡಿ ಹಿಂಜರೆಯಲಿಲ್ಲ. ಕಾಲಾಳುಗಳು ಈಸಬಿದ್ದರು, ಮತ್ತು ರಾಹುತರೂ ಮಾವುತರೂ ತಂತಮ್ಮ ವಾಹನಗ

---

* ಈ ಸಂಬಂಧದಿಂದ ಮೋಗಲ್ ಬಾದಶಾಹಿ, ಪೂರ್ವಾರ್ಧ, ಪುಟ ೧೦೦-೧೦೪ ನೋಡಿರಿ.

ಳನ್ನು ಹೊಳೆಯಲ್ಲಿ ಹಾಕಿದರು. ರಾಣಿಯು ತನ್ನ ದಂಡಿನವರ ಕಾ ದಾಟವನ್ನು ನೋಡುತ್ತ ಸುಮ್ಮನೇ ದೂರದಲ್ಲಿ ನಿಲ್ಲದೆ, ತನ್ನ ಪತಿ ಸೇವೆಯಲ್ಲಿ ಪ್ರಾಣ ಹೋದರೂ ಚಿಂತೆಯಿಲ್ಲೆಂಬ ವಿಚಾರದಿಂದ ಕವಚವನ್ನು ತೊಟ್ಟುಕೊಂಡು, ಬಾಣವನ್ನು ಕಯ್ಯಲ್ಲಿ ಹಿಡಿದುಕೊಂ ಡು, ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿಕೊಂಡು, "ಹೆದರಬೇಡರಿ!" "ಮುಂದಕ್ಕೆ ಸಾಗಿರಿ!" "ಬಾಣಗಳನ್ನು ಹೊಡೆಯಿರಿ!" "ಅತ್ತಿಂದ ಹಗೆಗಳು ಬರುತ್ತಾರೆ ನೋಡಿರಿ!" "ನೀರು ಉದ್ದವಿರಬಹುದು, ಎಚ ರದಿಂದ ಕಾಲಿಡಿರಿ!" "ಸಾಲು ಬಿಡಬೇಡರಿ, ಇತ್ತ ಬಂಡುಗಾರರು ಹತ್ತರ ಬಂದರು, ಅವರ ಕತ್ತಿಗಳನ್ನು ತಪ್ಪಿಸಿರಿ! ಅವರ ತೋಪು ಗಳಿಗೆ ಗುರಿಯಾಗಬೇಡರಿ!" ಈ ಮೇರೆಗೆ ಹಲವು ತರದ ಧೈರ್ಯದ ಮಾತುಗಳನ್ನು ಹೇಳುತ್ತ, ಆವೀರವನಿತೆಯು, ಆಪತಿವ್ರತೆಯು, ಆಯೆದೆಗಾರತಿಯು ಶತ್ರುಗಳ ಮೇಲೆ ಎಡೆಬಿಡದೆ ಬಾಣವೃಷ್ಟಿಯ ನ್ನು ಸುರಿಸಿದಳು. ಆಗ ಆಕೆಯು, ನೋಡುವವರ ಕಣ್ಣಿಗೆ ಇಂದ್ರ ನೊಡನೆ ಕಾದುವ ಸತ್ಯಭಾಮೆಯೋ ಅರ್ಜುನನೊಡನೆ ಹೋರಾ ಡುವ ಪ್ರಮೀಲೆಯೋ ಎಂಬಂತೆ ಕಾಣುತ್ತಿದ್ದಳು.

ಅತ್ತ ಮೊಹಬತ್ಖಾನನ ದಂಡಿನವರು ಮೊಗಲರನ್ನು ಹೊಳೆ ದಾಟಗೊಡಬಾರದೆಂದು ವಿಶ್ವಪ್ರಯತ್ನಮಾಡಿದರು. ಅವರು ಎಸೆ ದ ಬಾಣಗಳೂ ಅವರು ಚುಚ್ಚಿದ ಭಾಲೆಗಳೂ ಅವರು ಗುರಿಯಿಟ್ಟ ಗುಂಡುಗಳೂ ಅವರು ಇರಿದ ಕತ್ತಿಗಳೂ ಮೊಗಲರೊಳಗೆ ಕೆಲ ವರ ರುಂಡಗಳನ್ನು ಹಾರಿಸಿದವು; ಕೆಲವರ ಕಯ್ಗಳನ್ನು ಕಡಿದವು; ಮತ್ತು ಕೆಲವರನ್ನು ಗಾಯ ಮಾಡಿ ನೀರೊಳಗೆ ಹೊರಳಿಸಿದವು. ಎತ್ತ ನೋಡಿದತ್ತ ಹಾಹಾಕಾರವಾಯಿತು. ಮೊಹಬತ್ಖಾನನ ಮನಸ್ಸಿನಲ್ಲಿ ರಾಣಿಯನ್ನು ಹಿಡಿಯುವದಿತ್ತು. ಆದ್ದರಿಂದ ಅವನು ಎದೆಗಾರರಾದ ತನ್ನ ಪ್ರೀತಿಯ ದಂಡಾಳುಗಳಿಗೆ ಹೇಗಾದರೂ ಮಾಡಿ ಆಕೆಯನ್ನು ಹಿಡಿಯಿರೆಂದು ಹೇಳುತ್ತಿದ್ದನು. ಆದ್ದರಿಂದ ಅವರು ಆಕೆಗೆ ಗುರಿಯಿಟ್ಟು ಆಕೆಯ ಮೇಲೆ ಬಾಣಗಳ ಮಳೆ ಗರೆದರೂ, ಆಕೆಯ ಮೂರು ಮಂದಿ ಮಾವುತರನ್ನು ಕೊಂದರೂ,

ಆಕೆಯ ಆನೆಯ ಸೊಂಡಿಲಲ್ಲಿ ಮೂರು ಬಾಣಗಳನ್ನು ನೆಡಿಸಿ ಅದನ್ನು ಕಿರಗುಡಿಸಿದರೂ, ಆಕೆಯ ಜೊತೆಯಲ್ಲಿ ಅಂಬಾರಿಯೊಳಗೆ ಕುಳಿತ ಆಕೆಯ ಮೊಮ್ಮಗಳ ಕೈಗೆ ಬಾಣವನ್ನು ಹೊಡೆದರೂ, ಆ ಶೂರಪತಿವ್ರತೆಯು ತನ್ನ ಆನೆಯನ್ನು ಹಿಂದಕ್ಕೆ ತಿರುಗಿಸಗೊಡಲಿಲ್ಲ. ಕಟ್ಟಕಡೆಗೆ ಶತ್ರುಗಳು ಸಮೀಪಿಸಿದ್ದನ್ನು ನೋಡಿ ಮಾವುತನು ಆಕೆಯ ಮಾತು ಕೇಳದೆ, ತನ್ನ ಜೀವದ ಹೆದರಿಕೆಯಿಂದಲೋ ಸ್ವಾಮಿಭಕ್ತಿಯಿಂದಲೋ ಆನೆಯನ್ನು ತಿರುಗಿಸಿ ಹೊಳೆಯಿಂದ ಪಾರುಮಾಡಿದನು. ಬಳಿಕ ಭಗ್ನಮನೋರಥಳಾದ ರಾಣಿಯು ಕೆಲಸಂಗಡಿಗರೊಡನೆ ಲಾಹೋರಕ್ಕೆ ಓಡಿಹೋದಳು (೧೬೨೬).

ಅತ್ತ ಜಯಶಾಲಿಯಾದ ಮೊಹಬತ್ಖಾನನು ರಾಣಿಯು ತನ್ನ ಕಯ್ಯಲ್ಲಿ ಸಿಗಲಿಲ್ಲೆಂದು ಮನಸ್ಸಿನಲ್ಲಿ ನೆರೆನೊಂದುಕೊಂಡು, ಶಕ್ತಿಯಿಂದ ಕಯ್ಗೂಡದ್ದನ್ನು ಯುಕ್ತಿಯಿಂದ ಮಾಡಬೇಕೆಂದಾಲೋಚಿಸಿ, ಬಾದಶಹನಿಂದ ರಾಣಿಗೆ ಒಂದು ಕಾಗದವನ್ನು ಬರಿಸಿದನು. ಅದರಲ್ಲಿ ಬಾದಶಹನು ತಾನು ಸ್ವತಂತ್ರನಿರುತ್ತೇನೆಂತಲೂ ಮೊಹಬತ್ಖಾನನು ತಾನು ಹೇಳಿದಂತೆ ನಡೆಯುತ್ತಾನೆಂತಲೂ ತಾನು ತನ್ನ ಇಚ್ಛೆಯಿಂದಲೇ ಕಾಬೂಲಕ್ಕೆ ಹೋಗುವವನಿದ್ದ ಕಾರಣ ರಾಣಿಯು ಏನೂ ಸಂಶಯತೆಗೆದುಕೊಳ್ಳದೆಯೂ ಮೊಹಬತ್ಖಾನನಿಗೆ ತುಸುವಾದರು ಹೆದರದೆಯೂ ಅಗತ್ಯವಾಗಿ ತಾನಿದ್ದೆಡೆಗೆ ಬರಬೇಕೆಂತಲೂ ಬರೆದನು.

ಈಪತ್ರವನ್ನು ನೋಡಿದ ಕೂಡಲೆ ನೂರಜಹಾನಳಿಗೆ ಸಾನಂದಾಶ್ಚರ್ಯವಾಯಿತು. ತನ್ನ ನಲ್ಲನ ಕಯ್ಬರಹವನ್ನು ನೋಡಿ ಆಕೆಗೆ ಪರಮಸಂತೋಷವಾಯಿತು. ಆದರೆ ಆಕಾಗದದ ಒಕ್ಕಣಿಕೆಯನ್ನು ನೋಡಿ, ಆಕೆಗೆ ಅತ್ಯಾಶ್ಚರ್ಯವಾಯಿತು. ಬಾದಶಹನ ಸ್ವಭಾವವು ಬಳ್ಳಿಯಂತಿರುತ್ತದೆಂಬದನ್ನುಆಕೆಯು ಸ್ವಾನುಭವದಿಂದ ಮನಗಂಡಿದ್ದಳು. ಅವನು ಹತ್ತರಿದ್ದವರ ಮಾತು ಪರಮತಾರಕಮಂತ್ರವೆಂದು ತಿಳಿಯುತ್ತಾನೆಂಬದು ಆಕೆಗೆ ಮೊದಲೇ ಗೊತ್ತಿತ್ತು. ಹೀಗಿದ್ದು ಬಾದಶಹನು ತಾನು ಸ್ವತಂತ್ರನಿರುತ್ತೇನೆಂದು ಬರೆದು

ದನ್ನು ನೋಡಿ ಆಕೆಗೆ ನಗೆ ಬಂತು. ಆದ್ದರಿಂದ ಆಪತ್ರವನ್ನು ಮೊ ಹಬತ್ಖಾನನು ತನ್ನನ್ನು ಹಿಡಿಯುವ ಉದ್ದೇಶದಿಂದ ಬಾದಶಹನ ಕಯ್ಯಿಂದ ಬರಿಸಿರುತ್ತಾನೆಂದು ಆಜಾಣೆಯು ಕೂಡಲೆ ಊಹಿಸಿ ದಳು. ಆದರೆ ಆಕಾಗದದಲ್ಲಿ ಬರೆದಂತೆ ಬಾದಶಹನ ಬಳಿಗೆ ಹೋಗಬೇಕೋ ಹೋಗಬಾರದೋ ಎಂಬ ಆಲೋಚನೆಯು ಆ ಕೆಗೆ ಅಷ್ಟು ಬೇಗನೆ ಬಗೆಹರಿಯಲಿಲ್ಲ. ಮೊಹಬತ್ಖಾನನ ಕಯ್ಯಲ್ಲಿ ಸಿಕ್ಕಕೂಡಲೆ ಅವನು ತನ್ನನ್ನು ಸೆರೆಯಲ್ಲಿಡುವನು ಇಲ್ಲವೆ ಕೊಲ್ಲಿಸು ವನೆಂದು ಆಕೆಯು ನಿಶ್ಚಯವಾಗಿ ಅರಿತಿದ್ದಳು. ಆದರೆ ಆಸಾಧ್ವಿ ಯ ಮನಸ್ಸು ಗಂಡನನ್ನು ನೋಡಲಿಕ್ಕೆ ಹರಿಯುತ್ತಿದ್ದಷ್ಟು ಸಾವಿಗೆ ಹೆದರುತ್ತಿದ್ದಿಲ್ಲ. ಆದಕಾರಣ ಆತ್ಮಸಂರಕ್ಷಣದ ವಿಚಾರವೂ ಪತಿ ಭಕ್ತಿಯೂ ಆಕೆಯ ಮನಸ್ಸೆಂಬ ರಣಭೂಮಿಯಲ್ಲಿ ತುಮಲಯು ದ್ಧವನ್ನು ಮಾಡಲಾರಂಭಿಸಿದವು. ಒಮ್ಮೊಮ್ಮೆ ಮೊದಲನೆಯದಕ್ಕೂ ಮತ್ತೆ ಒಮ್ಮೊಮ್ಮೆ ಎರಡನೆಯದಕ್ಕೂ ಗೆಲವು ಬರುವಂತೆ ಕಂಡು ಬರುತ್ತಿತ್ತು. ಕೊನೆಗೆ ಪತಿಭಕ್ತಿಯು ದೂರದೃಷ್ಟಿಯ ನೆರವಿನಿಂದ ಆತ್ಮಸಂರಕ್ಷಣವಿಚಾರವನ್ನು ಸೋಲಿಸಿ ಓಡಿಸಿಬಿಟ್ಟಿತು. ಬಳಿಕ ಆ ವೀರವನಿತೆಯು ಆದುದಾಗಲಿ, ಪತಿಯ ಚರಣಾರವಿಂದದಲ್ಲೇ ಪ್ರಾ ಣವನ್ನು ಬಿಡಬೇಕು, ಇಲ್ಲವೆ ಜಾಣತನದಿಂದ ಪಾರಾಗಬೇಕೆಂದು ನಿಶ್ಚಯಿಸಿ, ತನ್ನ ನಂಬಿಗಸ್ಥರಾದ ಊಳಿಗದವರನ್ನು ಸಂಗಡ ಕರೆದು ಕೊಂಡು ಬಾದಶಹನಿದ್ದೆಡೆಗೆ ಹೊರಟಳು.

ನೂರಜಹಾನ ರಾಣಿಯು ಬರುತ್ತಾಳೆಂಬ ಸುದ್ದಿಯನ್ನು ಕೇಳಿದ ಕೂಡಲೆ ಮೊಹಬತ್ಖಾನನಿಗೆ ಪರಮಾನಂದವಾಯಿತು. ಅವನು ಹುಡುಕುತ್ತಿದ್ದ ಸಿಕಾರಿಯು ಕಯ್ಯಲ್ಲಿ ಸಿಕ್ಕಂತಾಯಿತು. ಆಗಲ ವನು ಆಕೆಯನ್ನು ಎದುರುಗೊಳ್ಳುವ ನೆವದಿಂದ ಕೆಲ ದಂಡಾಳುಗ ಳನ್ನು ಕಳುಹಿ, ಬಳಿಕ ಆಕೆಯನ್ನು ಬಾದಶಹನ ಬಳಿಗೆ ಹೋಗಗೊ ಡದೆ ಕಾವಲಲ್ಲಿರಿಸಿದನು.

ಈಕಾಲಕ್ಕೆ ರಾಣಿಯ ಮನಸ್ಸಿನಲ್ಲಿ ಬಂದ ವಿಚಾರಗಳು ತ ರ್ಕಿಸಲಸಾಧ್ಯವಾಗಿರುತ್ತವೆ. ತನ್ನ ಗಂಡನನ್ನು ಕಾಣಬೇಕೆಂಬ

ಆಕೆಯ ಕುತೂಹಲವು ಒತ್ತಟ್ಟಿಗೆ ಉಳಿದುಹೋಯಿತು. ತನ್ನ ಮೊದಲನೆಯ ಗಂಡನು ಸತ್ತ ಬಳಿಕ ಬಾದಶಹನು ತನ್ನರಮನೆಯಲ್ಲಿರಿಸಿದಾಗ ಒಂದಿಲ್ಲೊಂದುದಿನ ಬಾದಶಹನ ಕೃಪಾದೃಷ್ಟಿಯು ತನ್ನ ಮೇಲೆ ಬೀಳಬಹುದೆಂಬ ಆಶೆಯಾದರೂ ಇತ್ತು. ಈಗ ನಿರ್ದಯನಾದ ಶತ್ರುವಿನ ಕಯ್ಯಲ್ಲಿ ಸೆರೆಯಾಳಾಗಿ ಸಿಕ್ಕದ್ದರಿಂದ ಪಾರಾಗುವ ಹಂಚಿಕೆಯೇ ಹೊಳೆಯಲಿಲ್ಲ. ಆದ್ದರಿಂದ ಆಕೆಯು ಮುಂದುಗಾಣದೆ ದುಗುಡಿನಲ್ಲಿ ಮುಳುಗಿದಳು. ಮರುದಿವಸ ಬೆಳಿಗ್ಗೆ ಮೊಹಬತ್ಖಾನನು ಬಾದಶಹನ ಆಜ್ಞಾಪತ್ರವನ್ನು ತಂದು ಆಕೆಯ ಮುಂದಿರಿಸಿದನು. ಅದರಲ್ಲಿ ನೂರಜಹಾನಳು ಶಹರಿಯರನನ್ನು ಪಟ್ಟದ ಮೇಲೆ ಕುಳ್ಳಿರಿಸಲಿಕ್ಕೆ ಒಳಸಂಚು ಮಾಡಿದ್ದರಿಂದಲೂ ರಾಜ್ಯಕಾರ್ಯಗಳಲ್ಲಿ ಕಯ್ಹಾಕಿ ಪ್ರಜೆಗಳ ಮನಸ್ಸು ನೋಯಿಸಿದ್ದರಿಂದಲೂ ಆಕೆಯನ್ನು ಗಲ್ಲಿಗೆ ಹಾಕಿಸಬೇಕೆಂದು ಬರೆದಿತ್ತು! ಅದನ್ನು ನೋಡಿದ ಕೂಡಲೆ ಆಕೆಯ ಮೋರೆಯು ಕಪ್ಪಾಯಿತು, ಮತ್ತು ಕಯ್ಕಾಲು ತಣ್ಣಗಾದವು. ಈಕಾಲಕ್ಕಾದರೂ ಆಕೆಯ ಪ್ರಸಂಗಾವಧಾನವು ಆಕೆಯನ್ನು ಬಿಡಲಿಲ್ಲ; ಏಕಂದರೆ ಆಕೆಯು ಹೆದರಿದಂತೆ ತೋರಿಸದೆ, ಎಡೆಬಿಡದೆ ಬಿಸುಸುಯ್ಯದೆ, ಸಮಾಧಾನದಿಂದ ಮೊಹಬತ್ಖಾನನಿಗೆ ಹೇಳಿದ್ದೇನಂದರೆ—ನಾನು ತಪ್ಪು ಮಾಡಿರಲಿ, ಮಾಡದೆ ಇರಲಿ, ಬಾದಶಹನ ಅಪ್ಪಣೆಯನ್ನು ಮನ್ನಿಸಲಿಕ್ಕೆ ಬೇಕು. ನಾನು ಸಾವಿಗಂಜುವವಳಲ್ಲ, ಹುಟ್ಟಿದ ಪ್ರಾಣಿಯು ಒಂದಿಲ್ಲೊಂದು ದಿನ ಸಾಯಲಿಕ್ಕೇ ಬೇಕು. ನಾನು ಇಹಲೋಕದ ಎಲ್ಲ ಸೌಖ್ಯಗಳನ್ನುಪಭೋಗಿಸಿದ್ದರಿಂದ ಈಗಲೆ ನನ್ನ ಗಂಡನ ಕಣ್ಣ ಮುಂದೆ ಸಾಯಲಿಕ್ಕೆ ಸಿದ್ಧಳಾಗಿದ್ದೇನೆ. ಆದರೆ ನನ್ನದೊಂದು ಬಯಕೆಯುಂಟು. ಅದನ್ನು ತಾವು ಪೂರ್ಣಮಾಡುವಿರೆಂದು ತುಂಬಾ ನಂಬಿದ್ದೇನೆ. ಆಬಯುಕೆಯೇನಂದರೆ, ನನ್ನ ಗಂಡನ ದರ್ಶನವು.

ಈಗಂಭೀರವಾದ ಹೃದಯದ್ರಾವಕ ಮಾತನ್ನು ಕೇಳಿ, ಮೊಹಬತ್ಖಾನನು ಚಕಿತನಾದನು. ಅವನ ಕಲ್ಲಿನಂತಹ ಹೃದಯುವು ಕರಗಿ ನೀರಾಯಿತು. ಈ ಬಿನ್ನಹವನ್ನು ಮನ್ನಿಸಿದರೆ, ಅದರ ಪರಿಣಾಮವು

ಮುಂದೆ ಏನಾದೀತೆಂಬದು ಅವನಿಗೆ ಹೊಳೆಯಲಿಲ್ಲ. ಆದ್ದರಿಂದ ಅವನು ಆಕೆಯ ಅರಿಕೆಗೆ ಒಡಂಬಟ್ಟು ಕೂಡಲೆ ಆಕೆಯನ್ನು ಬಾದ ಶಹನ ಬಳಿಗೆ ಕರೆದುಕೊಂಡು ಹೋದನು. ಆಗ ಸಲೀಮ-ನೂರ ಜಹಾನರ ಮನಸ್ಸಿನಲ್ಲಿ ಬಂದ ವಿಚಾರಗಳನ್ನು ವಾಚಕರೇ ಊಹಿಸ ಬಹುದು. ರಾಣಿಯ ಅಳುಮೋರೆಯನ್ನು ನೋಡಿ, ಬಾದಶಹನ ಹೃದಯವು ಕರಗಿ ನೀರಾಯಿತು; ಅವನಿಗೆ ಮಾತಾಡಲಿಕ್ಕೆ ಬಾಯಿ ಬಾರದಂತಾಯಿತು. ಆಗ ಅವನು ಮೊಹಬತ್ಖಾನನ ಕಡೆಗೆ ಮೋರೆ ಯನ್ನು ತಿರುವಿ, ಗದ್ಗದ ಸ್ವರದಿಂದ—"ಮೊಹಬತ್ಖಾನ! ನೋಡು, ಈಕೆ ಹೇಗೆ ಅಳುತ್ತಾಳೆ, ಈಕೆಗೆ ಜೀವದಾನ ಕೊಡಬಾರದೇ?" ಅಂದನು. ಬಾದಶಹನ ಬಾಯಿಂದ ಈಶಬ್ದಗಳು ಹೊರಟ ಕೂ ಡಲೆ, ಧೀರೋದಾರನಾದ ಮೊಹಬತ್ಖನು—"ಮೊಗಲ್‌ಬಾದಶಹನ ಬಾಯಿಂದ ಹೊರಟ ಮಾತುಗಳು ಹುಸಿಯಾಗಲಾರವು. ತಮ್ಮ ಇಚ್ಛೆಯಿದ್ದರೆ, ರಾಣಿಗೆ ಜೀವದಾನವನ್ನು ಕೊಡಬಹುದು" ಎಂದು ಉತ್ತರಕೊಟ್ಟು, ಕಾವಲುಗಾರರನ್ನು ಸನ್ನೆಮಾಡಿ ಕಳುಹಿ, ತಾನೂ ಅಪ್ಪಣೆತೆಗೆದುಕೊಂಡು ತನ್ನ ಬಿಡಾರಕ್ಕೆ ಹೊರಟುಹೋದನು. ಆಕಾಲಕ್ಕೆ ಆದಂಪತಿಗಳಿಗಾದ ಸಂತೋಷವನ್ನು ಬಣ್ಣಿಸಲಳವಲ್ಲ.

ಬಳಿಕ ಬಾದಶಹನು ನೂರಜಹಾನ-ಮೊಹಬತ್ಖಾನರೊಡನೆ ಕಾಬೂಲಕ್ಕೆ ಹೋದನು. ಅಲ್ಲಿರುವಾಗ ಮೊಹಬತ್ಖಾನನೇ ರಾಜ್ಯದ ಎಲ್ಲ ಕೆಲಸಗಳನ್ನು ಸರಿಯಾಗಿ ಮಾಡುತ್ತಿದ್ದನು. ಬಾದಶಹನ ನಂಬಿಗೆಯು ಅವನಲ್ಲಿ ಪೂರ್ಣವಾಗಿತ್ತು. ಆದರೆ ರಾಣಿಯು ಹೇಗಾದರೂ ಮಾಡಿ ಅವನ ಮೇಲೆ ಸೇಡುತೀರಿಸಿ ಕೊಳ್ಳಬೇಕೆಂಬ ಉದ್ದೇಶದಿಂದ ಹೊಂಚುಹಾಕಿಕೊಂಡು ಕುಳಿತಿ ದ್ದಳು. ಒಂದು ದಿನ ಮೊಹಬತ್ಖಾನನು ಬಾದಶಹನನ್ನು ಕಾಣ ಲಿಕ್ಕೆ ಹೋಗುವಾಗ ದಾರಿಯಲ್ಲಿ ಕಾಬೂಲಿಯರು ಅವನ ದಂಡಿನ ಮೇಲೆ ಬಿದ್ದು ಎಷ್ಟೋ ಜನರನ್ನು ಕೊಂದುಹಾಕಿದರು. ರಾಣಿಯು ಕಾಬೂಲಿಯರನ್ನುಹುರಿದುಂಬಿಸಿದ್ದರಿಂದ ಈಕೊಲೆಯಾಯಿತೆಂದು ಕೆಲವರು ಬರೆಯುತ್ತಾರೆ; ಬೇರೆ ಕಾರಣದಿಂದ ಹೀಗಾಯಿತೆಂದು

ಮತ್ತೆ ಕೆಲವರ ಲೇಖವಿದೆ.* ಅದು ಹೇಗೇ ಇರಲಿ, ಇದು ರಾಣಿ
ಯ ಕೃತ್ಯವೆ ಇರುತ್ತದೆಂದು ಮೊಹಬತ್ಖಾನನ ತಿಳುವಳಿಕೆಯಾಯಿ
ತು. ಆದ್ದರಿಂದ ಅವನು ಕೂಡಲೆ ಆವೂರನ್ನು ಬಿಟ್ಟು ಬಾದಶಹ
ನೊಡನೆ ಲಾಹೋರದ ಹಾದಿಯನ್ನು ಹಿಡಿದನು. ದಾರಿಯಲ್ಲಿ ಒಂದು
ಸೋಜಿಗದ ಸಂಗತಿಯು ಒದಗಿತು. ಅದೇನಂದರೆ, ಮೊಹಬತ್ಖಾ
ನನು ಇಷ್ಟು ದಿವಸ ತನಗೆ ನೆರವಾಗಿ ಮೋಗಲ್ ಬಾದಶಾಹಿಯ
ರಾಜ್ಯಸೂತ್ರವನ್ನು ತೆಗೆದುಕೊಳ್ಳಲಿಕ್ಕೆ ಅನುಕೂಲರಾದ ತನ್ನ ಬೆಂಬ
ಲದ ದಂಡಿನವರಿಗೆ ತಂತಮ್ಮ ಮನೆಗಳಿಗೆ ಹೋಗಲಿಕ್ಕೆ ಅಪ್ಪಣೆ
ಕೊಟ್ಟನು. ಇದೇಕಿರಬಹುದು? ಈಪ್ರಶ್ನದ ಉತ್ತರವನ್ನು ಒಬ್ಬ
ಮುಸಲ್ಮಾನ ಇತಿಹಾಸಕರ್ತನಾದರೂ ಕೊಟ್ಟಿಲ್ಲ. ಆದ್ದರಿಂದ
ನಮಗೆ ಅನುಮಾನದ ಹೊರತು ಬೇರೆಯಾವ ಮಾರ್ಗವೇ
ಇಲ್ಲ; ಅವನಿಗೆ ವೈರಾಗ್ಯ ಹುಟ್ಟಿರಬಹುದೋ? ಅಲ್ಲ; ಏಕೆಂ
ದರೆ, ಮುಂದೆ ಅವನು ತುಸು ದಿವಸದಲ್ಲೇ ಮತ್ತೆ ರಾಜ್ಯಕಾರ್ಯ
ದಲ್ಲಿ ಕಯ್ಹಾಕಿದನು. ಅವನು ತನ್ನ ಮೇಲೆ ವಿಷಕಾರುತ್ತಿದ್ದ
ನೂರಜಹಾನ ರಾಣಿಗೆ ಹೆದರಿ ಹೀಗೆ ಮಾಡಿರಬಹುದೋ? ಅಲ್ಲ;
ಏಕಂದರೆ ರಾಜ್ಯಸೂತ್ರವು ಅವನ ಕಯ್ಯಲ್ಲೇ ಇತ್ತು; ಬಾದಶಹನು
ಅವನು ಹೇಳಿದಂತೆ ಕೇಳುತ್ತಿದ್ದನು, ಆದ್ದರಿಂದ ರಾಣಿಯ ಸಂಬಂ
ಧದಿಂದ ಅವನಿಗೆ ತುಸು ಹೆದರಿಕೆ ಇದ್ದರೂ ಹೆಚ್ಚಿನ ಹೆದರಿಕೆ ಇರ
ಲಿಕ್ಕೆ ಕಾರಣವಿಲ್ಲ. ಅವನು ಉಳಿದ ಸರದಾರರಿಗೆ ಹೆದರಿ ಹೀಗೆ
ಮಾಡಿರಬಹುದೋ? ಅಲ್ಲ; ಏಕೆಂದರೆ, ಅವನು ಸ್ವತಃಶೂರನಾ
ಗಿದ್ದನು, ಮತ್ತು ಅವನ ಕಯ್ಕೆಳಗೆ ದೊಡ್ಡ ದಂಡು ಇತ್ತು. ಬೇಕಾ
ದರೆ ಬಂಡುಗಾರನಾದ ಶಹಾಜಹಾನನನ್ನು ಕೂಡಿ ಅವನನ್ನು
ಪಟ್ಟದ ಮೇಲೆ ಕುಳ್ಳಿರಿಸಲಿಕ್ಕೆ ಬರುವಂತಿತ್ತು.

ಮೇಲೆ ಬರೆದ ಕಾರಣಗಳೊಳಗೆ ಕಡೆಯ ಎರಡು ಕಾರಣಗ
ಳಲ್ಲಿ ತುಸು ತಥ್ಯಾಂಶವಿದ್ದಂತೆ ತೋರುತ್ತದೆ. ಆದರೆ ಅವೇ

---

* ಮೋಗಲ್ ಬಾದಶಾಹಿ, ಪೂರ್ವಾರ್ಧ, ಪುಟ ೧೦೬ ನೋಡಿರಿ.

ಮುಖ್ಯಕಾರಣಗಳಾಗಲಾರವು. ಹಿಂದೆ ಹೇಳಿದಂತೆ ರಾಣಿಯು ಅವನ ಮೇಲೆ ಸೇಡುತೀರಿಸಿಕೊಳ್ಳಲಿಕ್ಕೆ ಹೊಂಚುಹಾಕಿಕೊಂಡು ಕುಳಿತಿದ್ದಳು. ಆಕೆಯಿಂದ ಉಪಕೃತರಾದ ಎಷ್ಟೋ ಜನರು ಹೆಂಗಸರೂ ಗಂಡಸರೂ ಅವನ ಮೇಲೆ ಕಣ್ಣಿಟ್ಟಿದ್ದರು. ಆಕೆಯ ಅಣ್ಣನ ಸೊಸೆಯಾದ ಸಾಹಿಸ್ತೈಖಾನನ ಹೆಂಡತಿಯಂತೂ ಅವ ನನ್ನು ಹೊಡೆಯುತ್ತೇನೆಂದು ಪ್ರತಿಜ್ಞೆಮಾಡಿದ್ದಳು. ರಾಣಿಯ ಕಡೆಯುವರ ಎಲ್ಲ ಆಲೋಚನೆಗಳು ಬಾದಶಹನ ಕಿವಿಗೆ ಬಿದ್ದಿದ್ದವು; ಮತ್ತು ಅವನು ಪ್ರತಿಕಾರಮಾಡುವ ಶಕ್ತಿಯು ತನ್ನಲ್ಲಿಲ್ಲದರಿಂದ ಅವುಗಳನ್ನೆಲ್ಲ ಮೊಹಬತ್ಖಾನನಿಗೆ ತಿಳಿಸಿದ್ದನು.

ಈಪ್ರಸಂಗದಲ್ಲಿ ಮೊಹಬತ್ಖಾನನ ನಡತೆಯು ಮೂರು ವಿಚಾ ರಗಳ ಫಲಿತಪ್ರೇರಣೆಯಾದಂತೆ ತೋರುತ್ತದೆ. ಆವಿಚಾರಗಳಾ ವವೆಂದರೆ:—೧. ಅವನ ಮನಸ್ಸಿನಲ್ಲಿ ರಾಜ್ಯಲೋಭವಿದ್ದಿಲ್ಲ. ಅವನು ಆತ್ಮಸಂರಕ್ಷಣಾರ್ಥವಾಗಿ ಸೇಲಿಮನನ್ನು ತನ್ನ ಕಯ್ಯೊಳಗೆ ತೆಗೆದುಕೊಂಡಿದ್ದನೇ ಹೊರತು ಬೇರೇನು ಉದ್ದೇಶವಿರಲಿಲ್ಲ. ಆದ್ದ ರಿಂದ ಕಸುವಿನಿಂದ ನೂರಜಹಾನಳ ಒಳಸಂಚನ್ನು ನಿಲ್ಲಿಸಲಿಕ್ಕೆ ಅವನ ಮನಸ್ಸು ಒಡಂಬಡಲಿಲ್ಲ. ೨. ರಾಣಿಯು ಅವನ ಮೇಲೆ ಬೆಂಕಿಯನ್ನು ಕಾರುತ್ತಿದ್ದಳು. ಬಾದಶಹನಿಗೆ ಸರ್ವಸ್ವಾತಂತ್ರ್ಯ ವನ್ನು ಕೊಟ್ಟರೆ, ಆಕೆಯ ಸಿಟ್ಟು ಕಡಮೆಯಾಗಬಹುದೆಂದು ಅವನು ಆಲೋಚಿಸಿರಬಹುದು. ೩. ಬಾದಶಹನು ಕಾಬೂಲ ದಲ್ಲಿರುವ ತನಕ ತನ್ನ ಹಗೆಗಳಾದ ಸರದಾರರ ಕಾಟವಿದ್ದಿಲ್ಲ. ಆದರೆ ಅವನು ಲಾಹೋರಕ್ಕೆ ಬಂದ ಬಳಿಕ ರಾಣಿಯ ಪ್ರೇರಣೆ ಯಿಂದಾಗಲಿ ಬಾದಶಹನ ವಂಚಕತನದಿಂದಾಗಲಿ ತನ್ನ ಹಗೆಗ ಳಾದ ಸರದಾರರು ಒಟ್ಟುಗೂಡಿ ಬಾದಶಹನ ಕಿವಿಯೂದಿ ತನ್ನನ್ನು ಗೋಳಾಡಿಸಬಹುದೆಂಬ ವಿಚಾರವು ಅವನ ಮನಸ್ಸಿನಲ್ಲಿ ಬಂದಿರ ಬಹುದು.

ಈವಿಚಾರಗಳನ್ನು ಮನಸ್ಸಿನಲ್ಲಿ ತಂದು ತನ್ನ ದಂಡಿನವರಿಗೆ ಅಪ್ಪಣೆಕೊಟ್ಟು ಬಾದಶಹನಿಗೆ ಸರ್ವಸ್ವಾತಂತ್ರ್ಯವನ್ನು ಕೊಟ್ಟು,

೬ ತಿಂಗಳ ಮೊದಲು ಬಾದಶಹನನ್ನು ತಾನು ಸೆರೆಹಿಡಿದ ಜೆಹ ಲಮ್ ಹೊಳೆಯ ದಂಡೆಗೆ ಬರುವಷ್ಟರಲ್ಲಿ ರಾಣಿಯ ಉಪಟಲ ದಿಂದ ಮೊಹಬತ್ಖಾನನಿಗೆ ಪಾಳಯದಿಂದ ಓಡಿಹೋಗಬೇಕಾ ಯಿತು. ಕೂಡಲೆ ರಾಣಿಯು ಮೊಹಬತ್ಖಾನನು ರಾಜದ್ರೋಹಿ ಯೆಂತಲೂ ಅವನನ್ನು ಹಿಡಿದವರಿಗೆ ಇನಾಮು ದೊರೆಯುವದೆಂ ತಲೂ ಒಟ್ಟುಹುಕುಮನ್ನು ಬಾದಶಹನಿಂದ ತೆಗಿಸಿದಳು; ತನ್ನ ಅಣ್ಣನಾದ ಅಸಫಜಹನನ್ನು ಕರಿಸಿ, ಅವನನ್ನು ಮತ್ತೆ ಮುಖ್ಯ ಮಂತ್ರಿಯನ್ನು ಮಾಡಿದಳು; ಮತ್ತು **ಸುಲ್ತಾನಪರ್ವೇಜ**ನು ಅದೇ ಕಾಲಕ್ಕೆ ಸತ್ತುದರಿಂದ ಅವನ ಅಧಿಕಾರವನ್ನು **ಖಾನಜಹಾನ ಲೋಡಿ**ಯೆಂಬವನಿಗೆ ಕೊಡಿಸಿದಳು.

ಆದರೆ ರಾಣಿಯ ಅನರ್ಗಲಿತವಾದ ಅಧಿಕಾರವು ಸಾರೋ ದ್ಧಾರವಾಗಿ ಬಹು ದಿವಸ ನಡೆಯಲಿಲ್ಲ, ಬಾದಶಹನಿಗೆ ೬-೭ ವರ್ಷದಿಂದ ದಮ್ಮಿನ ಉಪದ್ರವವಿತ್ತು. ಸುಲ್ತಾನಪರ್ವೇಜನು ಸತ್ತಸುದ್ದಿಯು ಬಂದ ಕೂಡಲೆ ಆ ಉಪದ್ರವವು ಹೆಚ್ಚಾಯಿತು. ಆದ್ದರಿಂದ ರಾಣಿಯು ಅವನನ್ನು ಕರಕೊಂಡು ಕಾಶ್ಮೀರಕ್ಕೆ ಹೋ ದಳು. ಆದರೆ ಗುಣವಾಗುವುದರ ಬದಲು ಅಲ್ಲಿಯ ಶೀತಹವೆ ಯಿಂದ ಅವನ ಬೇನೆಯು ಹೆಚ್ಚಾಯಿತು. ಆದಕಾರಣ ರಾಣಿಯು ಅವನನ್ನು ಕರಕೊಂಡು ತಿರುಗಿ ಲಾಹೋರಕ್ಕೆ ಹೊರಟಳು. ಆದರೆ ಹಾದಿಯಲ್ಲಿ **ಮುತ್ತಿ**ಯೆಂಬ ಊರೊಳಗೆ ಬಾದಶಹನು ಮಡಿದನು (೯ ನವಂಬರ ೧೬೨೭). ಅವನು ರಾಣಿಯ ಪ್ರೇರಣೆ ಯಿಂದ ತನ್ನ ನಾಲ್ಕನೆಯ ಮಗನಾದ **ಸುಲ್ತಾನ ಶಹರಿಯ**ರನು ತನ್ನ ತರುವಾಯ ಪಟ್ಟದ ಮೇಲೆ ಕೂಡ್ರಬೇಕೆಂದು ಮೃತ್ಯುಪತ್ರ ದಲ್ಲಿ ಬರೆದಿದ್ದನು.

ವಾಡಿಕೆಯಾಗಿ ಜನರು ಗೆದ್ದ ಎತ್ತಿನ ಬಾಲ ಹಿಡಿಯುತ್ತಾ ರೆಂಬ ಗಾದೆಯ ಮಾತು ಸುಳ್ಳಲ್ಲ. ಜಹಂಗೀರನಿರುವ ವರೆಗೆ ಎಲ್ಲರೂ ರಾಣಿಯನ್ನು ಓಲಯಿಸುತ್ತಿದ್ದರು. ಅವನು ಸತ್ತ ಕೂಡ ಲೆ ಎಷ್ಟೋ ಜನರು ಆಕೆಯನ್ನೂ ಆಕೆಯ ಅಳಿಯನಾದ ಶಹರಿ

ಯರನನ್ನೂ ಬಿಟ್ಟು, ಕಿರಿಯಾದ ಶಹಾಜಹಾನನ ಪಕ್ಷಹಿಡಿದರು. ರಾಣಿಯ ಅಣ್ಣನಾದ ಅಸಫ್‌ಜಹನಾದರೂ ತನ್ನ ಅಳಿಯನಾದ ಶಹಾಜಹಾನನನ್ನು ಕೂಡಿದನು. ಆದ್ದರಿಂದ ಶಹಾಜಹಾನನು ಅನಾಯಾಸವಾಗಿ ಪಟ್ಟವೇರಿ, ನೂರಜಹಾನ ರಾಣಿಯನ್ನು ಲಾಹೋರದಲ್ಲಿರಿಸಿ, ಆಕೆಗೆ ಪ್ರತಿತಿಂಗಳಿಗೆ ೨೦,೦೦೦ ರೂಪಾಯಿ ಜೀವನಾಂಶವನ್ನು ಗೊತ್ತುಮಾಡಿಕೊಟ್ಟನು. ಆಕೆಯು ಜಾಣೆಯಾದ್ದರಿಂದ ರಾಜಕೀಯ ಕೆಲಸದಲ್ಲಿ ಎಷ್ಟುಮಾತ್ರವು ಕಯ್ಹಾಕದೆ, ತನಗೆ ಬಂದ ಹಣವನ್ನು ಧರ್ಮಕೃತ್ಯಗಳಲ್ಲಿ ವೆಚ್ಚಮಾಡುತ್ತ ದೇವತೋಪಾಸನೆಯಲ್ಲಿಯೂ ಪರೋಪಕಾರದಲ್ಲಿಯೂ ತನ್ನ ಉಳಿದ ಆಯುಷ್ಯವನ್ನು ಕಳೆದಳು. ಮುಂದೆ ಆಕೆಯು ತನ್ನ ೭೨ನೆಯ ವಯಸ್ಸಿನಲ್ಲಿ ಅಂದರೆ ೧೬೪೫ರಲ್ಲಿ ಸತ್ತಳು. ಆಕೆಗೆ ತನ್ನ ಮೊದಲನೆಯ ಗಂಡನಿಂದ ಒಬ್ಬ ಮಗಳು ಮಾತ್ರ ಹುಟ್ಟಿದ್ದಳು. ಈ ಮಗಳನ್ನೇ ಆಕೆಯು ಬಾದಶಹನ ೪ನೆಯ ಮಗನಾದ ಸುಲ್ತಾನ ಶಹರಿಯರನಿಗೆ ಮದುವೆಮಾಡಿಕೊಟ್ಟಿದ್ದಳು. ಜಹಂಗೀರನಿಂದ ಆಕೆಗೆ ಮಕ್ಕಳಾಗಿದ್ದಿಲ್ಲ.

ನೂರಜಹಾನರಾಣಿಯು ವೀರವನಿತೆಯಾಗಿದ್ದಳೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಆಕೆಯು ಗುರಿಹೊಡೆಯುವದರಲ್ಲಿ ಕುಶಲಳೂ ಎದೆಗಾರ್ತಿಯೂ ಆಗಿದ್ದಳೆನ್ನಲಿಕ್ಕೆ ಆಕೆಯು ತನ್ನ ಗಂಡನನ್ನು ಮೊಹಬತ್ಖಾನನಿಂದ ಬಿಡಿಸಿಕೊಳ್ಳಲಿಕ್ಕೆ ಮಾಡಿದ ಸಹಾಸವೇ ದೃಷ್ಟಾಂತವು. ಆಕೆಯಲ್ಲಿ ಪರೋಪಕಾರಗುಣವು ಪಿರಿದಾಗಿತ್ತೆಂಬದು ಆಕೆಯು ಸುಮಾರು ೫೦೦ ಮಂದಿ ಬಡ ಹುಡುಗಿಯರ ಮದುವೆಮಾಡಿದ್ದರಿಂದ ಸ್ಪಷ್ಟವಾಗಿ ತೋರುತ್ತದೆ. ಆಕೆಯು ಪ್ರಸಂಗಾವಧಾನವುಳ್ಳವಳೂ ಚದುರಳೂ ಜಾಣೆಯೂ ಆಗಿದ್ದಳೆಂಬದು ಆಕೆಯು ತನ್ನ ಮೇಲೆ ಬಂದ ದುರ್ಘಟಪ್ರಸಂಗಗಳಲ್ಲಿ ಪಾರಾದ ಬಗೆಗಳಿಂದಲೇ ತಿಳಿಯುತ್ತದೆ. ಆಕೆಯು ಆಕಾಲಕ್ಕೆ ಹೆಂಗಸರಿಗೆ ಯೋಗ್ಯವೆಂದೆಣಿಸಲ್ಪಟ್ಟ ನೃತ್ಯ-ಗಾಯನ-ಚಿತ್ರ ಮುಂತಾದ ಕಲೆಗಳಲ್ಲಿ ನಿಪುಣಳಾಗಿದ್ದಳು. ಆಕೆಗೆ ಗಂಡುಮಕ್ಕಳಿಲ್ಲದಿದ್ದರೂ

ತನ್ನ ತಂಗಿಯ ಮಗನಾದ ಅಲ್ಲಾ ಎಂಬವನನ್ನು ಚಿಕ್ಕಂದಿನಿಂದ ಜೋಕೆಮಾಡಿ ಬೆಳಿಸಿದ್ದಳು. ಆಕೆಯು ರಾಜಕಾರ್ಯದಲ್ಲಿ ಕ ಯ್ಹಾಕಿದ್ದು ತಪ್ಪೆಂದು ಕೆಲವರು ಹೇಳಬಹುದು. ಆದರೆ ರಾಜ ವಿದ್ಯೆಯು ಬಹು ಶ್ರಮಸಾಧ್ಯವಾದ ಕೆಲಸವು. ದೊಡ್ಡ ದೊಡ್ಡ ಮುತ್ಸದಿಗಳು ರಾಜ್ಯಪರಿಪಾಲನೆಯಲ್ಲಿ ತಪ್ಪುಮಾಡಿ ದೇಶಕ್ಕೆ ಅನ ರ್ಥವನ್ನುಂಟುಮಾಡಿದ ಉದಾಹರಣೆಗಳು ಎಷ್ಟೋ ಇರುತ್ತವೆ. ಆದರೆ ನೂರಜಹಾನಳಂತೂ ಹೆಂಗಸು. ಆದರೂ ಸೆರೆಬಡಕನಾದ ಸೇಲಿಮನ ಆಳಿಕೆಯಲ್ಲಿ ರಾಜ್ಯವು ಇಷ್ಟು ಶಾಂತವಾಗಿದ್ದುದು ರಾ ಣಿಯ ಜಾಣ್ಮೆಗೂ ಆಕೆಯ ಆಪ್ತೇಷ್ಟರ ಅನುಭವಕ್ಕೂ ಭೂಷಣಾ ಸ್ಪದವೇ ಸರಿ.

---



## ೩. ಅವರಂಗಜೇಬ (ಅಲಮ್ಗೀರ).

ಅವರಂಗಜೇಬನು ಶಹಾಜಹಾನನ ಮೂರನೆಯ ಮಗನೂ ಅಕಬರನ ಮರಿಮಗನೂ ಆಗಿದ್ದನು. ಇವನು ಜಹಂಗೀರನ ಮಗನಾದ ಶಹಾಜಹಾನನಿಗೆ ಸುಲ್ತಾನಾಕುಡ್ಸಿಯೆಯಿಂದ ಅಕ್ಟೋಬರ ೧೬೧೮ರಲ್ಲಿ ಹುಟ್ಟಿದನು. ಆಗ ಜಹಂಗೀರ ಬಾದಶಹನು ಸಂತೋಷಬಟ್ಟು ಆಮಗುವಿಗೆ ಅವರಂಗಜೇಬ (ಸಿಂಹಾಸನಾಭರಣ) ಎಂದು ಹೆಸರಿಟ್ಟನು. ಮುಂದೆ ಶಹಾಜಹಾನನು ಬಂಡುಮಾಡಿ ಸೋತು ತನ್ನ ಗಂಡುಮಕ್ಕಳಾದ ದಾರಾ, ಸುಜಾ, ಅವರಂಗಜೇಬರನ್ನು ತನ್ನ ತಂದೆಯ ಹತ್ತರ ಓಲಿಟ್ಟಾಗ, ಅವರಂಗೆ

ಜೇಬನಿಗೆ ೬ ವರುಷಗಳು ಆಗಿದ್ದವು. ಮುಂದೆ ೧೬೩೩ರಲ್ಲಿ ಚಿಕ್ಕ ಹುಡುಗನಾದ ಅವರಂಗಜೇಬನು ಬುಂದೇಲದ ದಂಡಯಾತ್ರೆಯಲ್ಲಿ ಬಲುಗಲಿತನವನ್ನು ತೋರಿಸಿ, ತನ್ನ ತಂದೆಯನ್ನು ಮೆಚ್ಚಿಸಿದನು. ಮರುವರುಷದ ಹುಟ್ಟಿದ ದಿವಸ ಅವನು ಒಂದು ದೊಡ್ಡ ಆನೆಯೊಡನೆ ಕಾದಿ ಅದನ್ನು ಕೊಂದು ಎಲ್ಲರನ್ನು ಅಚ್ಚರಗೊಳಿಸಿದನು. ಅವನು ೧೬೩೮ರಲ್ಲಿ ದಕ್ಷಿಣದ ಸುಬೇದಾರನಾದನು. ಮುಂದೆ ೬ ವರ್ಷಗಳ ಮೇಲೆ **ದಾರಾನು** ತನ್ನ ತಂದೆಗೆ ಹೇಳಿ ಅವನನ್ನು ಗುಜರಾಥಕ್ಕೆ ವರ್ಗಮಾಡಿಸಿದನು. ೧೬೪೫ರಲ್ಲಿ ಅವರಂಗಜೇಬ-ಮುರಾದರು ಅಲ್ಲಿಮರ್ದಾನಖಾನನೆಂಬ ಸರದಾರನೊಡನೆ ಬಲ್ಖಪ್ರಾಂತವನ್ನು ಗೆಲ್ಲಲಿಕ್ಕೆ ಹೋದರು. ಆಗ ಆ ಪ್ರಾಂತವು ಇರಾಣದ ಬಾದಶಹನ ವಶದಲ್ಲಿತ್ತು. ಅದು ಮೊಗಲರ ಕಯ್ವಶವಾದರೂ ಯುಜಬೆಕ್ಕರ ಉಪದ್ರವು ತಪ್ಪಲಿಲ್ಲ. ಆದ್ದರಿಂದ ಅವರ ಹಾವಳಿಯನ್ನು ತಾಳಲಾರದೆ ಮುರಾದನು ದಿಲ್ಲಿಗೆ ಓಡಿ ಬಂದುದರಿಂದ, ಅವರಂಗಜೇಬನೊಬ್ಬನೇ ಯುಜಬೆಕ್ಕರ ಕಾಟಕ್ಕೆ ಗುರಿಯಾದನು. ಅಷ್ಟರಲ್ಲಿ ಬಾದಶಹನು ಗೆದ್ದ ಪ್ರಾಂತವನ್ನು **ನಾಝರ ಮುಹಮ್ಮದನೆಂಬ** ಸರದಾರನಿಗೆ ಒಪ್ಪಿಸಿ, ತಿರುಗಿ ಬರಬೇಕೆಂದು ಹುಕುಮುಕಳುಹಿದ್ದರಿಂದ, ಅವರಂಗಜೇಬನು ಸಂತೋಷದಿಂದ ಕಾಬೂಲಕ್ಕೆ ಮರಳಿ ಬಂದನು. ಅತ್ತ ಯುಜಬೆಕ್ಕರು ಅವನು ಹಿಂದೆ ಬಿಟ್ಟು ಬಂದ ಮೊಗಲರ ದಂಡನ್ನೆಲ್ಲ ನಾಶಮಾಡಿದರು (೧೬೪೭).

ಮರುವರುಷ ಪಾರ್ಸಿಸ್ಥಾನದ ಬಾದಶಹನಾದ **೨ನೆಯ ಶಹಾಅಬ್ಬಾಸನು** ಕಂದಹಾರವನ್ನು ಹಿಡಿದುಕೊಂಡನೆಂದು ಸುದ್ದಿ ಬಂದುದರಿಂದ, ಅವರಂಗಜೇಬನು ದಂಡಿನೊಡನೆ ಅಲ್ಲಿಗೆ ಹೋಗಿ, ಅದನ್ನು ಮುತ್ತಿದನು (೧೬೪೯). ಅವನು ಎಷ್ಟು ಪ್ರಯತ್ನಮಾಡಿದರೂ ಆಪೊಳಲು ಅವನ ಕಯ್ಸೇರಲಿಲ್ಲ. ಆದ್ದರಿಂದ ಮರುವರುಷ ಅವನು ಮತ್ತೆ ದೊಡ್ಡ ದಂಡಿನೊಡನೆ ಅಲ್ಲಿಗೆ ಹೋಗಿ ಅದನ್ನು ಮುತ್ತಿದನು. ಆದರೆ ಅವನ ಪ್ರಯತ್ನಗಳೆಲ್ಲ ನಿಷ್ಫಲವಾದ್ದ

ರಿಂದ ಶಹಾಜಹಾನನು ಅವನನ್ನು ತಿರುಗಿ ಕರಿಸಿ, ದಕ್ಷಿಣದೇಶದ ಸುಬೇದಾರನನ್ನು ಮಾಡಿದನು (೧೬೫೨).

ಇದೇ ಸಮಯದಲ್ಲಿ ಗೋವಳಕೊಂಡದ ಅರಸನಾದ **ಅಬ್ದುಲ್ ಕುತುಬ್‌ಶಹನಿಗೂ** ಅವನ ಮಂತ್ರಿಯಾದ **ಮೀರಜುಮ್ಲನಿಗೂ** ವಿರೋಧ ಹುಟ್ಟಿತ್ತು. ಅವರಂಗಜೇಬನು ಶಹಾಜಹಾನನ ಅಪ್ಪಣೆ ಪಡೆದುಕೊಂಡು, ಮೀರಜುಮ್ಲನ ಪಕ್ಷವನ್ನು ಸ್ವೀಕರಿಸಿ, ತನ್ನ ಮಗನಾದ **ಸುಲ್ತಾನ ಮಹಮ್ಮದನನ್ನು** ಬಂಗಾಲಕ್ಕೆ ಕಳುಹುವ ನೆವದಿಂದ ಗೋವಳಕೊಂಡದ ರಾಜಧಾನಿಯಾದ **ಹೈದರಾಬಾದದ** ಹತ್ತರ ಹೋಗಿ, ತನಗೆ ಆತಿಥ್ಯಮಾಡಲುದ್ಯುಕ್ತನಾದ ಅಬ್ದುಲ್ ಕುತುಬ್‌ಶಹನ ಮೇಲೆ ಒಮ್ಮಿಂದೊಮ್ಮೆ ಬಿದ್ದು, ಅವನನ್ನು ಗೋವಳಕೊಂಡಕ್ಕೆ ಓಡಿಸಿ, ಅವನ ರಾಜಧಾನಿಯನ್ನು ಸುಲಿದನು (೧೬೫೬)!! ಬಳಿಕ ಮೀರಜುಮ್ಲನು ತನ್ನ ದಂಡಿನೊಡನೆ ಬಂದು ಅವನನ್ನು ಕೂಡಿದ್ದರಿಂದ, ಅವರಂಗಜೇಬನು ಗೋವಳಕೊಂಡವನ್ನು ಮುತ್ತಿದನು. ಆಗ ಅಬ್ದುಲ್‌ಶಹನು ನಿರುಪಾಯನಾಗಿ ತನ್ನ ಮಗಳನ್ನು ಸುಲ್ತಾನ ಮಹಮ್ಮದನಿಗೆ ಮದುವೆಮಾಡಿಕೊಟ್ಟು, ತನ್ನ ಕೆಲವು ರಾಜ್ಯವನ್ನು ವರದಕ್ಷಣೆಯಾಗಿ ಕೊಡಲಿಕ್ಕೂ ವರುಷಕ್ಕೆ ೨ ಕೋಟಿ ರೂಪಾಯಿ ಕಪ್ಪವನ್ನು ಕೊಡಲಿಕ್ಕೂ ಒಪ್ಪಿಕೊಂಡನು.

ಇಷ್ಟರಲ್ಲಿ ವಿಜಾಪುರದ ಅರಸನಾದ **ಮಹಮ್ಮದ ಅದಿಲ್ ಶಹನು** ತೀರಿಕೊಂಡುದರಿಂದ ಅವನ ಮಗನಾದ **ಅಲ್ಲಿಯು** ಪಟ್ಟವೇರಿದನು (ನವಂಬರ ೧೬೫೬). ಅಲ್ಲಿಯು ಮಹಮ್ಮದನ ಮಗನಲ್ಲೆಂಬ ನೆವದಿಂದ ಅವರಂಗಜೇಬನು ಆದಿಲ್‌ಶಾಹಿ ರಾಜ್ಯವನ್ನೊಳನುಗ್ಗಿ, ಬೀದರವನ್ನು ಹಿಡಿದುಕೊಂಡು, ವಿಜಾಪುರವನ್ನು ಮುತ್ತಿದನು. ಆಗ ಅಲ್ಲಿಯು ನಿರುಪಾಯನಾಗಿ ಅವನು ಹೇಳಿದಂತೆ ಕೇಳಲಿಕ್ಕೊಡಂಬಟ್ಟನು (೧೬೫೭). ಅಷ್ಟರಲ್ಲಿ ಶಹಾಜಹಾನನು ಬೇನೆಬಿದ್ದನೆಂಬ ಸುದ್ದಿಯು ಬಂದುದರಿಂದ ಅವರಂಗಜೇಬನು ಅಲ್ಲಿಯಿಂದ ಹೇರಳ ದ್ರವ್ಯವನ್ನು ಸೆಳೆದುಕೊಂಡು, ಆಗ್ರಾದ ಹಾದಿಯನ್ನು ಹಿಡಿದನು.

ಶಹಾಜಹಾನನಿಗೆ **ದಾರಾ, ಸುಜಾ, ಅವರಂಗಜೀಬ, ಮುರಾದ** ಎಂಬ ನಾಲ್ಕು ಮಂದಿ ಗಂಡುಮಕ್ಕಳೂ, **ಜಹನಾರಾ, ರೋಷಾನ್ರಾಯಿ** ಎಂಬ ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಜಹನಾರಾ ದಾರಾ ಇವರಿಬ್ಬರ ಮೇಲೆ ಶಹಾಜಹಾನನ ಪ್ರೀತಿಯು ಪಿರಿದಾಗಿತ್ತು. ಇವರಿಬ್ಬರು ತಂದೆಯ ಹತ್ತರವೇ ಇರುತ್ತಿದ್ದರು. ಸುಜಾನು ಬಂಗಾಲದ ಸುಬೇದಾರನಾಗಿದ್ದನು; ಮುರಾದನು ಗುಜರಾಥದ ಸುಬೇದಾರನಾಗಿದ್ದನು; ಮತ್ತು ಹಿಂದೆ ಹೇಳಿದಂತೆ ಅವರಂಗಜೀಬನು ದಕ್ಷಿಣದ ಸುಬೇದಾರನಾಗಿದ್ದನು. ದಾರಾನು ಅಕಬರನಂತೆ ಹಿಂದೂಜನರಿಗೆ ಅನುಕೂಲನಾದ್ದರಿಂದ ಮುಸಲ್ಮಾನರಿಗೆ ಅಪ್ರಿಯನಾಗಿದ್ದನು. ಸುಜಾನು ಸಿಯಾಪಂಥಕ್ಕೆ ಸೇರಿದ್ದನು. ಅವರಂಗಜೀಬನು ಮಾತ್ರ ಮೊದಲಿನಿಂದ ಪೂರ್ಣಧರ್ಮಾಭಿಮಾನಿಯಾಗಿದ್ದನು. ಮುರಾದನು ಕಲಿಯಾದರೂ ವಿಷಯಾಸಕ್ತನೂ ಅವಿಚಾರಿಯೂ ಆಗಿದ್ದನು.

ಈಕಾಲಕ್ಕೆ ಅವರಂಗಜೀಬನು ಕಪಟದಿಂದ ಮುರಾದನನ್ನು ಮೋಸಗೊಳಿಸಿ, ಬಾದಶಹನಾಗಬೇಕೆಂಬ ತನ್ನ ಬಯುಕೆಯನ್ನು ಪೂರ್ಣಮಾಡಿಕೊಂಡನು. ಅದು ಹೇಗಂದರೆ:—ತನ್ನ ತಂಗಿಯಾದ ರೋಷಾನ್ರಾಯಿಯಿಂದ ಆಗ್ರಾದಲ್ಲಿ ನಡೆದ ಸಂಗತಿಗಳನ್ನು ತಿಳಿದುಕೊಂಡು, ತನಗೆ ರಾಜ್ಯಲೋಭವಿಲ್ಲೆಂತಲೂ, ದಾರಾ ಇಲ್ಲವೆ ಸುಜಾ ಬಾದಶಹನಾದರೆ ಧರ್ಮವೆಲ್ಲ ಕೆಟ್ಟುಹೋಗುವದೆಂತಲೂ ಮುರಾದನಿಗೆ ಬೋಧಿಸಿ, ಅವನನ್ನು ಬಾದಶಹನಾಗಲಿಕ್ಕೊಡಂಬಡಿಸಿ, ಸಮಯುವನ್ನು ನೋಡುತ್ತ ಕುಳಿತನು. ಅಷ್ಟರಲ್ಲಿ ಆಗ್ರಾದ ಮೇಲೆ ದಂಡೆತ್ತಿ ಬಂದ ಸುಜಾನು **ವಾರಣಾಶಿಯ** ಕಾಳಗದಲ್ಲಿ ಸೋತು (ದಶಂಬರ ೧೬೫೭) ತಿರುಗಿ ಹೋದನೆಂಬ ಸುದ್ದಿಯು ಬಂತು. ಕೂಡಲೆ ಅವರಂಗಜೀಬನು **ಬರಹಾಣಪುರ**ವನ್ನು ಬಿಟ್ಟು, ಮುರಾದನನ್ನು ಕೂಡಿ, ತನಗೆ ಇದುರಾಗಲಿಕ್ಕೆ ದಾರಾನ ಕಡೆಯಿಂದ ಬಂದ **ಯಶವಂತಸಿಂಗ**ನನ್ನು **ಉಜ್ಜಯಿನಿ**ಯಲ್ಲಿ ಸೋಲಿಸಿ (ಎಪ್ರಿಲ ೧೬೫೭), ಆಗ್ರಾದ ಹಾದಿಯನ್ನು ಹಿಡಿದನು.

ದಾರಾನು ಅವನಿಗೆ ಇದುರಾಗಿ ಬಂದು ಸಮುಗಡವೆಂಬಲ್ಲಿ ಕಾದಿ, ನಡುಗಾಳಗದಲ್ಲಿ ತನ್ನ ಆನೆಯಿಂದಿಳಿದು, ಕುದುರೆಯನ್ನೇರಿದನು. ಆದ್ದರಿಂದ ದಂಡಾಳುಗಳು ಬರಿ ಆನೆಯನ್ನು ನೋಡಿ, ದಾರಾನು ಸತ್ತನೆಂದೆಣಿಸಿ, ರಣಭೂಮಿಯಿಂದ ಓಡಲಾರಂಭಿಸಿದರು, ಮತ್ತು ಸುದೈವಿಯಾದ ಅವರಂಗಜೀಬನಿಗೆ ಪೂರ್ಣ ಜಯವು ದೊರೆಯಿತು (ಜೂನ).

ಬಳಿಕ ಅವರಂಗಜೇಬನು ಆಗ್ರಾ ಪಟ್ಟಣವನ್ನು ಹಿಡಿದುಕೊಂಡು ತನ್ನ ತಂದೆಯಾದ ಶಹಾಜಹಾನನನ್ನು ಅರಮನೆಯಲ್ಲಿ ಸೆರೆಯಿಟ್ಟು, ಮುಂದೆ ಕೆಲವು ದಿವಸಗಳಾದ ಬಳಿಕ ಒಂದು ದಿನ ರಾತ್ರಿ ಮುರಾದ ನನ್ನು ಊಟಕ್ಕೆ ಕರಿಸಿ, ಅವನಿಗೆ ಯಥೇಷ್ಟೆಯಾಗಿ ಸರಾಯಿಯನ್ನು ಕುಡಿಸಿ, ಅವನು ಎಚ್ಚರದಪ್ಪಿ ಬಿದ್ದಾಗ ಅವನ ಕಾಲಿನಲ್ಲಿ ಬೇಡಿಹಾಕಿಸಿ, ಅವನನ್ನು ಗ್ವಾಲ್ಹೇರದ ಕೋಟೆಯಲ್ಲಿ ಸೆರೆಯಿಟ್ಟನು (ಅಗಷ್ಟ).

ಅತ್ತ ಸಮುಗಡದ ಕಾಳಗ ನಡೆದಾಗ ದಾರಾನ ಮಗನಾದ ಸುಲೆಮಾನನು ಯಶವಂತಸಿಂಗ ದಿಲೀರಖಾನ ಮುಂತಾದ ಸರದಾರರೊಡನೆ ತನ್ನ ತಂದೆಯ ಸಹಾಯಕ್ಕಾಗಿ ಬರುತ್ತಿದ್ದನು. ಹಾದಿಯಲ್ಲಿ ದಾರಾನು ಸೋತು ಓಡಿಹೋದನೆಂಬ ಸುದ್ದಿಯು ಬಂದುದರಿಂದ ಎಲ್ಲ ಸರದಾರರು ಅವನನ್ನು ಬಿಟ್ಟುಹೋದರು. ಆದ್ದರಿಂದ ಅವನು ನಿರುಪಾಯನಾಗಿ ಸಿರಿನಗರದ ಅರಸನ ಮರೆಹೊಕ್ಕನು.

ಇತ್ತ ಅವರಂಗಜೇಬನು ದಾರಾನನ್ನು ಬೆನ್ನಟ್ಟಲಿಕ್ಕೆ ಒಂದು ದಂಡನ್ನು ಕಳುಹಿ, ತಾನು ದಿಲ್ಲಿಗೆ ಬಂದು ರಾಜ್ಯದಾಡಳತೆಯನ್ನು ಮಾಡುವಷ್ಟರಲ್ಲಿ ಸುಜಾನು ದಂಡೆತ್ತಿ ಬರುತ್ತಾನೆಂಬ ಸುದ್ದಿ ಬಂದುದರಿಂದ ಅವನಿಗಿದುರಾಗಲಿಕ್ಕೆ ಕಾಜವಾ ಎಂಬಲ್ಲಿಗೆ ಹೋದನು. ೧೬೫೯ ಇಸ್ವಿಯ ೭ನೆಯ ಜನವರಿ ದಿವಸ ಮುಂಜಾವಿನಲ್ಲಿ ಪೂರ್ವ ಸಂಕೇತದಂತೆ ಯಶವಂತಸಿಂಗನು ಒಮ್ಮೆಂದೊಮ್ಮೆ ಅವರಂಗಜೇಬನ ದಂಡಿನ ಹಿಂದುಗಡೆಯಲ್ಲಿ ಕಾಣಿಸಿಕೊಂಡನು. ಅದೇ ಕಾಲಕ್ಕೆ ಸುಜಾನು ಕಾಳಗವನ್ನು ಆರಂಭಮಾಡಿದ್ದರೆ, ಅವನಿಗೆ ಗೆಲವು ಬರುವ

ಹಾಗಿತ್ತು. ಆದರೆ ಅವನು ಸೋಮಾರಿತನದಿಂದಾಗಲಿ ಹೆದರಿಕೆ ಯಿಂದಾಗಲಿ ಈಸಂಧಿಯನ್ನು ಕಳೆದುಕೊಂಡನು. ಇದನ್ನು ನೋಡಿ ಯಶವಂತನು ನಿರಾಶನಾಗಿ ಮಾರವಾಡಕ್ಕೆ ಹೊರಟು ಹೋದನು. ಬಳಿಕ ಅವರಂಗಜೇಬನು ಸುಜಾನನ್ನು ಸೋಲಿಸಿ, ತನ್ನ ಮಗನಾದ ಸುಲ್ತಾನ ಮಹಮ್ಮದನನ್ನು ಅವನನ್ನು ಬೆನ್ನಟ್ಟಲಿಕ್ಕೆ ಕಳುಹಿ, ತಾನು ಮರಳಿ ಆಗ್ರಾಕ್ಕೆ ಬಂದನು (೧೫ ಜನವರಿ).

ಅತ್ತ ದಾರಾನು ಗುಜರಾಥಕ್ಕೆ ಬಂದು, ಯಶವಂತಸಿಂಗನನ್ನು ತನ್ನ ಕಡೆಗೆ ಮಾಡಿಕೊಳ್ಳಲಿಕ್ಕೆ ಹವಣಿಸಲಾರಂಭಿಸಿದನು. ಇದನ್ನ ರಿತು ಧೂರ್ತನಾದ ಅವರಂಗಜೇಬನು ಯಶವಂತನನ್ನೊಡಗೊಂಡು, ದಾರಾನಿದ್ದ ಅಜಮೀರದ ಕೋಟೆಯನ್ನು ಮುತ್ತಿ, ಮೋಸದಿಂದ ಆ ಕೋಟೆಯನ್ನೊಳಹೊಕ್ಕು, ದಾರಾನನ್ನು ಅಲ್ಲಿಂದೋಡಿಸಿದನು. ಈ ಕಾಲಕ್ಕೆ ಯೂರೋಪದ ಪ್ರವಾಸಿಯಾದ ಬರ್ನಿಯರನು ದಾರಾನ ಸಂಗಡಲೆ ಇದ್ದನು. ಮುಂದೆ ದಾರಾನು ಜೂನಪ್ರಾಂತಕ್ಕೆ ಬರಲು, ಅಲ್ಲಿಯ ಕೃತಘ್ನನಾದ ಸುಬೇದಾರನು ಅವನಿಗೆ ಆತಿಥ್ಯತೋರಿಸಿ, ಅವನನ್ನು ಕಯ್ಸೆರೆ ಹಿಡಿದು, ಅವರಂಗಜೇಬನಿಗೆ ಒಪ್ಪಿಸಿದನು (ಜೂನ ೧೬೫೯). ಬಳಿಕ ದುಷ್ಟನಾದ ಅವರಂಗಜೇಬನು ದಾರಾ ನನ್ನು ಒಂದು ಸೊಟ್ಟ ಆನೆಯ ಮೇಲೆ ಕುಳ್ಳಿರಿಸಿ, ಊರಲ್ಲೆಲ್ಲ ಮೆ ರಿಸಿ, ಪಾಖಂಡನೆಂದು ನಿರ್ಣಯಿಸಿ, ಕೊಲ್ಲಿಸಿದನು; ತರುವಾಯ ದಾರಾನ ರುಂಡವನ್ನು ನೋಡಿ ಅತ್ತನಂತೆ!!

ಇತ್ತ ಸುಜಾನನ್ನು ಬೆನ್ನಟ್ಟಲಿಕ್ಕೆ ಹೋದ ಸುಲ್ತಾನ ಮಹಮ್ಮ ದನು ಅವನ ಮಗಳನ್ನು ಮದುವೆಮಾಡಿಕೊಂಡು, ಅವನನ್ನು ಕೂಡಿದನು. ಆದರೂ ಮೀರಜುಮ್ಲನೆಂಬ ಸರದಾರನು ಸುಜಾ ನನ್ನು ೨-೩ ಕದನಗಳಲ್ಲಿ ಸೋಲಿಸಿ ಓಡಿಸಿಬಿಟ್ಟನು. ಮುಂದೆ ಅ ವನು ಆರಾಕಾನಕ್ಕೆ ಹೋಗಿ ಅಲ್ಲಿ ಮರಣಹೊಂದಿದನು.

ಮುಂದೆ ಜನವರಿ ೧೬೬೧ರಲ್ಲಿ ಸಿರಿನಗರದ ಅರಸನು ಸುಲೆ ಮಾನನನ್ನು ಅವರಂಗಜೇಬನಿಗೆ ಒಪ್ಪಿಸಿದ್ದರಿಂದ ಅವರಂಗಜೇಬನು ಅವನನ್ನು ಗ್ವಾಲ್ಹೇರದ ಕೋಟೆಯಲ್ಲಿಟ್ಟನು. ಅವನು ಕೆಲವು ತಿಂ

ಗಳ ಮೇಲೆ ಅಲ್ಲೇ ತೀರಿಕೊಂಡನು. ಅವರಂಗಜೇಬನು ಮುರಾದನ ಮೇಲೆ ನರವಧದ ತಪ್ಪುಹೊರಿಸಿ ಅವನನ್ನು ಕೊಲ್ಲಿಸಿದನು. ಈಮೇರೆಗೆ ತನ್ನ ಬಂಧುಬಳಗದವರನ್ನೆಲ್ಲ ಕೊಲ್ಲಿಸಿ, ಅವರಂಗಜೇಬನು ತನ್ನ ಧರ್ಮವನ್ನೂ ರಾಜ್ಯವನ್ನೂ ಬೆಳಿಸಲಿಕ್ಕೆ ಯತ್ನಮಾಡಲಾರಂಭಿಸಿದನು. ಇಂತು ದೊರಕಿಸಿದ ರಾಜ್ಯದಿಂದ ಫಲವೇನು?*

ಬಿಕಾನೇರದ ಅರಸನು ಅವರಂಗಜೇಬನ ಹಗೆಯಾಗಿದ್ದನು. ಆದ್ದರಿಂದ ಅವರಂಗಜೇಬನು ಅವನನ್ನು ಸೋಲಿಸಿ ತನ್ನ ಮಾಂಡಲಿಕರೊಳಗೆ ಸೇರಿಸಿಕೊಂಡನು (ನವಂಬರ ೧೬೬೧).

ಮೀರಜುಮ್ಲನು ಕಡುಗಲಿಯಾದ್ದರಿಂದ ಅವರಂಗಜೇಬನ ಕಣ್ಣೊಳಗೆ ಒತ್ತುತ್ತಿದ್ದನು. ಆದಕಾರಣ ಅವರಂಗಜೇಬನು ಅವನನ್ನು ಆಸಾಮುಪ್ರಾಂತವನ್ನು ಗೆಲ್ಲಲಿಕ್ಕೆ ಕಳುಹಿದನು (ಮಾರ್ಚ ೧೬೬೨). ಅಲ್ಲಿ ಅವನು ಹೆಣಗಾಡಿ ಆಸಾಮುದ ಅರಸನನ್ನು ಸೋಲಿಸಿ, ಅವನೊಡನೆ ಒಡಂಬಡಿಕೆಯನ್ನು ಮಾಡಿ ತಿರುಗಿ ಬರುವಾಗ ಡಾಕ್ಕಾದಲ್ಲಿ ಕಾಲವಾದನು (೧೬೬೩ ಮಾರ್ಚ ೩೧). ಈಸುದ್ದಿಯನ್ನು ಕೇಳಿ ಅವರಂಗಜೇಬನ ಚಿಂತೆ ಕಡಿಯಿತು.

ಅಷ್ಟರಲ್ಲಿ ಅವರಂಗಜೇಬನು ಬೇನೆಬಿದ್ದನು. ಅವನು ತನ್ನ ಸರದಾರರಿಗೂ ಪ್ರಜೆಗಳಿಗೂ ಬೇಡಾದವನಾದ್ದರಿಂದ ಆಕಾಲಕ್ಕೆ ಏಷ್ಟೋ ಒಳಸಂಚುಗಳಾದವು. ಆದರೆ ದೈವಯೋಗದಿಂದ ಅವನಿಗೆ ಬೇಗನೆ ಗುಣವಾದ ಕಾರಣ ಹೆಚ್ಚಿನಾವ ಸಂಗತಿಯೂ ಒದಗಲಿಲ್ಲ. ಮುಂದೆ ಅವನು ಆರೋಗ್ಯಕ್ಕೋಸ್ಕರ ಕಾಶ್ಮೀರಕ್ಕೆ ಹೋದನು.†

---

* ಪುರುಷ ಕಾಣದ ಸತಿಯ ಚೆಲುವಿಕೆ ।
ಯರಿ ಮಹೀಶ್ವರರರಿಯದವನೀ ।
ಶ್ವರನ ವಿಕ್ರಮ ಬಂಧುಸಂತತಿ ಬಂದು ಕಂಡೊಡನೆ ॥
ಹಿರಿದು ಸಂತೋಷಿಸದ ಸಂಪದ ।
ಗುರು ಹಿರಿಯುರಹುದೆನ್ನದವನಾ ।
ಚರಣೆ ನಿಷ್ಫಲವೆಂದು ಧರ್ಮಜ ನೆನೆದು ದುಃಖಿಸಿದ. ॥

ಕನ್ನಡ ಭಾರತ, ಶಾಂತಿಪರ್ವ, ೨ನೆಯ ಸಂಧಿ, ೭ನೆಯ ಶ್ಲೋಕ.

† ಅವರಂಗಜೇಬನು ಮರಾಟರೊಡನೆ ಮಾಡಿದ ಜಗಳದ ವಿವರವನ್ನು ಮುಂದೆ ಕೊಟ್ಟ ಶಿವಾಜಿಯ ಚರಿತ್ರದಲ್ಲಿ ಓದಿಕೊಳ್ಳಬಹುದು.

೧೬೭೦ರಲ್ಲಿ ಅಫಗಾನರು ಬಂಡಾಯವೆಬ್ಬಿಸಿ, ಮೊಗಲರ ಸುಬೇದಾರನಾಗಿದ್ದ ಅಮೀನಖಾನನನ್ನು ಸೋಲಿಸಿ, ತಮ್ಮೊಳಗಿನವನೊಬ್ಬನನ್ನು ಅರಸನನ್ನು ಮಾಡಿಕೊಂಡರು. ಈಸುದ್ದಿಯನ್ನು ಕೇಳಿ, ಬಾದಶಹನು ತಾನೇ ಅಲ್ಲಿಗೆ ದಂಡೆತ್ತಿ ಹೋದನು; ಅವನು ಎಷ್ಟು ಹೋರಾಡಿದರೂ ಆಗುಡ್ಡಗಾಡಿನ ಜನರು ಅವನಿಗೆ ಪೂರಾ ಮಣಿಯಲಿಲ್ಲ. ಆದ್ದರಿಂದ ಅವನು ತನ್ನ ಅಧಿಕಾರವನ್ನು ಅಲ್ಲಿ ಕೂಡ್ರಿಸಿದಂತೆ ಮಾಡಿ, ತಿರುಗಿ ದಿಲ್ಲಿಗೆ ಬಂದನು (೧೬೭೫).

ಅಲಮ್ಗೀರನು ತಿರುಗಿ ಬಂದ ಬಳಿಕ ತುಸು ದಿವಸದಲ್ಲಿಯೇ ದಿಲ್ಲಿಯ ನೆರೆಯಲ್ಲಿದ್ದ ನರ್ನೂಲವೆಂಬ ಗ್ರಾಮದಲ್ಲಿ ಸತ್ನಾಮಿಯರೆಂಬ ಸಂತರು ಬಂಡಾಯವೆಬ್ಬಿಸಿ, ಮೊಗಲರ ಪಡೆಗಾರರನ್ನು ಮುರಿಬಡಿದರು. ಅವರ ಪಾರಪತ್ಯ ಮಾಡಲಿಕ್ಕೆ ಕಳುಹಿದ ದಂಡಿನವರು ತಮ್ಮ ಜೀವ ಉಳಿಸಿಕೊಂಡು ತಿರುಗಿ ಬರಬೇಕಾದರೆ ಸಾಕು ಸಾಕಾಯಿತು. ಆದ್ದರಿಂದ ಈಸಂತರು ಸೋಲಿಲ್ಲದವರೆಂದು ಜನರಲ್ಲಿ ನಂಬಿಗೆ ಹುಟ್ಟಿತು. ಆದರೆ ಅವರಂಗಜೇಬನು ಹಂಚಿಕೆಗಾರನೇ ಸರಿ!! ಅವನು ತನ್ನ ಕಯ್ಯಿಂದ ಕುರಾಣದ ಕೆಲವು ವಾಕ್ಯಗಳನ್ನು ಬರೆದು, ಆ ಚೀಟಿಗಳನ್ನು ನಿಶಾನೆಯ ಮೇಲೆ ಹಚ್ಚಿಸಿ, ತನ್ನ ಜನರ ತಪ್ಪುತಿಳುವಳಿಕೆಯನ್ನು ದೂರ ಮಾಡಿ, ಸತ್ನಾಮಿಯರನ್ನು ಸೋಲಿಸಿ, ಅವರ ಬಂಡನ್ನು ಅಡಗಿಸಿದನು.

ಧರ್ಮದ ದುರಭಿಮಾನವು ಅಲಮ್ಗೀರನಲ್ಲಿ ಮನೆಮಾಡಿಕೊಂಡಿತ್ತೆನ್ನಲಿಕ್ಕೆ ಅಡ್ಡಿಯಿಲ್ಲ. ಅವನು ೧೬೬೯ರಲ್ಲಿ ಆಗ ನಡೆಯುತ್ತಿದ್ದ ಸೌರಮಾನದ ಕಾಲಗಣನೆಯನ್ನು ತನ್ನ ರಾಜ್ಯದಲ್ಲಿ ಉಪಯೋಗಿಸಬಾರದೆಂದು ಕಟ್ಟುಮಾಡಿದನು; ಇದಲ್ಲದೆ ತನ್ನ ನಾಡಿನಲ್ಲಿ ಕುಡಕತನವನ್ನೂ ಮೂರ್ತಿಪೂಜೆಯನ್ನೂ ನಿಲ್ಲಿಸಲಿಕ್ಕೆ ಒಬ್ಬ ಮುಲ್ಲಾನನ್ನು ನಿಯಮಿಸಿದನು. ಹಿಂದೂಜನರ ಜಾತ್ರೆಗಳಲ್ಲಿ ಮಾರುವ ಒಡವೆಗಳು ಅಪವಿತ್ರವಾದವುಗಳೆಂದೆಣಿಸಿ, ಅವುಗಳ ಸಂಬಂಧದಿಂದ ಬರತಕ್ಕ ಸುಂಕವನ್ನು ತೆಗೆದುಹಾಕಿದನು. ಮುಂದೆ ಕೆಲವು ವರುಷಗಳ ಮೇಲೆ ಹಿಂದೂಜನರ ಜಾತ್ರೆಗಳನ್ನು ನಿಲ್ಲಿಸಿದ್ದಲ್ಲದೆ ನೃತ್ಯಗಾ

ಯನಗಳನ್ನು ಮಾಡಿಸಬಾರದೆಂದು ಹುಕುಮು ಮಾಡಿ, ದರಬಾ ರಕ್ಕೆ ಸೇರಿದ್ದ ಗಾಯಕರನ್ನೂ ಜೋಯಿಸರನ್ನೂ ತೆಗೆದುಹಾಕಿದನು. ಅವನ ದರಬಾರದಲ್ಲಿ ಕವಿಗಳಿಗೆ ವಿಶೇಷ ಮಾನವಿದ್ದಿಲ್ಲ. ಇತಿಹಾ ಸವನ್ನು ಬರೆಯುಬಾರದೆಂತಲೂ ಮುಸಲ್ಮಾನರ ಹೊರತು ಉಳಿದ ಜಾತಿಯವರಿಗೆ ಸರಕಾರದ ಕೆಲಸಗಳನ್ನು ಕೊಡಬಾರದೆಂತಲೂ ಅವನು ನಿರ್ಬಂಧಮಾಡಿದನು. ಸತ್ನಾಮಿಯರ ಬಂಡಿನಿಂದಂತೂ ಅವನ ತಲೆಯೇ ತಿರುಗಿತು. ಅವನು ಅಕಬರನು ಮೊದಲು ತೆಗೆ ದುಹಾಕಿದ **ಜೇಜಿಯಾ**ಯೆಂಬ ತಲೆಪಟ್ಟಿಯನ್ನು ಹಿಂದೂಜನರ ಮೇಲೆ ಮತ್ತೆ ಕೂಡ್ರಿಸಿದನು. ಅವನು ಒಮ್ಮೆ ಶುಕ್ರವಾರ ದಿವಸ ಮಸೀದಿಗೆ ಹೋಗುವಾಗ ಈತಲೆಪಟ್ಟಿಯನ್ನು ಕೊಡಲಿಕ್ಕೆ ಒಪ್ಪಿ ಕೊಳ್ಳದ ಹಿಂದೂಜನರೆಲ್ಲರು ಒಟ್ಟುಗೂಡಿ ಆತೆರಿಗೆಯನ್ನು ತೆಗೆ ದುಹಾಕಬೇಕೆಂದು ಅವನಿಗೆ ಪರಿಪರಿಯಿಂದ ಬೇಡಿಕೊಂಡರು. ಆದರೆ ಅವನು ಅವರ ಅರಿಕೆಗೆ ಕಿವಿಗೊಡದೆ ಅವರನ್ನು ದೂಡಿಸಿ ಹಾಕಿ, ಹೊಡಿಸಿ ಮುಂದೆ ಹೋದನು!! ಈಗದ್ದಲದಲ್ಲಿ ಎಷ್ಟೋ ಜನರು ಕಯ್ಕಾಲುಗಳನ್ನು ಮುರಿದುಕೊಂಡುದಲ್ಲದೆ ಕೆಲವರು ಪ್ರಾಣಕ್ಕೆ ಎರವಾದರು.

ಪ್ರಜಾಪೀಡನದಿಂದ ಹುಟ್ಟುವ ಬೆಂಕಿಯು ಭಯಂಕರವಾದು ದೆಂದು ಹಿರಿಯರು ಹೇಳುವ ಮಾತು ಸುಳ್ಳಲ್ಲ. ಹಿಂದೂಜನರೆ ಲ್ಲರೂ ಅವರಂಗಜೇಬನ ಹೆಸರಲ್ಲಿ ಕಲ್ಲು ಒಡೆಯುಹತ್ತಿದರು. ಚಿಕ್ಕ ವರೂ ಹಿರಿಯರೂ, ಗಂಡಸರೂ ಹೆಂಗಸರೂ, ದೊಡ್ಡ ಕುಲದವರೂ ಸಣ್ಣ ಕುಲದವರೂ, ಕಲಿತವರೂ ಹುಂಬರೂ ಅವನಿಗೆ ಕೇಡನ್ನು ಬಗೆಯಲಾರಂಭಿಸಿದರು. ಎಲ್ಲರೂ ಮೊಗಲರ ವಂಶವು ನಿರ್ಮೂ ಲವಾಗಲೆಂದು ದೇವರನ್ನು ಬೇಡಿಕೊಳ್ಳಹತ್ತಿದರು. ಇಂಗ್ಲಂಡದಲ್ಲಿ ಅವರಂಗಜೇಬನಂತಹ ಅರಸನಿದ್ದರೆ, ಪ್ರಜೆಗಳು ಅವನನ್ನು ಹಿಡಿದು ಸೀಳಿ ಎರಡು ತುಂಡು ಮಾಡಿಬಿಡುತ್ತಿದ್ದರು. ಆದರೆ ಇಂಗ್ರೇಜರ ಧೈರ್ಯವೆಲ್ಲಿ, ನಮ್ಮ ಜನರ ಜೀವದ ಹಂಬಲವೆಲ್ಲಿ!! ಅವರ ಒಕ್ಕ ಟ್ಟೆಲ್ಲಿ, ನಮ್ಮ ಹೊಟ್ಟೆಕಿಚ್ಚೆಲ್ಲಿ!! ಅವರ ಸ್ವಾತಂತ್ರ್ಯಾಭಿಲಾಷೆಯೆಲ್ಲಿ,

ನಮ್ಮ ದಾಸ್ಯಾಭಿಲಾಷೆಯೆಲ್ಲಿ!! ಅವರ ದೇಶಾಭಿಮಾನವೆಲ್ಲಿ, ನಮ್ಮ ಸ್ವಾರ್ಥಪರತ್ವವೆಲ್ಲಿ!! ಆದರೂ ಇಂಗ್ರೇಜರು ಕೆಲವು ದಿವಸಗಳಲ್ಲಿ ಮಾಡುವ ಕೆಲಸವನ್ನು ನಮ್ಮ ಜನರು ಕೆಲವು ವರುಷಗಳಲ್ಲಿ ಮಾಡಿದರೆನ್ನಬಹುದು. ರಜಪೂತರ ಅರಸರು ಅವನಿಗೆ ಮನಃಪೂರ್ವಕವಾಗಿ ಸಹಾಯಮಾಡಲಿಲ್ಲ. ಉಳಿದ ಹಿಂದೂಜನರು ಅವರಂಗಜೇಬನ ಹಗೆಯಾದ ಶಿವಾಜಿಗೆ ಒಳಗಿಂದೊಳಗೇ ನೆರವಾಗಲಾರಂಭಿಸಿದರು. ಈಕಾರಣಗಳಿಂದ ಅಲಮ್ಗಿರನ ರಾಜ್ಯಲಕ್ಷ್ಮಿಯು ದಿನದಿನಕ್ಕೆ ಕಳೆಗುಂದಲಾರಂಭಿಸಿದಳು.

ಅಷ್ಟರಲ್ಲಿ ಹಿಂದೂಜನರ ಮನಸ್ಸನ್ನು ನೋಯಿಸುವಂತಹ ಮತ್ತೊಂದು ಸಂಗತಿಯು ಒದಗಿತು. ಜೇಜಿಯಾ ತಲೆಪಟ್ಟಿಯನ್ನು ಕಟ್ಟಿದ ಕೆಲವು ದಿವಸಗಳಲ್ಲೇ ಯಶವಂತಸಿಂಗರಾಜನು ಕಾಬೂಲದಲ್ಲಿ ಮರಣ ಹೊಂದಿದನು. ಕೂಡಲೆ ಅವನ ಹೆಂಡತಿಯೂ ಇಬ್ಬರು ಮಕ್ಕಳೂ ಅಲ್ಲಿಂದ ಹೊರಟು, ಅಟಕ್ಕದಲ್ಲಿ ತಮಗೆ ಅಡ್ಡಿಮಾಡಿದ ಬಾದಶಹನ ಪಡೆಗಾರರನ್ನು ಲೆಕ್ಕಿಸದೆ, ದಿಲ್ಲಿಯ ವರೆಗೆ ಬಂದರು. ಇದೇ ನೆವನಮಾಡಿಕೊಂಡು ಅಲಮ್ಗಿರನು ಅವರನ್ನು ಊರೊಳಗೆ ಬರಗೊಡದೆ ಮೋಸದಿಂದ ಕಯ್ಸೆರೆಹಿಡಿಯಲಿಕ್ಕೆ ಯತ್ನಮಾಡಿದನು. ಆಗ ಅಭಿಮಾನಿಗಳಾದ ರಜಪೂತರು ಯಶವಂತಸಿಂಗನ ರಾಣಿಯನ್ನೂ ಅವನ ಇಬ್ಬರು ಮಕ್ಕಳನ್ನೂ ಜೋಧಪುರಕ್ಕೆ ಕಳುಹಿ, ಒಬ್ಬ ದಾಸಿಯನ್ನೂ ಬೇರೆ ಇಬ್ಬರು ಹುಡುಗರನ್ನೂ ಪಾಳಯದಲ್ಲಿಟ್ಟರು. ಬಾದಶಹನು ಈ ಸುಳ್ಳು ರಾಣಿಯನ್ನೂ ಹುಡುಗರನ್ನೂ ದಿಲ್ಲಿಯಲ್ಲಿಯೇ ಇರಿಸಿಕೊಂಡನು. ಅತ್ತ ಯಶವಂತಸಿಂಗನ ಹಿರಿಯ ಮಗನಾದ ಅಜಿತಸಿಂಗನು ಮುಂದೆ ಮಾರವಾಡದ ಅರಸನಾಗಿ ಅವರಂಗಜೇಬನಿಗೆ ದೊಡ್ಡ ಹಗೆಯಾದನು.

ಜಯಪುರದ ಅರಸನ ಹೊರತು ಉಳಿದ ಎಲ್ಲ ರಜಪೂತರು ಜೇಜಿಯಾ ತೆರಿಗೆಯನ್ನು ಕೊಡಲಿಕ್ಕೆ ಒಪ್ಪಲಿಲ್ಲ. ಆದಕಾರಣ ಅವರಂಗಜೇಬನು ಖತಿಗೊಂಡು, ಅಜಮೀರದ ಮೇಲೆ ದಂಡೆತ್ತಿ ಹೋಗಿ, ಆನಾಡಿನ ಅರಸನನ್ನೂ ಉದೇಪುರದ ಅರಸನನ್ನೂ ಸೋಲಿಸಿದನು.

ಆದರೂ ರಜಪೂತರು ಅವನಿಗೆ ಮಣಿಯಲಿಲ್ಲ. ಯಶವಂತಸಿಂಗನ ನಂಬಿಗೆಯ ಸೇವಕನಾದ ದುರ್ಗಾದಾಸನೆಂಬವನು ಅವರಂಗಜೇಬನ ಚಿಕ್ಕ ಮಗನಾದ ಅಕಬರನನ್ನು ಒಡಕೊಂಡನು. ಆಗ ಅಕಬರನು ೭೦,೦೦೦ ದಂಡಿನೊಡನೆ ಅವರಂಗಜೇಬನ ದಂಡಿನ ಮೇಲೆ ಬೀಳಲಿಕ್ಕೆ ಸಿದ್ಧನಾದನು. ಅಕಬರನು ತನ್ನ ಪ್ರೀತಿಯ ಮಗನಾದ್ದರಿಂದ ಅವನು ಇಂತು ದ್ರೋಹ ಬಗೆಯುವನೆಂದು ಅವರಂಗಜೇಬನು ಎಂದೂ ಎಣಿಸಿದ್ದಿಲ್ಲ. ಆದ್ದರಿಂದ ತನ್ನ ದಂಡಿನ ಇಮ್ಮಡಿಯಷ್ಟು ದಂಡಿನೊಡನೆ ತನ್ನೊಡನೆ ಕಾದಲಿಕ್ಕೆ ಸಿದ್ಧನಾದ ತನ್ನ ಮಗನನ್ನು ನೋಡಿ, ಅವನ ಎದೆಯೊಡೆದು ನೀರಾಯಿತು. ಆದರೆ ಆ ಸಮಯದಲ್ಲಿ ಅವನ ಪ್ರಸಂಗಾವಧಾನವೇ ಅವನನ್ನು ಕಾಪಾಡಿತು. ಅವನು ಎರಡನೆಯಾವ ಬಗೆಯನ್ನೂ ಕಾಣದೆ, ತನ್ನ ನಂಬಿಗೆಯ ಜನರನ್ನು ಅಕಬರನ ಪಾಳಯಕ್ಕೆ ಕಳುಹಿ, ಅವನ ಎಲ್ಲ ದಳವಾಯಿಗಳನ್ನು ತನ್ನ ಕಡೆಗೆ ಮಾಡಿಕೊಂಡನು. ಆಗ ಇಂತು ನಿರುಪಾಯನಾದ ಅಕಬರನು ದುರ್ಗಾದಾಸನೊಡನೆ ಕೊಂಕಣಕ್ಕೆ ಹೋಗಿ, ಮರಾಟರ ಮರೆಹೊಕ್ಕನು (೧೬೮೧).

ರಜಪೂತರೊಡನೆ ನಡೆದ ಜಗಳವು ಅವರಂಗಜೇಬನಿಗೆ ತಲೆಬೇಸರಿಟ್ಟಿತು. ಅವರು ರಣಭೂಮಿಯಲ್ಲಿ ಮೊಗಲರಿಗೆ ಇದುರಾಗದೆ ಅವರ ರಾಜ್ಯದಲ್ಲಿ ಕೊಳ್ಳೆಮಾಡಿ, ಮುಸಲ್ಮಾನರ ಮಸೀದೆಗಳನ್ನು ಕೆಡವಿ, ಕುರಾಣವನ್ನು ಸುಟ್ಟು, ಮುಸಲ್ಮಾನರ ಅವಮಾನ ಮಾಡಲಾರಂಭಿಸಿದರು. ಕಟ್ಟಕಡೆಗೆ ಬಾದಶಹನು ಈ ನಿಷ್ಪ್ರಯೋಜಕವಾದ ಜಗಳದಲ್ಲಿ ಕಾಲಹರಣಮಾಡುವದು ಸರಿಯಲ್ಲೆಂದೆಣಿಸಿ, ಜೀಜಿಯಾ ಪಟ್ಟಿಯನ್ನು ಬಿಟ್ಟುಕೊಟ್ಟು, ಅವರೊಡನೆ ಒಪ್ಪಂದ ಮಾಡಿದನು (೧೬೮೧).

ಅವರಂಗಜೇಬನು ಅಫಘಾನ-ರಜಪೂತರ ಜಗಳದಲ್ಲಿ ತೊಡಗಿದಾಗ ಮೊಗಲರು ಮರಾಟರೊಡನೆ ಹೂಡಿದ ಯುದ್ಧವು ಮಲಗಿತ್ತು; ಏಕಂದರೆ ದಕ್ಷಿಣದ ಸುಬೇದಾರನಾದ ಖಾನಜಹಾನನ ಹತ್ತರ ಶಿವಾಜಿಯನ್ನು ಇದುರಿಸುವಷ್ಟು ದಂಡು ಇದ್ದಿಲ್ಲ. ಆದ್ದರಿಂದ

ಶಿವಾಜಿಯು ವಿಜಾಪುರದ ರಾಜ್ಯವನ್ನೂ ಮೊಗಲರ ಕೆಲ ಸೀಮೆಗಳನ್ನೂ ಸುಲಿದು ಸೂರೆಗೊಂಡು, ಬಹುಸಮಾರಂಭದಿಂದ ರಾಯಗಡದಲ್ಲಿ ಪಟ್ಟಗಟ್ಟಿಸಿಕೊಂಡನು (೬ ಜೂನ್ ೧೬೭೪). ಆದರೆ ಅವರಂಗಜೇಬನ ಸುದೈವದಿಂದಲೋ ಹಿಂದೂಜನರ ದುರ್ದೈವದಿಂದಲೋ ಶಿವಾಜಿಯು ಮುಂದೆ ಬಹು ದಿವಸ ಬಾಳಲಿಲ್ಲ. ಅವನು ಸತ್ತಕೂಡಲೆ ಅವನ ಅವಿವೇಕಿ ಹಿರಿಮಗನಾದ **ಸಂಭಾಜಿಯು** ಪಟ್ಟವೇರಿದನು (ಜೂನ್ ೧೬೮೦). ಬಳಿಕ ಅವನು ಕ್ರೂರತನದಿಂದ ತನ್ನ ಮಲತಾಯಿಯನ್ನು ಕೊಲ್ಲಿಸಿದ್ದಲ್ಲದೆ, ರಾಜ್ಯದ ಹಿತಚಿಂತಕರಾದ ಮಂತ್ರಿಗಳನ್ನು ಸೆರೆಯಲ್ಲಿಟ್ಟನು, ಮತ್ತು ಜಂಜೀರದ ಹಬಸಿಯರನ್ನು ನಿರ್ಮೂಲ ಮಾಡಬೇಕೆಂಬ ವ್ಯರ್ಥಪ್ರಯತ್ನದಲ್ಲಿ ತೊಡಗಿ, ರಾಜ್ಯದ ಬಂಡಾರವನ್ನು ಅರ್ಧಮರ್ಧ ಹಾಳು ಮಾಡಿದನು. ಅವನು ವ್ಯಸನಿಯೂ ದುಂದುಗಾರನೂ ಆದ್ದರಿಂದ ಉತ್ತರಹಿಂದುಸ್ಥಾನದವನಾದ **ಕಲುಷಾ** ಎಂಬ ಒಬ್ಬ ಬ್ರಾಹ್ಮಣನನ್ನು ತನ್ನ ಮುಖ್ಯಮಂತ್ರಿಯನ್ನು ಮಾಡಿಕೊಂಡನು. ಆದ್ದರಿಂದ ರಾಜ್ಯದಲ್ಲೆಲ್ಲ ಅವ್ಯವಸ್ಥೆಯುಂಟಾಯಿತು. ದಂಡಾಳುಗಳ ತಲಬು ಹೊತ್ತುಹೊತ್ತಿಗೆ ಮುಟ್ಟದಂತಾಯಿತು, ಮತ್ತು ಸಂಭಾಜಿಯು ಇಂಗ್ಲಿಷರೊಡನೆಯೂ ಪೊರ್ತುಗೀಸರೊಡನೆಯೂ ಕಾಲುಕೆದರಿ ಜಗಳ ತೆಗೆದುದರಿಂದ ಅವರು ಮರಾಟರ ಹಗೆಗಳಾದರು. ಇದಲ್ಲದೆ ಸಂಭಾಜಿಯು ತನಗೆ ಶರಣುಬಂದ ಅಲಮ್ಗೀರನ ಮಗನಾದ ಅಕಬರನಿಗೆ ಸಹಾಯಮಾಡದ್ದರಿಂದ ಮೊಗಲರಲ್ಲಿ ಒಡಕು ಹುಟ್ಟಲಿಕ್ಕೆ ಅನುಕೂಲವಾಗಲಿಲ್ಲ.

ಇದೇ ಸಮಯದಲ್ಲಿ ಅಲಮ್ಗೀರನು ರಜಪೂತರೊಡನೆ ಒಪ್ಪಂದಮಾಡಿ, ತೆಂಕಲಿಗೆ ದಂಡೆತ್ತಿ ಬಂದನು. ಅವನು ಅಹಮ್ಮದನಗರ ವಿಜಾಪುರ ದೇಶಗಳನ್ನು ಮುರಿಯದೆ ಮರಾಟರನ್ನು ಮುರಿಯಲಿಕ್ಕೆ ಯತ್ನಮಾಡಿದ್ದರೆ, ಅವನ ಬಯಕೆ ಕಯ್ಗೂಡುವಂತಿತ್ತು. ಆದರೆ ಅವನು ದೂರದೃಷ್ಟಿಯವನಿದ್ದಿಲ್ಲ. ರಾಜ್ಯವನ್ನು ನೆಲೆಗೊಳಿಸುವ ಕ್ರಮವು ಅವನಿಗೆ ಗೊತ್ತೇ ಇದ್ದಿಲ್ಲ. ಅವನು ಅವರಂಗಾ

ಬಾದಿನಲ್ಲಿ ತಾನು ನಿಂತು, ಅಜಮ್ಮನನ್ನು ಅಹಮ್ಮದನಗರಕ್ಕೂ ಮೋಜಿಮ್ಮನನ್ನು ಕೊಂಕಣಕ್ಕೂ ಕಳುಹಿದನು. ಇಂತು ತನ್ನ ದಂಡನ್ನು ಬೇರೆ ಬೇರೆ ದಿಕ್ಕುಗಳಿಗೆ ಕಳಿಸಿದ್ದು ದಡ್ಡತನವೇ ಸರಿ. ಕೊಂಕಣದಲ್ಲಿ ಕುದುರೆಗಳು ಕೂಳು ನೀರಿಲ್ಲದೆ ಪಟಪಟ ಬಿದ್ದು ಸತ್ತವು. ಅಜಮ್ಮನಿಂದಾವ ಕೋಟೆಯನ್ನೂ ಹಿಡುಕೊಳ್ಳುವದಾಗದ್ದರಿಂದ ಮುಂದೆ ಅವರಂಗಜೀಬನು ಅಜಮ್ಮನನ್ನು ಸೊಲ್ಲಾಪುರ ಮಾರ್ಗದಿಂದಲೂ ಮೋಜಿಮ್ಮನನ್ನು ಮಿರಜಿ ಮಾರ್ಗದಿಂದಲೂ ವಿಜಾಪುರವನ್ನೊಳನುಗ್ಗಲಿಕ್ಕೆ ಕಳುಹಿ, ತಾನು ಸೊಲ್ಲಾಪುರಕ್ಕೆ ಹೋಗಿ, ಅಜಮ್ಮನಿಗೆ ನೆರವಾಗಲಿಕ್ಕೆ ಹೊಸದೊಂದು ದಂಡುಕಳುಹಿದನು.

ಈಮೇರೆಗೆ ಮೊಗಲರು ತೊಡಗಿದ್ದನ್ನು ನೋಡಿ, ಮರಾಟರು ಭಡೋಚ ಮುಂತಾದ ಗುಜರಾಥದ ಭಾಗಗಳಲ್ಲಿ ಕೊಳ್ಳೆಮಾಡಿ, ಎಷ್ಟೋ ಊರುಗಳನ್ನು ಸುಲಿದರು. ಇದೇ ಸಮಯಕ್ಕೆ ಗೋವಳಕೊಂಡದ ಅರಸನಾದ ಅಬ್ದುಲ್ ಹಸನನು ಮರಾಟರೊಡನೆ ಅನ್ಯೋನ್ಯಸಂರಕ್ಷಣದ ಒಪ್ಪಂದ ಮಾಡಿಕೊಂಡನು. ಈಸುದ್ದಿಯನ್ನು ಕೇಳಿ ಅಲಮ್ಗೀರನು ಸಿಟ್ಟಿಗೆದ್ದು, ಮೋಜಿಮ್ಮನನ್ನು ದೊಡ್ಡ ದಂಡಿನೊಡನೆ ಗೋವಳಕೊಂಡವನ್ನು ಒಳನುಗ್ಗಲಿಕ್ಕೆ ಕಳುಹಿದನು. ಆಗ ಮಾದನಪಂತನೆಂಬ ಗೋವಳಕೊಂಡದ ಮಂತ್ರಿಗೂ ಅಲ್ಲಿಯ ದಳವಾಯಿಯಾದ ಇಬ್ರಾಹಿಮ್ ಖಾನನಿಗೂ ವೈಮನಸ್ಸಿದ್ದ ಕಾರಣ ಇಬ್ರಾಹಿಮನು ತನ್ನ ದಂಡಿನೊಡನೆ ಅಲಮ್ಗೀರನನ್ನು ಕೂಡಿದ್ದರಿಂದ, ಮೊಗಲರು ಸುಲಭವಾಗಿ ಗೋವಳಕೊಂಡದ ರಾಜಧಾನಿಯಾದ ಹೈದರಾಬಾದವನ್ನು ಹೊಕ್ಕರು. ಆಗ ಅಬ್ದುಲ್‌ಹಸನನು ನಿರುಪಾಯನಾಗಿ ಮೊಗಲರು ಹೇಳಿದ್ದಕ್ಕೆ ಒಡಂಬಟ್ಟು, ಅವರೊಡನೆ ಒಪ್ಪಂದಮಾಡಿಕೊಂಡನು.

ಬಳಿಕ ಅಲಮ್ಗೀರನು ತಾನೇ ವಿಜಾಪುರವನ್ನು ಮುತ್ತಿದನು. ಒಳಗಿದ್ದ ಪಠಾಣರು ಬಹಳ ಕಲಿತನದಿಂದ ಕಾದಿದರೂ, ಕೊನೆಗೆ ಅದು ಮೊಗಲರ ಕಯ್ಸೇರಿತು. ಬಳಿಕ ಅಲಮ್ಗೀರನು ವಿಜಾಪುರದ ಚಿಕ್ಕ ಅರಸನನ್ನು ಸೆರೆಯಲ್ಲಿಟ್ಟು, ಆವೂರನ್ನು ಹಾಳುಮಾಡಿಬಿಟ್ಟನು.

ವಿಜಾಪುರವು ವಶವಾದ ಕೂಡಲೆ ಮಹಾಕಾಂಕ್ಷೆಯುಳ್ಳ ಅವರಂಗಜೇಬನ ಮನಸ್ಸಿನಲ್ಲಿ ಗೋವಳಕೊಂಡದ ಅರಸನ ಕೂಡ ಮೊದಲು ಮಾಡಿದ ಒಪ್ಪಂದವನ್ನು ಮುರಿಯಬೇಕೆಂಬ ಆಶೆಯು ಹುಟ್ಟಿತು. ಅದಕ್ಕೋಸ್ಕರ ಅವನು ಬಹುನಿಂದ್ಯವಾದ ಉಪಾಯವನ್ನು ಮಾಡಿದನು. ಅದೇನಂದರೆ, ಯಾತ್ರೆಗೆ ಹೋಗುವ ನೆವದಿಂದ ಗೋವಳಕೊಂಡದ ಹತ್ತರ ಬಂದು, ಅಲ್ಲಿಯ ಅರಸನು ತಂದುಕೊಟ್ಟ ಕಾಣಿಕೆಯನ್ನು ತೆಗೆದುಕೊಂಡು, ಅವನಿಂದ ಆದರಾತಿಥ್ಯವನ್ನು ಹೊಂದಿ, ಅವನ ಸರದಾರರೊಡನೆ ಒಳಸಂಚುನಡಿಸಿ, ಅವರು ತನಗೆ ಅನುಕೂಲರಾದ ಬಳಿಕ ಗೋವಳಕೊಂಡದ ಅರಸನು ಪಾಖಂಡನೆಂದು ಪ್ರಸಿದ್ಧಪತ್ರಿಕೆಯನ್ನು ಹೊರಡಿಸಿ, ಗೋವಳಕೊಂಡವನ್ನು ಮುತ್ತಿದನು. ಆಗ ಅಬ್ದುಲ್‌ಹಸನನು ಕಣ್ದೆರೆದು ಶೌರ್ಯದಿಂದ ತನ್ನ ರಾಜಧಾನಿಯನ್ನು ಏಳು ತಿಂಗಳ ವರೆಗೆ ಕಾಪಾಡಿದನು. ಆದರೆ ಮುಂದೆ ಕೆಲವು ಜನ ರಾಜದ್ರೋಹಿಗಳು ಆಪಟ್ಟಣವನ್ನು ಮೊಗಲರಿಗೆ ಒಪ್ಪಿಸಿಕೊಟ್ಟರು (ಸಪಟಂಬರ ೧೬೮೭). ಈಮುತ್ತಿಗೆಯು ನಡೆದಾಗ ಅಬ್ದುಲ್‌ಹಸನನಿಗೂ ಮೋಜಿಮ್ಮನಿಗೂ ಪತ್ರವ್ಯವಹಾರ ನಡೆದಿತ್ತು. ಈಸಂಗತಿಯು ತಿಳಿದಕೂಡಲೆ ಬಾದಶಹನು ಮೋಜಿಮ್ಮನನ್ನು ಹಿಡಿಸಿ, ೭ ವರುಷಗಳ ತನಕ ಸೆರೆಯಲ್ಲಿಟ್ಟನು.

ಇತ್ತ ಮರಾಟರ ಅರಸನಾದ ಸಂಭಾಜಿಯು ಮೊಗಲರ ಹಾವಳಿಯನ್ನು ಲೆಕ್ಕಿಸದೆ ದುಂದುಗಾರಿಕೆಯಲ್ಲಿ ಕಾಲಕಳೆಯುತ್ತಿದ್ದನು. ಮರಾಟರನ್ನು ಕೂಡಿದ ಅವರಂಗಜೇಬನ ಮಗನಾದ **ಅಕಬರನು** ಅವನ ನಡತೆಯನ್ನು ನೋಡಿ ಬೇಸತ್ತು, ಹಿಂದೆ ಹೇಳಿದಂತೆ ಇರಾಣಕ್ಕೆ ಹೋದನು. ಒಂದು ದಿನ ಸಂಭಾಜಿಯು ಮೊಗಲರ ಪರವೆಯಿಲ್ಲದೆ **ಕಲುಷಾ** ಎಂಬ ತನ್ನ ಜತೆಗಾರನೊಡನೆ ಸಂಗಮೇಶ್ವರದೊಳಗೆ ದುಂದುಗಾರಿಕೆಯಲ್ಲಿ ಹೊತ್ತು ಕಳೆಯುವಾಗ, ಕೊಲ್ಹಾಪುರದಲ್ಲಿದ್ದ **ತೋಕರಾಬಖಾನನೆಂಬ** ಮೊಗಲರ ಸರದಾರನು ಮೆಲ್ಲನೆ ಅಲ್ಲಿಗೆ ಹೋಗಿ, ಅವನನ್ನೂ ಕಲುಷಾನನ್ನೂ ಸೆರೆಹಿಡಿದು ಬಾದಶಹನಿದ್ದೆಡೆಗೆ ಕಳುಹಿದನು. ಅವ

ರಂಗಜೇಬನು ಅವರಿಬ್ಬರನ್ನು ಒಂಟೆಯ ಮೇಲೆ ಕೂಡ್ರಿಸಿ ಮೆರಿಸಿ, ಸಂಭಾಜಿಗೆ—“ಮುಸಲ್ಮಾನನಾದರೆ, ನಿನ್ನ ಜೀವದಾನ ಕೊಡುವೆನು” ಎಂದು ಹೇಳಿದನು. ಇದು ಶಿವಾಜಿಯ ಮಗನಾದ ಸಂಭಾಜಿಗೆ ಸೇರುವದೇ? ಮೆಣಸು ಹುಳಿತರೆ, ಜೋಳಕ್ಕೆ ಸರಿಯಾಗಬಹುದೇ? ಆದ್ದರಿಂದ ಈಪ್ರಶ್ನವನ್ನು ಕೇಳಿದ ಕೂಡಲೆ ಸಂಭಾಜಿಯು ಸಿಟ್ಟು ಬೆಂಕಿಯಾಗಿ ಕಣ್ಣು ಕೆಂಪಗೆಮಾಡಿಕೊಂಡು ತನ್ನ ದೀನಾವಸ್ಥೆಯನ್ನು ಮನಸ್ಸಿನಲ್ಲಿ ತಾರದೆ, ಬಾದಶಹನಿಗೆ—“ನಿನ್ನ ಮಗಳನ್ನು ಕೊಟ್ಟರೆ, ಮುಸಲ್ಮಾನನಾಗುವೆನು” ಎಂದು ಉತ್ತರ ಕೊಟ್ಟನು. ಅದನ್ನು ಕೇಳಿ ಬಾದಶಹನು ಮುನಿದು ಅವನ ಕಣ್ಣುಗಳನ್ನು ಕೀಳಿಸಿ, ನಾಲಿಗೆಗೆ ಬರೆಕೊಡಿಸಿ, ಅವನನ್ನು ಬಹಳ ಕ್ರೂರತನದಿಂದ ಕೊಲ್ಲಿಸಿದನು (ಅಗಸ್ಟ ೧೬೮೯).

ಈ ಭಯಂಕರವಾದ ಕೊಲೆಯ ಸುದ್ದಿಯನ್ನು ಕೇಳಿ, ಮರಾಟರು ಕಡುಮುನಿದರು. ಆದರೆ ಮಾಡುವದೇನು? ಅವರ ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯಲ್ಲಿದ್ದಿಲ್ಲ; ಆದ್ದರಿಂದ ಅವರು ನಿರುಪಾಯರಾಗಿ ತಂತಮ್ಮ ಕ್ಷೇಮದ ಎಣಿಕೆಯಲ್ಲಿ ತೊಡಗಿದರು.

ಅಲಮ್ಗೀರನು ಇದೇ ಸಮಯವೆಂದೆಣಿಸಿ ಹೊತ್ತುಗಳೆಯದೆ ಮರಾಟರ ರಾಜಧಾನಿಯಾದ ರಾಯಗಡವನ್ನು ಹಿಡಿಯಲಿಕ್ಕೆ ಒಂದು ದಂಡನ್ನು ಕಳುಹಿದನು. ಮರಾಟರು ಅದನ್ನು ಕಲಿತನದಿಂದ ಕಾಪಾಡಿದರೂ, ಕೊನೆಗೆ ಮೊಗಲರು ಒಬ್ಬ ಮಾವಳಿಯ ಸರದಾರನನ್ನು ಒಡಕೊಂಡು, ಆ ಕೋಟೆಯನ್ನು ತಮ್ಮ ಸ್ವಾಧೀನ ಮಾಡಿಕೊಂಡರು. ಆದ್ದರಿಂದ ಅಲ್ಲಿದ್ದ ಚಿಕ್ಕ ಶಾಹುಮಹಾರಾಜನೂ ರಾಜ್ಯಪಾಲಕನಾದ ರಾಜಾರಾಮನೂ ಕರ್ನಾಟಕದಲ್ಲಿದ್ದ ಜಿಂಜಿಯೆಂಬ ಕೋಟೆಗೆ ಓಡಿಹೋದರು.*

---

* ದೇಶಸ್ಥ ಬ್ರಾಹ್ಮಣರು ರಾಜನಿಷ್ಠರೆಂಬ ಮಾತಿಗೆ ಸಂಶಯವಿಲ್ಲ. ರಾಜಾರಾಮನ ಮಂತ್ರಿಯಾದ ಪ್ರಲ್ಹಾದಶಾಯನೆಂಬ ಒಬ್ಬ ದೇಶಸ್ಥ ಬ್ರಾಹ್ಮಣನು ಶಿವಾಜಿಯ ವಂಶವನ್ನು ಕಾಪಾಡಲಿಕ್ಕೆ ಏಕ್ಷಪ್ರಯತ್ನ ಮಾಡಿದನು. ಹಾಗೆಯೇ ರಾಮಚಂದ್ರರಾಯನೆಂಬ ಮತ್ತೊಬ್ಬ ದೇಶಸ್ಥ ಬ್ರಾಹ್ಮಣನು ಸಾತಾರೆಯಲ್ಲಿದ್ದು ಶಿವಾಜಿಯ ಉಳಿದ ರಾಜ್ಯವನ್ನು ಕಾಯಲಿಕ್ಕೆ ಯತ್ನಿಸಿದನು.

ಬಳಿಕ ಜಯಶಾಲಿಯಾದ ಅವರಂಗಜೇಬನು ತನ್ನ ಶೂರ ಸರದಾರನಾದ ಜುಲಫಿಕೀರಖಾನನನ್ನು ಜಿಂಜೀಕೋಟೆಯನ್ನು ಮುತ್ತಲಿಕ್ಕೆ ಕಳುಹಿದನು (೧೬೯೧). ಅವನ ದಂಡು ಆಕೋಟೆಯನ್ನು ಹಿಡುಕೊಳ್ಳಲಿಕ್ಕೆ ಸಾಕಷ್ಟು ಇಲ್ಲದ್ದರಿಂದ, ಅವನು ಹೆಚ್ಚು ದಂಡನ್ನು ಕಳುಹಬೇಕೆಂದು ಬಾದಶಹನಿಗೆ ಮೇಲಿಂದ ಮೇಲೆ ಬರೆದನು. ಆದರೆ ಬಾದಶಹನು ತನ್ನ ಸಂಶಯದ ಸ್ವಭಾವದಿಂದ ಅವನ ಬಿನ್ನಹಕ್ಕೆ ಕಿವಿಗೊಡಲಿಲ್ಲ. ಆದ್ದರಿಂದ ಸಂತಾಜಿ ಘೋರಪಡೆ-ಧನಾಜಿಜಾಧವರೆಂಬಿಬ್ಬರು ಮರಾಟರ ಸರದಾರರು ಇದೇ ಉತ್ತಮಸಂಧಿಯೆಂದೆಣಿಸಿ, ಮೊಗಲರಿಗೆ ಇದುರಾಗಿ ಕಾಳಗಕ್ಕೆ ನಿಲ್ಲದೆ, ಅವರ ಊರುಗಳನ್ನು ಸುಲಿಯಲಾರಂಭಿಸಿದ್ದಲ್ಲದೆ, ಅವರ ಸಾಮಗ್ರಿಯನ್ನೂ ತೋಪುಗಳನ್ನೂ ಬಂಡಾರವನ್ನೂ ಅಲ್ಲಲ್ಲಿ ಹಿಡಿದುಕೊಳ್ಳಲಾರಂಭಿಸಿದರು. ಈಕಾಟವನ್ನು ದೂರಮಾಡಲಿಕ್ಕೆ ಬೇರೆ ಹಂಚಿಕೆಯನ್ನು ಕಾಣದೆ, ಬಾದಶಹನು ಜಿಂಜಿಯನ್ನು ಬೇಗನೇ ತಕ್ಕೊಳ್ಳಲಿಕ್ಕೆ ಹವಣಿಸಿ, ತನ್ನ ಮಗನಾದ ಕಂಬಕ್ಷನನ್ನೂ ಜುಲಫಿಕೀರಖಾನನ ತಂದೆಯಾದ ಅಸದ್ದಖಾನನನ್ನೂ ದೊಡ್ಡ ದಂಡಿನೊಡನೆ ಅಲ್ಲಿಗೆ ಕಳುಹಿದನು. ಬಾದಶಹನ ಈಯವಿಶ್ವಾಸದ ಕೆಲಸವು ಎಲ್ಲರ ಮನಸ್ಸನ್ನು ನೋಯಿಸಿತು. ಅಸದ್ದಖಾನನು ಮುಖ್ಯ ದಳವಾಯಿಯಾದ್ದರಿಂದ ಕಂಬಕ್ಷನೂ ಜುಲಫಿಕೀರಖಾನನೂ ತಮ್ಮ ಮನಸ್ಸುತೆಗೆದು ಮುತ್ತಿಗೆಯನ್ನು ಮೂರು ವರುಷಗಳ ವರೆಗೆ ಬೆಳಿಸಿದರು.

ಇತ್ತ ಸ್ವಾಮಿಭಕ್ತಿಪರನಾದ ಸಂತಾಜಿಯು ಜಿಂಜಿಯ ಮುತ್ತಿಗೆಯನ್ನು ಎಬ್ಬಿಸುವದಕ್ಕೋಸ್ಕರ ೨೦,೦೦೦ ದಂಡಿನೊಡನೆ ಹೊರಟು, ಒಮ್ಮಿಂದೊಮ್ಮೆ ಮೊಗಲರ ಮೇಲೆ ಬಿದ್ದನು. ಆಗಲವರು ಅಂಜಿ ಮುತ್ತಿಗೆಯನ್ನೆಬ್ಬಿಸಿ ಹಿಂದಕ್ಕೆ ಸರಿದರು. ಬಳಿಕ ಸಂತಾಜಿಯು ಮೊಗಲರನ್ನು ಮುತ್ತಿ, ಬಾದಶಹನು ಮಡಿದನೆಂಬ ಸುದ್ದಿಯನ್ನು ಹುಟ್ಟಿಸಿ, ಕಂಬಕ್ಷನನ್ನು ತನ್ನ ಕಡೆಗೆ ಮಾಡಿಕೊಳ್ಳಲಿಕ್ಕೆ ಯತ್ನ ನಡಿಸಿದನು. ಈಸುದ್ದಿಯನ್ನು ಕೇಳಿ ಉಳಿದ ಸರದಾರರು

ಕಂಬಕ್ಷನನ್ನು ಕಾವಲಿನಲ್ಲಿಟ್ಟು, ಮರಾಟರ ಕೂಡ ಒಪ್ಪಂದವನ್ನು ಮಾಡಿಕೊಂಡು, ಅಲ್ಲಿಂದ ೨೦ ಮೈಲಿನ ಮೇಲಿರುವ ವಂಡಿವಾ ಸಕ್ಕೆ ಹೋದರು.

ಈಕಾಲಕ್ಕೆ ಅಲಮ್ಗೀರನು ತಾನು ಮೊದಲು ಪಾಳಯ ಹಾಕಿದ್ದ ಗಲಗಲಿಯನ್ನು ಬಿಟ್ಟು ಪಂಢರಪುರದ ಹತ್ತರಿರುವ ಬ್ರಹ್ಮಪುರದಲ್ಲಿ ತನ್ನ ಪಾಳಯವನ್ನೂರಿದನು. ಜಿಂಜಿಯಲ್ಲಿ ನಡೆದ ಸಂಗತಿಯ ಸುದ್ದಿಯು ಅಲ್ಲಿ ಅವನಿಗೆ ಮುಟ್ಟಿತು. ಕೂ ಡಲೆ ಅವನು ಕಂಬಕ್ಷನನ್ನು ತನ್ನೆಡೆಗೆ ಕಳುಹಬೇಕೆಂತಲೂ ಜುಲಫಿಕೀರಖಾನನು ಮುಖ್ಯ ದಳವಾಯಿಯಾಗಬೇಕೆಂತಲೂ ಹುಕುಮುಕಳುಹಿದನು. ಅಂದಿನಿಂದ ಮರಾಟರ ಯುದ್ಧವು ಹಾಗೂ ಹೀಗೂ ಕೆಲವು ದಿವಸ ನಡೆಯಿತು. ಸಂತಾಜಿಯು ಮೊ ಗಲರ ದಂಡನ್ನು ಚಿತ್ರಗಲ್‌ದುರ್ಗದಲ್ಲಿ ಪೂರ್ಣವಾಗಿ ಸೋಲಿ ಸಿದನು. ಬಳಿಕ ಜುಲಫಿಕೀರಖಾನನು ತಂಜಾವರದ ಅರಸನನ್ನು ಸೋಲಿಸಿ, ಅವನಿಂದ ಪೊಗದಿಯನ್ನು ತೆಗೆದುಕೊಂಡು ತಿರುಗಿ ಬಂದು, ಜಿಂಜಿಗೆ ಮುತ್ತಿಗೆಯ ಹಾಕಿದನು (೧೬೯೭). ಆದರೆ ಅಲ ಮ್ಗೀರನು ಅದನ್ನು ಬೇಗನೆ ಹಿಡಿದುಕೊಳ್ಳಬೇಕೆಂದು ಆಗ್ರಹ ಹಿಡಿದುದರಿಂದ ಜುಲಫಿಕೀರನು ತನ್ನ ಗೆಳೆಯನಾದ ರಾಜಾರಾ ಮನಿಗೆ ಅಲ್ಲಿಂದ ಸುರಕ್ಷಿತವಾಗಿ ಹೋಗಗೊಟ್ಟು, ತಾನು ಆಕೋ ಟೆಯನ್ನು ಹಿಡಿದುಕೊಂಡನು (೧೬೯೮).

ಅಷ್ಟರಲ್ಲಿ ಮರಾಟರೊಳಗೆ ಒಡಕು ಹುಟ್ಟಿತು. ಅವರ ಮುಖ್ಯ ಸರದಾರರಾದ **ಧನಾಜಿ, ಜಾಧವರಾಯ, ಸಂತಾಜಿ, ಘೋರಪಡೆ** ಇವರ ನಡುವೆ ಜಗಳ ಬಂತು. ರಾಜಾರಾಮನು ಧನಾಜಿಯ ಪಕ್ಷ ಹಿಡಿದುದರಿಂದ ಕೆಲ ಸರದಾರರು ಸಂತಾಜಿ* ಯನ್ನು ಮೋಸದಿಂದ ಕೊಂದುಹಾಕಿದರು.

ರಾಜಾರಾಮನು ಈಕೊಲೆಯಾಗುವದಕ್ಕಿಂತ ಮೊದಲು

---

* ಮುಂದೆ ಈ ನಮ್ಮ ಕರ್ನಾಟಕದಲ್ಲಿ ದಾಳಿಮಾಡಿದ ಮುರಾರಿರಾಯನು ಈ ಸಂತಾಜಿಯ ಅಣ್ಣನ ಮಗನು.

ಸಾತಾರೆಗೆ ಹೋಗಿದ್ದನು. ಅಲ್ಲಿಯವನು ದಂಡನ್ನು ಕೂಡಿಸಿ, ಮೊಗಲರ ಪಾಳಯದಿಂದ ದೂರಿದ್ದ ಊರುಗಳನ್ನು ಸುಲಿದು, ಆವೂರವರಿಂದ ಚೌಥಾಯಿಯನ್ನು ತೆಗೆದುಕೊಂಡನು. ಇದನ್ನು ನೋಡಿ ಅಲಮ್ಗೀರನು ತನ್ನ ಯುದ್ಧದ ಕ್ರಮವನ್ನು ಬದಲಿಸಿ, ಇಷ್ಟು ದಿವಸದಂತೆ ದಂಡಿನ ಬೇರೆಬೇರೆ ಭಾಗಗಳನ್ನು ಬೇರೆಬೇರೆ ದಿಕ್ಕುಗಳಿಗೆ ಕಳುಹದೆ, ಇಡಿ ದಂಡನ್ನು ಒಂದೊಂದೆಡೆಗೆ ಕಳುಹ ಲಾರಂಭಿಸಿದನು. ಆದರೂ ಮರಾಟರು ತಮ್ಮ ಕಾಯಕವನ್ನು ಬಿಡಲಿಲ್ಲ. ಅವರು ಮೊಗಲರ ದಂಡನ್ನು ಕಂಡ ಕೂಡಲೆ ದಿಕ್ಕು ಪಾಲಾಗಿ, ಮುಂದೆ ಬೇರೊಂದೆಡೆಯಲ್ಲಿ ಎಲ್ಲರೂ ಕಲಿತು, ಮೊದ ಲಿನಂತೆ ತಮ್ಮ ಹಾವಳಿಯನ್ನು ನಡಿಸಿದರು. ಆದ್ದರಿಂದ ಅಲಮ್ಗೀ ರನು ಬೇಸತ್ತು, ತಾನೇ ದಂಡೆತ್ತಿ ಹೋಗಿ, ಮರಾಟರ ರಾಜ ಧಾನಿಯಾದ ಸಾತಾರೆಯನ್ನು ಮುತ್ತಿದನು (೧೭೦೦). ಈ ಮುತ್ತಿಗೆಯು ನಡೆದಾಗ ರಾಜಾರಾಮನು ತೀರಿಕೊಂಡುದರಿಂದ ಮರಾಟರು ಎಷ್ಟು ಕಲಿತನದಿಂದ ಕಾದಿದರೂ ಕಟ್ಟಕಡೆಗೆ ಸಾತಾ ರೆಯು ಅಲಮ್ಗೀರನ ಕಯ್ಸೇರಿತು (ಎಪ್ರಿಲ ೧೭೦೦).

ಅವರಂಗಜೇಬನ ಎಲ್ಲ ಕುಯುಕ್ತಿಗಳೂ ಅವನ ಎಡೆಬಿಡದ ಮೇಲ್ವಿಚಾರಣೆಯೂ ಮೊಗಲರ ಘನತೆಯ ಅಳಿಗಾಲವನ್ನು ನಿಲ್ಲಿ ಸಲಿಲ್ಲ. ರಜಪೂತರು ಹೊಟ್ಟೆಯುರಿದು ಕುಳಿತಿದ್ದರು. ಆಗ್ರಾದ ಹತ್ತರ ಜಾಟರು ಬಂಡುಮಾಡಿದರು. ಮಾಳವಾದಲ್ಲಿ ದಂಗೆ ಎದ್ದಿತು. ಮರಾಟರಂತೂ ಮೊಗಲರ ಸಾಮ್ರಾಜ್ಯವನ್ನು ಹಾಳು ಮಾಡಲಿಕ್ಕೆ ಟೊಂಕಕಟ್ಟಿಕೊಂಡು ನಿಂತಿದ್ದರು. ಇವರು ಗುಜ ರಾಥ ಮಾಳವಾ ಪ್ರಾಂತಗಳನ್ನು ಸುಲಿದರು. ಅಲಮ್ಗೀರನು ಮುಂದೆ ಕೋಟೆಗಳನ್ನು ತಕ್ಕೊಳ್ಳುತ್ತ ಹೋದ ಹಾಗೆ ಹಿಂದಿ ನಿಂದ ಇವರು ಅವುಗಳನ್ನು ಒಂದೊಂದನ್ನೇ ಕಸುಕೊಳ್ಳುತ್ತ ನಡೆದರು. ಮೊಗಲರ ದನಕರಗಳು ಸತ್ತುಹೋದವು; ಬಂಡಾರ ವೆಲ್ಲ ಬರಿದಾಯಿತು; ದಂಡಾಳುಗಳ ಸಂಬಳವು ೫-೬ ತಿಂಗಳು ಕೊಡದೆ ಉಳಿಯಿತು; ಆದ್ದರಿಂದ ಮೊಗಲರ ಹುರುಪು ತಗ್ಗಿತು.

ಒಂದು ಪತ್ರದಲ್ಲಿ ಬಾದಶಹನು ಜುಲಫಿಕೀರಖಾನನಿಗೆ "ಹಣದ ಕೊರತೆಯು ಬಹಳವಾಗಿದೆ, ಹೂಳಿಟ್ಟ ಹಣವು ಎಲ್ಲಿಯಾದರೂ ಇದ್ದರೆ ಹುಡುಕು" ಎಂದು ಬರೆದನು. ಸಂಬಳವು ಹೊತ್ತುಹೊತ್ತಿಗೆ ಮುಟ್ಟದ್ದರಿಂದ ದಂಡಿನಲ್ಲಿ ವ್ಯವಸ್ಥೆ ಉಳಿಯಲಿಲ್ಲ. ಆದಕಾರಣ **ವಾಕಣಕೇರಿ**ಯೆಂಬದೊಂದು ಸಣ್ಣ ಹಳ್ಳಿಯನ್ನು ಹಿಡಿದುಕೊಳ್ಳಲಿಕ್ಕೆ ಬಾದಶಹನು ತಾನೇ ದೊಡ್ಡ ದಂಡಿನೊಡನೆ ಹೋಗಬೇಕಾಯಿತು. ಒಮ್ಮೆ ಮರಾಟರೊಡನೆ ಅವನು ಒಪ್ಪಂದದ ಮಾತುಗಳನ್ನು ಕೂಡ ನಡಿಸಿದನು; ಆದರೆ ಅವರು ಅವನ ಶರ್ತುಗಳಿಗೆ ಒಪ್ಪಲಿಲ್ಲ. ಕಟ್ಟಕಡೆಗೆ ಅವನು ಬೇರೆಯಾವ ಉಪಾಯವನ್ನು ಕಾಣದೆ ಉಳಿದಷ್ಟು ದಂಡು ಕಟ್ಟಿಕೊಂಡು ಅಹಮ್ಮದನಗರಕ್ಕೆ ಮರಳಿ ಹೋದನು. ಇಪ್ಪತ್ತು ವರ್ಷಗಳ ಹಿಂದೆ ಆವೂರನ್ನು ಬಿಟ್ಟಾಗ ಅವನ ವೈಭವವೆತ್ತ, ಈಗ ತಿರುಗಿಬಂದಾಗ ಅವನ ದುರವಸ್ಥೆಯೆತ್ತ!

ಈಕಾಲಕ್ಕೆ ಅವರಂಗಜೇಬನು ಬಹಳ ಅಶಕ್ತನಾಗಿದ್ದನು. ಆದ್ದರಿಂದ ಅವನು ಮೇಲಿಂದ ಮೇಲೆ ಬೇನೆಬೀಳುತ್ತಿದ್ದನು. ಅಹಮ್ಮದನಗರಕ್ಕೆ ಬಂದಮೇಲೆ ಅವನ ಅಸ್ವಸ್ಥತೆಯು ಹೆಚ್ಚಾಯಿತು. ಇನ್ನು ತಾನು ಬಹಳ ದಿವಸ ಬದುಕಲಿಕ್ಕಿಲ್ಲೆಂದು ತಿಳಿದು, ತನ್ನ ತಂದೆಯಂತೆ ತನ್ನ ಹಾಡಾದರೂ ಆಗಬಹುದೆಂದೆಣಿಸಿ, ಅವನು ತನ್ನನ್ನು ನೋಡಲಿಕ್ಕೆ ಬರಲಪೇಕ್ಷಿಸುವ ತನ್ನ ಮಕ್ಕಳಿಗೆ ಬರಕೂಡದೆಂದು ಕಟ್ಟುಮಾಡಿದನು. ಇದೇ ಅವನ ಕಡೆಯ ಹುಕುಮು. ಇಲ್ಲಿಗೆ ಅವನ ಅವತಾರವು ಮುಗಿದಂತಾಯಿತು. ಅವನು ಭಗ್ನಮನೋರಥನಾಗಿ (೧೭೦೭ ಮಾರ್ಚ ೪ ಶುಕ್ರವಾರ ದಿವಸ) ಅಹಮ್ಮದನಗರದಲ್ಲೇ ತೀರಿಕೊಂಡನು. ಅವನ ಅಪ್ಪಣೆಯಂತೆ ಅವನ ಹೆಣವನ್ನು ದೌಲತ್ತಾಬಾದಿನ ನೆರೆಯಲ್ಲಿ ಹೂಳಿದರು. ಅವನ ತಲೆಗಿಂಬಿನ ಕೆಳಗಿದ್ದ ಒಂದು ಮೃತ್ಯುಪತ್ರದಲ್ಲಿ **ಮೋಜಿಮ್ಮನು** ಬಾದಶಹನಾಗಿ ದಿಲ್ಲಿಯಲ್ಲಿ ಆಳಬೇಕೆಂತಲೂ, **ಅಜಮ್ಮನು** ಆಗ್ರಾವನ್ನು ತನ್ನ ರಾಜಧಾನಿಯನ್ನು ಮಾಡಿಕೊಂಡು ಬಂಗಾಲ, ಬಿಹಾರ ಮುಂತಾದ ಪೂರ್ವಹಿಂದುಸ್ಥಾನದ ಭಾಗದಲ್ಲಿ ರಾಜ್ಯಮಾಡಬೇ

ಕೆಂತಲೂ, ಕಂಬಕ್ಷನು ವಿಜಾಪುರ, ಗೋವಳಕೊಂಡ ಪ್ರಾಂತಗಳ ಒಡೆಯನಾಗಬೇಕೆಂತಲೂ ಬರೆದಿತ್ತು.

ಅವರಂಗಜೇಬನು ತುಸು ಗಿಡ್ಡನೂ ತೆಳ್ಳಗಿನವನೂ ಆಗಿದ್ದನು. ಚಿತ್ರದಲ್ಲಿ ತೋರಿಸಿದಂತೆ ಅವನ ಮೂಗು ಉದ್ದವಾಗಿತ್ತು. ಅವನ ಗಡ್ಡವು ಚಕ್ರಾಕಾರವಾಗಿ ಮೋರೆಗೆ ಒಪ್ಪುತ್ತಿತ್ತು. ಅವನ ಬಣ್ಣವು ನಸುಗೆಂಪು. ಅವನು ಆವಾಗಲೂ ರೇಶ್ಮಿಯ ತೊಡಿಗೆಗಳನ್ನು ಹಾಕಿಕೊಳ್ಳುತ್ತಿದ್ದನು. ಅವನ ಹಣೆಯ ಮೇಲೆ ರುಮಾಲದೊಳಗೆ ಒಂದು ದೊಡ್ಡ ಪಚ್ಚವಿರುತ್ತಿತ್ತು. ಅವನು ತನ್ನ ಸರದಾರರ ನಡುವೆ ನಿಂತು ಅರ್ಜಿಗಳನ್ನು ತಾನೇ ಓದಿ, ತನ್ನ ಕಯ್ಯಿಂದ ಹುಕುಮುಗಳನ್ನು ಬರೆಯುತ್ತಿದ್ದನು. ಅವನು ನಗೆಮೋರೆಯುವನಾಗಿದ್ದನು.

ಎದೆಗಾರಿಕೆ, ಜಾಣ್ಮೆ, ಚುರುಕುತನಗಳಲ್ಲಿ ಅವರಂಗಜೇಬನು ಮೇಲಾದವನೇ ಸರಿ. ಆದರೆ ಅವನಲ್ಲಿ ಒಂದು ದೊಡ್ಡ ಕೊರತೆಯಿತ್ತು. ಇದರಿಂದಲೇ ಹಿಂದೂಜನರು ಅವನ ಕಡುಹಗೆಗಳಾದರು; ಇದರಿಂದಲೇ ಅವನ ದಳವಾಯಿಗಳು ಹುರುಪಿನಿಂದ ತಮ್ಮ ಕೆಲಸವನ್ನು ಜರಗಿಸಲಿಲ್ಲ; ಇದರಿಂದಲೇ ಅವನ ಮಕ್ಕಳೂ ಸರದಾರರೂ ದ್ರೋಹವನ್ನು ಬಗೆದರು; ಇದರಿಂದಲೇ ಆವಾಗಲೂ ಅವನ ಮನಸ್ಸಿಗೆ ಶಾಂತಿಯಿದ್ದಿಲ್ಲ, ಮತ್ತು ಜೀವಕ್ಕೆ ಸುಖವಿದ್ದಿಲ್ಲ; ಇದರಿಂದಲೇ ಅಕಬರನು ತನ್ನ ಬುದ್ಧಿಬಲದಿಂದ ನೆಲೆಗೊಳಿಸಿದ ಮೊಗಲರ ಸಾಮ್ರಾಜ್ಯವು ಅಲ್ಲಾಡಹತ್ತಿತು, ವೈಭವವು ಕಳೆಗುಂದತೊಡಗಿತು, ಮತ್ತು ರಾಜ್ಯಲಕ್ಷ್ಮಿಯು ತೊಲಗಲುಜ್ಜುಗಿಸಿದಳು. ಈ ಕೊರತೆಯಾವದೆಂದರೆ ಅವನ ಧರ್ಮದ ದುರಭಿಮಾನವು. ಇದಲ್ಲದೆ ಅವನಲ್ಲಿ ಸಂಶಯವೂ ಹೊಟ್ಟೆಕಿಚ್ಚೂ ಮನೆಮಾಡಿಕೊಂಡಿದ್ದವು.

ಆಲಮ್ಗಿರನ ಆಸಕ್ತಿಯು ಬಣ್ಣಿಸತಕ್ಕಂತಹದೇ ಸರಿ. ಅವನು ೧೬೮೪ರಲ್ಲಿ ನರ್ಮದಾನದಿಯನ್ನು ದಾಟಿದನು. ಆಗ ಅವನಿಗೆ ೬೫ ವರ್ಷಗಳಾಗಿದ್ದವು. ಬ್ರಹ್ಮಪುರವನ್ನು ಬಿಟ್ಟಾಗ ಅವನಿಗೆ ೮೧ನೆಯ ವರ್ಷವು ಆರಂಭವಾಗಿತ್ತು. ಇಂತಹ ಮುಪ್ಪಿನ ಮುದುಕನು

ತಾನೇ ದಂಡೆತ್ತಿಹೋಗಿ ಯುದ್ಧದ ತರತರದ ಕಷ್ಟಗಳನ್ನೂ ತೊಂದರೆಗಳನ್ನೂ ಬೇಸರಿಲ್ಲದೆ ಅನುಭವಿಸಿದನು. ಇದು ಸಾಧಾರಣವಾದ ಮಾತಲ್ಲ.*

ಅವನು ಮುಪ್ಪಿನ ಮುದುಕನಾದರೂ ಎಲ್ಲ ಕೆಲಸವನ್ನು ತಾನೇ ನೋಡುತ್ತಿದ್ದನು. ಆವ ದಂಡಾದರೂ ಅವನ ಕಯ್ಬರಹದ ಹುಕುಮಿಲ್ಲದೆ ಹೆಜ್ಜೆಯನ್ನು ಮುಂದಿಡುತ್ತಿದ್ದಿಲ್ಲ. ಆವದಾದರೊಂದು ಕೋಟೆಯನ್ನು ಮುತ್ತುವದಿದ್ದರೆ ಅವನು ಆಕೋಟೆಯ ನಕಾಶವನ್ನು ತೆಗಿಸಿ, ಇಂತಿಂತು ಮಾಡಬೇಕೆಂದು ಹುಕುಮು ಕಳುಹುತ್ತಿದ್ದನು. ಅವನ ಒಪ್ಪಿಗೆಯ ಹೊರತು ಒಬ್ಬ ಸಣ್ಣ ಕಾರಕೂನನ್ನಾದರೂ ನಿಯಮಿಸುವ ಸ್ವಾತಂತ್ರ್ಯವು ಒಬ್ಬನಿಗಾದರೂ ಇದ್ದಿಲ್ಲ.

ಅವರಂಗಜೇಬನ ಸ್ವಭಾವವು ಬಲು ಸಂಶಯುದ್ದಾಗಿತ್ತು. ಅವನು ತನ್ನಂತೆ ತನ್ನ ಮಕ್ಕಳು ಪಿತೃದ್ರೋಹ ಮಾಡಿಯಾರೆಂದು ಹೆದರಿಕೊಂಡಿದ್ದನು. ತಾನು ಮೋಸದಿಂದ ಶಹಾಜಿಹಾನನನ್ನು ಸೆರೆಯಲ್ಲಿಟ್ಟದ್ದು ಅವನ ಮನಸ್ಸಿನಲ್ಲಿಯಾವಾಗಲೂ ಕಟೆಯುತ್ತಿತ್ತು. ಸರದಾರರೊಡನೆ ವಿರೋಧಕಟ್ಟಲಿಕ್ಕೆ ಅವನು ಅಂಜುತ್ತಿದ್ದನು, ಮತ್ತು ತನ್ನ ಮಕ್ಕಳುಮೊಮ್ಮಕ್ಕಳೊಳಗೆ ಭೇದಬುದ್ಧಿಯನ್ನು ಹುಟ್ಟಿಸಲಿಕ್ಕೆ ಹವಣಿಸುತ್ತಿದ್ದನು. ಅದಕ್ಕೋಸ್ಕರ ಅವನು ತನ್ನ ಮಕ್ಕಳನ್ನು ದೂರ ದೂರ ದೇಶಗಳಿಗೆ ಕಳುಹಿ, ಅವರ ಮಕ್ಕಳಿಗೆ ದೊಡ್ಡ ದೊಡ್ಡ ಕೆಲಸಗಳನ್ನು ಕೊಟ್ಟು, ತನ್ನ ಹತ್ತರ ಇಟ್ಟುಕೊಳ್ಳುತ್ತಿದ್ದನು.

---

*ಬ್ರಹ್ಮಪುರದಲ್ಲಿರುವಾಗ ಒಂದು ದಿನ ಭೀಮಾನದೀ ಬಂದು ಅವರಂಗಜೇಬನಿದ್ದ ಕೋಣೆಯೊಂದು ಬಿಟ್ಟು ಉಳಿದ ಪಾಳಯವೆಲ್ಲ ನೀರೊಳಗೆ ಮುಳುಗಿ ಹೋಯಿತು. ಹನ್ನೆರಡು ಸಾವಿರ ಜನರು ಸತ್ತರು. ಎಷ್ಟೋ ಆನೆಯೊಂಟೆಸಾಮಾನುಗಳು ತೇಲಿಹೋದವು. ಹೊಳೆಯು ಬೇಗನೆ ಇಳಿದುದರಿಂದ ಬಾದಶಹನೂ ಕೆಲ ದಂಡಾಳುಗಳೂ ಮಾತ್ರ ಉಳಿದರು. ಮತ್ತೊಮ್ಮೆ ಸಾತಾರೆಯನ್ನು ಹಿಡಿದುಕೊಂಡು ಪಾರ್ಲಿಕೋಟೆಯನ್ನು ಮುತ್ತಿದಾಗ ದೊಡ್ಡ ಮಳೆ ಬಂದು ಎಷ್ಟೋ ನಾಶವಾಯಿತು. ಇದಲ್ಲದೆ ಕೊಂಕಣದ ಹಳ್ಳಬೆಟ್ಟಗಳೂ ಗುಡ್ಡಗಾಡುಗಳೂ ಮೊಗಲರಿಗೆ ಬಹಳ ತೊಂದರೆಯನ್ನು ಕೊಟ್ಟವು. ಈ ದಂಡಯಾತ್ರೆಯಲ್ಲಿ ಅಲಮ್ಗಾರನಿಗೆ ಹೊತ್ತುಹೊತ್ತಿಗೆ ಊಟ ನಿದ್ದೆ ಸಿಗುತ್ತಿದ್ದಿಲ್ಲ.

ದೊಡ್ಡ ದೊಡ್ಡ ಗೃಹಸ್ಥರು ಕಾಣಲಿಕ್ಕೆ ಬಂದಾಗ ಅವನು ಮುಂಗಾಲುಪುಟಿಕೆಯ ಮಾತಿನಿಂದ ಅವರ ಇಂಗಿತವನ್ನು ತಿಳಿದುಕೊಳ್ಳಲಿಕ್ಕೆ ಯತ್ನಿಸುತ್ತಿದ್ದನು.*

*ಈಯೆಲ್ಲ ಘಟಾಟೋಪವು ಇವನ ಪಿತೃದ್ರೋಹಕ್ಕೋಸ್ಕರ ದೇವರು ಮಾಡಿದ ಶಿಕ್ಷೆಯೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಈಸಂಗತಿಗಳು ಅಲಮ್ಗೀರನ ಮನಸ್ಸಿನ ಕೀಳುತನವನ್ನು ತೋರಿಸುವವೇ ಹೊರತು ಅವನ ಯೋಗ್ಯತೆಯನ್ನು ಹೆಚ್ಚಿಸುವದಿಲ್ಲ. ಈನಡತೆಯು ರಾಜ್ಯದ ಕಾರ್ಯಭಾರಕ್ಕೆ ತೊಂದರೆಯನ್ನುಂಟುಮಾಡಿದ್ದಲ್ಲದೆ ಮೊಗಲರ ಸಾಮ್ರಾಜ್ಯವನ್ನು ಕಳೆಗುಂದಿಸಿತು.




## ೧. ಶಿವಾಜಿ.

ಮರಾಟರ ರಾಜ್ಯಸ್ಥಾಪಕನೂ ಮೋಗಲ್ ಸಾಮ್ರಾಜ್ಯಕ್ಕೆ ಅಳಿಗಾಲ ತಂದವನೂ ಶಿವಾಜಿ ಮಹಾರಾಜನೇ ಸರಿ. ಆವನ ಅಜ್ಜನಾದ ಮಾಲೋಜಿಯು ನಿಜಾಮನ ರಾಜ್ಯದಲ್ಲಿದ್ದ **ವೇರೂಳ**ವೆಂಬ ಗ್ರಾಮದ ಗೌಡನಾಗಿದ್ದನು. ಅವನಿಗೆ **ಶಹಾಜಿ, ಶರಿಫಜಿ** ಎಂಬ ಇಬ್ಬರು ಗಂಡುಮಕ್ಕಳಿದ್ದರು. ಶಹಾಜಿಗೆ ಇಬ್ಬರು ಹೆಂಡರಿದ್ದರು. ಅವರೊಳಗೆ ಒಬ್ಬಳಾದ **ಜೀಜಿಬಾಯಿ**ಯಿಂದ ಶಿವಾಜಿಯು ೧೬೨೭ ರಲ್ಲಿ **ಶಿವನೇರ**ವೆಂಬ ಕೋಟೆಯಲ್ಲಿ ಹುಟ್ಟಿದನು.

ಶಹಾಜಿಗೆ ಮೊದಲು ಅಹಮ್ಮದನಗರದ ಸರಕಾರದಲ್ಲಿ ಕೆಲಸ ವಿತ್ತು. ಆದರೆ ಆರಾಜ್ಯವನ್ನು ಮೋಗಲ್‌ಬಾದಶಹನು ಹಾಳು ಮಾಡಿದ ಬಳಿಕ ಅವನು ಮುರಾರಿಪಂತನೆಂಬ ವಿಜಾಪುರದ ಪ್ರಧಾನಿಯ ದ್ವಾರದಿಂದ ಸಂಧಾನಹಚ್ಚಿ, ಅದಿಲ್‌ಶಾಹಿ ಸರಕಾರದ ಉದ್ಯೋಗಸ್ಥನಾದನು (೧೬೩೭). ಮುಂದೆ ನಿಂಬಾಳಕರ ಮನೆತನದವಳಾದ ಸಾಯಿಬಾಯಿಯೊಡನೆ ತನ್ನ ಹಿರಿಮಗನಾದ ಶಿವಾಜಿಯ ಲಗ್ನವಾದ ಬಳಿಕ, ಶಹಾಜಿಯು ಜೀಜಿಬಾಯಿಯನ್ನೂ ಶಿವಾಜಿಯನ್ನೂ ಪುಣೆಯೊಳಗೆ ದಾದೋಜಿಕೊಂಡದೇವನೆಂಬ ಒಬ್ಬ ಬ್ರಾಹ್ಮಣನ ಅಂಕೆಯಲ್ಲಿಟ್ಟು, ತಾನು ಕರ್ನಾಟಕಕ್ಕೆ ದಂಡೆತ್ತಿ ಹೋದನು.

ಪ್ರಾಯಕ್ಕೆ ಬಂದ ಬಳಿಕ ಶಿವಾಜಿಯು ಪುಂಡತನವ ಮಾಡಲಾರಂಭಿಸಿದನು. ಅವನಿಗೆ ಕೊಂಕಣಪ್ರದೇಶದ ಮಾವಳೆ ಜನರು ಅನುಕೂಲರಾಗಿದ್ದರು. ಅವನು ಮಹಾಭಾರತ-ರಾಮಾಯಣಗಳ ಕಥೆಗಳನ್ನು ಕೇಳಿ, ಅವುಗಳಲ್ಲಿ ವರ್ಣಿಸಿದ ಕಲಿಗಳನ್ನು ಅನುಸರಿಸಲಿಕ್ಕೆ ಹವಣಿಸುತ್ತಿದ್ದನು. ಭವಾನಿಯಲ್ಲಿ ಅವನಿಗೆ ಬಹಳ ಭಕ್ತಿಯಿತ್ತು. ಕುತ್ತು ಬಂದಾಗ ಭವಾನಿಯು ಅವನ ಕನಸಿನಲ್ಲಿ ಬಂದು ಪಾರಾಗುವ ಹಂಚಿಕೆಯನ್ನು ತೋರಿಸಿಕೊಡುತ್ತಿದ್ದಳೆಂದು ಆಕಾಲದ ಜನರ ತಿಳುವಳಿಕೆ ಇತ್ತು. ರಾಮದಾಸಸ್ವಾಮಿಯೂ ತುಕಾರಾಮನೂ ಅವನ ಗುರುಗಳಾಗಿದ್ದರು.

ಬರಬರುತ್ತ ಶಿವಾಜಿಯು ಅದಿಲ್‌ಶಾಹಿಯ ಕೋಟೆಗಳನ್ನು ಒಂದರ ಹಿಂದೊಂದು ಪುಂಡತನದಿಂದ ತೆಗೆದುಕೊಂಡುದರಿಂದ, ವಿಜಾಪುರದ ಸರಕಾರದವರು ಶಹಾಜಿಗೆ ಒಂದು ಪತ್ರವನ್ನು ಬರೆದರು. ಅದಕ್ಕೆ ಅವನು "ಶಿವಾಜಿಯು ಮನೆಯಿಂದ ಓಡಿಹೋಗಿರುತ್ತಾನೆ. ಅವನು ನನ್ನ ಮಾತು ಕೇಳುವದಿಲ್ಲ, ತಾವೇ ತಮ್ಮ ಮನಸ್ಸಿಗೆ ಬಂದಂತೆ ಅವನನ್ನು ಹಿಡಿದು ದಂಡಿಸಬಹುದು" ಎಂದು ಬದಲುಬರೆದನು. ಆಗ ಅವರು ಶಿವಾಜಿಯನ್ನು ದಂಡಿಸಲಿಕ್ಕೆ ಅಫಜುಲ್‌ಖಾನನೆಂಬ ಸರದಾರನನ್ನು ದೊಡ್ಡ ದಂಡಿನೊಡನೆ ಕಳು

ಹಿದರು. ಆಗ ಶಿವಾಜಿಯು ಮೊದಲು ಅಂಜಿದ ಹಾಗೆ ತೋರಿಸಿ ಕೊಂಡು, ಆಸರದಾರನು ಹೇಳಿದಂತೆ ಕೇಳಲಿಕ್ಕೆ ಒಪ್ಪಿ, ಕಡೆಗೆ ಅವನನ್ನು ಪ್ರತಾಪಗಡದ ಹತ್ತರ ಇರಿದು ಕೊಲ್ಲುವಷ್ಟರಲ್ಲಿ, ಅಫ ಜುಲ್‌ಖಾನನ ದಂಡಿನವರು ಆಗದ್ದಲವನ್ನು ಕೇಳಿ ಅಲ್ಲಿಗೆ ಬಂದು ದರಿಂದ, ಅವನನ್ನು ಅರೆಜೀವ ಮಾಡಿ ಓಡಿಹೋದನು. ಬಳಿಕ ಅದಿಲ್‌ಶಾಹಿ ದಂಡಿನವರು ಅಫಜುಲ್‌ಖಾನನನ್ನು ಪಲ್ಲಕ್ಕಿಯೊಳಗೆ ಹಾಕಿಕೊಂಡು ಹೋಗುವಾಗ, ಶಿವಾಜಿಯು ಅವರನ್ನು ಅಡ್ಡಗಟ್ಟಿ ಪೂರ್ಣವಾಗಿ ಸೋಲಿಸಿ ಓಡಿಸಿ ಬಿಟ್ಟನು. ಬಳಿಕ ಅವನು ಅಫಜು ಲ್‌ಖಾನನು ಒಡೆದುಹಾಕಿದ ಭವಾನಿಯ ಮೂರ್ತಿಯ ಬದಲು ಸಂಗಮರವರಿಕಲ್ಲಿನದೊಂದು ಹೊಸ ಮೂರ್ತಿಯನ್ನು ಮಾಡಿಸಿ ತುಳಜಾಪುರದಲ್ಲಿ ಸ್ಥಾಪಿಸಿದನು.

ಅತ್ತ ಶಿವಾಜಿಯ ಬೆಳೆವಣಿಗೆಯ ಸುದ್ದಿಯು ಅವರಂಗಜೇಬ ಬಾದಶಹನಿಗೆ ತಿಳಿಯಿತು. ಕೂಡಲೆ ಅವನು ಸಾಹಿಸ್ತೈಖಾನನೆಂಬ ಸರದಾರನನ್ನು ದೊಡ್ಡ ದಂಡಿನೊಡನೆ ಶಿವಾಜಿಯ ಮೇಲೆ ಕಳುಹಿದ ನು. ಅವನು ಬಂದು ಪುಣೆಯಲ್ಲಿ ಇಳಿಯಲು, ಒಂದು ದಿನ ರಾತ್ರಿ ಶಿ ವಾಜಿಯು ಕೆಲಜನ ಗೆಳೆಯರೊಡನೆ ಅವನ ಪಾಳಯವನ್ನು ಹೊಕ್ಕು, ಎಷ್ಟೋ ಜನರನ್ನು ಕೊಂದು, ಸಾಹಿಸ್ತೇಖಾನನ ಮೂರು ಬೆರಳು ಗಳನ್ನು ಕೊಯ್ದುಕೊಂಡು ಪಾರಾಗಿ ಹೋದನು. ಆದ್ದರಿಂದ ಸಾ ಹಿಸ್ತೈಖಾನನು ಹೆದರಿ ಮರಳಿ ದಿಲ್ಲಿಗೆ ಹೋದನು. ತರುವಾಯ ಅವರಂಗಜೇಬನು ಜಯವಂತಸಿಂಗನೆಂಬ ರಜಪೂತ ದಳವಾಯಿ ಯ ಸಂಗಡ ಡಿಲೇರಖಾನನೆಂಬ ಸರದಾರನನ್ನು ಕೊಟ್ಟು, ಶಿವಾಜಿ ಯನ್ನು ದಂಡಿಸಲಿಕ್ಕೆ ದೊಡ್ಡ ದಂಡನ್ನು ಕಳುಹಿದನು. ಆಗ ಶಿ ವಾಜಿಯು ಜಯವಂತಸಿಂಗನನ್ನು ಕಂಡು, ಅವನ ಹೇಳಿಕೆಯಂತೆ ದಿಲ್ಲಿಯ ಬಾದಶಹನಿಗೆ ೨೭ ದುರ್ಗಗಳನ್ನು ಕೊಡಲಿಕ್ಕೂ ಬಾದಶ ಹನನ್ನು ಕಾಣಲಿಕ್ಕೆ ದಿಲ್ಲಿಗೆ ಹೋಗಲಿಕ್ಕೂ ಒಡಂಬಟ್ಟನು. ಆದ ಕಾರಣ ಜಯವಂತಸಿಂಗನು ತನ್ನ ಮಗನಾದ ರಾಮಸಿಂಗನೊಡನೆ ಪತ್ರವನ್ನು ಕೊಟ್ಟು, ಶಿವಾಜಿಯನ್ನು ಬಾದಶಹನೆಡೆಗೆ ಕಳುಹಿದನು.

ಅಲಮ್ಗೀರ ಬಾದಶಹನು ಶಿವಾಜಿಯು ಬಂದ ಸುದ್ದಿಯನ್ನು ಕೇಳಿ ಸಂತೋಷಬಟ್ಟು ಅವನಿಗೆ ತಕ್ಕ ಮಾನಪಾನವನ್ನು ಮಾಡಿ, ಅವನು ಇಂತಹ ದಿವಸ ದರಬಾರಕ್ಕೆ ಬರಬೇಕೆಂದು ಗೊತ್ತುಮಾಡಿದನು. ಅದರಂತೆಯೇ ಶಿವಾಜಿಯು ರಾಮಸಿಂಗನೊಡನೆ ದರಬಾರಕ್ಕೆ ಬರಲು, ಆಕಾಲಕ್ಕೆ ಒಬ್ಬ ರಜಪೂತ ಸರದಾರನು ಬಾದಶಹನ ಮುಂದೆ ನಿಂತಿದ್ದನು. ಹೀಗೆ ಬಾದಶಹನಿಗೂ ತನಗೂ ನಡುವೆ ಬೇರೊಬ್ಬ ಸರದಾರನು ನಿಂತದ್ದು ಶಿವಾಜಿಗೆ ಸರಿಬೀಳಲಿಲ್ಲ. ಆದ್ದರಿಂದ ಅವನು ತನ್ನ ಹತ್ತರ ನಿಂತಿರುವ ರಾಮಸಿಂಗನಿಗೆ "ನನ್ನ ಕಠಾರಿಯನ್ನು ತಾ," ಎಂದು ಸಿಟ್ಟಿನಿಂದ ಕೇಳಿದನು. ಈಗದ್ದಲವನ್ನು ಕೇಳಿ ಬಾದಶಹನು ಸಂಶಯಬಟ್ಟು, ಶಿವಾಜಿಯನ್ನು ಅವನ ಬಿಡಾರಕ್ಕೆ ಕರಕೊಂಡು ಹೋಗೆಂದು ರಾಮಸಿಂಗನಿಗೆ ಅಪ್ಪಣೆ ಕೊಟ್ಟನು. ಬಳಿಕ ಶಿವಾಜಿಯು ಬಿಡಾರಕ್ಕೆ ಹೋಗಿ, ಬಹಳ ವಿಚಾರಮಾಡಿ, ಬಾದಶಹನಿಗೆ ಒಂದು ಪತ್ರವನ್ನು ಕಳುಹಿದನು. ಅದನ್ನು ನೋಡಿ ಬಾದಶಹನು ಹೆಚ್ಚು ಸಂಶಯಬಟ್ಟು ಶಿವಾಜಿಗೆ "ತುಸು ತಡೆ, ನೀನು ಹೇಳಿದಂತೆಯೇ ಮಾಡುವೆನು" ಎಂದು ಉತ್ತರಕಳುಹಿ, ಅವನಿದ್ದ ಅರಮನೆಯ ಸುತ್ತಲು ಅಯ್ದು ಸಾವಿರ ದಂಡಾಳುಗಳನ್ನು ಕಾವಲಿಟ್ಟನು. ಅದನ್ನು ನೋಡಿ ಶಿವಾಜಿಯು ಹೆದರಿದನು. ಆದರೂ ಅವನು ತಂತ್ರಗಾರನಾದ್ದರಿಂದ ಈಬಿಕ್ಕಟ್ಟಿನೊಳಗಿಂದ ಪಾರಾಗುವ ಹಂಚಿಕೆಯನ್ನು ತೆಗೆದನು. ಅದು ಹೇಗಂದರೆ, ಅವನು ದಿನಾಲು ಮಿಠಾಯಿಯನ್ನೂ ಹಣ್ಣು ಹಂಪಲಗಳನ್ನೂ ತರಿಸಿ ಬಿದರಿನ ಹತ್ತು ದೊಡ್ಡ ಬುಟ್ಟಿಗಳನ್ನು ತುಂಬಿಸಿ, ಒಂದೊಂದು ಬುಟ್ಟಿಯನ್ನು ಎರಡೆರಡು ಆಳುಗಳ ಮೇಲೆ ಹೊರಿಸಿ, ಬೇರೆ ಬೇರೆ ಪ್ರಧಾನರ ಮನೆಗಳಿಗೆ ಕಳುಹಿಸಲಾರಂಭಿಸಿದನು. ಕಾವಲುಗಾರರು ಆಬುಟ್ಟಿಗಳನ್ನು ನೋಡಿ, ಅವುಗಳಲ್ಲಿ ಮಿಠಾಯಿಯ ಹೊರತು ಬೇರೆ ಏನೂ ಇಲ್ಲದ್ದನ್ನು ಮನಗಂಡು ಆಳುಗಳನ್ನು ಹೋಗಗೊಡಲಾರಂಭಿಸಿದರು. ಇದೇ ಮೇರೆಗೆ ಮೂರು ನಾಲ್ಕು ದಿವಸ ನಡೆದ ಬಳಿಕ ಕಾವಲುಗಾರರು ಬುಟ್ಟಿಗಳಲ್ಲಿ ಮಿಠಾಯಿಯ ಹೊರತು ಬೇರೆ

ಏನೂ ಇರುವದಿಲ್ಲೆಂಬದನ್ನು ಮನಗಂಡು, ಮುಂದೆ ಆಬುಟ್ಟಿಗಳ ಕಡೆಗೆ ಲಕ್ಷ್ಯಗೊಡದೆ ಅವುಗಳನ್ನು ಹಾಗೇ ಹೊರಗೆ ಬಿಡಹತ್ತಿದರು. ಹೀಗಾದ ಬಳಿಕ ಶಿವಾಜಿಯು ಒಬ್ಬೊಬ್ಬ ಕಾರಕೂನನನ್ನು ಒಂದೊಂದು ಬುಟ್ಟಿಯಲ್ಲಿ ಕುಳ್ಳಿರಿಸಿ, ತನ್ನ ಸಂಗಡಿಗರನ್ನೆಲ್ಲ ಮುಂದೆ ಕಳುಹಿ, ತರುವಾಯ ಒಂದು ದಿನ ತನ್ನ ಉಡಿಗೆತೊಡಿಗೆಗಳನ್ನು **ಹೈರೋಜಿ ಫರ್ಜನ್** ಎಂಬ ತನ್ನ ಆಳಿಗೆ ಹಾಕಿ, ಅವನನ್ನು ತನ್ನ ಮಂಚದ ಮೇಲೆ ಮಲಗಿಸಿ, ತಾನೊಂದು ಬುಟ್ಟಿಯಲ್ಲಿಯೂ ತನ್ನ ಮಗನು ಮತ್ತೊಂದು ಬುಟ್ಟಿಯಲ್ಲಿಯೂ ಕುಳಿತು, ಮೊದಲು ಗೊತ್ತಾದಂತೆ ದಿಲ್ಲಿಯಿಂದ ೭ ಮೈಲು ದೂರ ಇರುವ ತನ್ನ ಕಾರಕೂನರಿದ್ದ ಹಳ್ಳಿಗೆ ಹೋಗಿ, ಅಲ್ಲಿಂದ ಎಲ್ಲ ಜನರನ್ನು ಕರಕೊಂಡು ವಾರಣಾಸಿಗೆ ಹೋದನು.

ಇತ್ತ ಮರುದಿವಸ ದಿಲ್ಲಿಯಲ್ಲಿ ಕಾವಲುಗಾರರು ಅರಮನೆಯಲ್ಲಿ ಮನುಷ್ಯರ ಸದ್ದು ಇಲ್ಲದ್ದನ್ನು ಕಂಡು ಹೆದರಿ, ಮನೆಯೆಲ್ಲ ಹುಡುಕಲು, ಒಬ್ಬರೂ ಕಾಣಲಿಲ್ಲ. ಈಸುದ್ದಿಯನ್ನು ಬಾದಶಹನಿಗೆ ತಿಳಿಸಲು, ಅವನು ಕನಲ್ದು ಶಿವಾಜಿಯನ್ನು ಹಿಡಿಯಲಿಕ್ಕೆ ತನ್ನ ದಂಡಿನವರನ್ನು ಬೇರೆ ಬೇರೆ ದಿಕ್ಕಿಗೆ ಕಳುಹಿದ್ದಲ್ಲದೆ, ಶಿವಾಜಿಯು ಮೋಸದಿಂದ ತನ್ನನ್ನು ಕೊಂದಾನೆಂಬ ಭಯದಿಂದ ತಾನು ಮಲಗುವ ಕೋಣೆಯ ಸುತ್ತುಮುತ್ತು ಕಾವಲಿಡಿಸಿದನು. ಈಮೇರೆಗೆ ಶಿವಾಜಿಯು ತನ್ನ ತಂತ್ರದಿಂದ ಅವರಂಗಜೇಬನನ್ನು ದಿಗಿಲುಗೊಳಿಸಿದನು.

ಬಳಿಕ ಶಿವಾಜಿಯು ಕಾಶೀಯಾತ್ರೆಯನ್ನು ಮಾಡಿ, ಮರಳಿ ತನ್ನ ಸ್ಥಳಕ್ಕೆ ಹೋಗಿ, **ತಾನಾಜಿಮಾಲುಸರೆ**ಯೆಂಬ ಸರದಾರನನ್ನು ದಂಡಿನೊಡನೆ ಕಳುಹಿ, **ಕೊಂಢಾನೆ**ಯೆಂಬ ಕೋಟೆಯನ್ನು ತೆಗೆದುಕೊಂಡನು. ಆದರೆ ಈಪ್ರಯತ್ನದಲ್ಲಿ ತಾನಾಜಿಯು ಸತ್ತುದರಿಂದ ಅವನಿಗೆ ಬಹಳ ದುಃಖವಾಯಿತು. ಬಳಿಕ ಅವನು **ಪನ್ಹಾಳ** ಮುಂತಾದ ೨೭ ಕೋಟೆಗಳನ್ನು ಹಿಡಿದುಕೊಂಡನು. ಇದನ್ನು ಕೇಳಿ ಅವರಂಗಜೇಬನು ಬಹಳ ಉಮ್ಮಳಿಸಿ, ತನ್ನ ಮಗನಾದ **ಶಹಾ ಅ**

ಲಮ್‌ನನ್ನು ಕುರಿತು "ಶಕ್ತಿಯಿಂದ ಶಿವಾಜಿಯನ್ನು ಹಿಡಿಯುವದು ನಮ್ಮಿಂದಾಗಲಿಲ್ಲ; ಆದ್ದರಿಂದ ಇನ್ನು ಯುಕ್ತಿಯಿಂದ ಅವನನ್ನು ಹಿಡಿಯೋಣ; ನೀನು ಹೋಗಿ, ಅವನೊಡನೆ ಸ್ನೇಹಬೆಳಿಸಿ, ಅವನ ದಂಡಿನವರಿಗೆ ಲಂಚಕೊಟ್ಟು ನಮ್ಮ ಕಡೆಗೆ ಅವರನ್ನು ಎಳೆದುಕೋ" ಎಂದು ಹೇಳಿ, ಅವನನ್ನು ಶಿವಾಜಿಯ ಬಳಿಗೆ ಕಳುಹಿದನು. ಅವರಂಗಜೇಬನ ಈಪ್ರಯತ್ನವಾದರೂ ಮುಂದೆ ನಿಷ್ಫಲವಾಯಿತು.

ಬಳಿಕ ಶಿವಾಜಿಯು ಮೊಗಲರ ವಶದಲ್ಲಿದ್ದ ಊರುಗಳನ್ನು ಸುಲಿದು ಸೂರೆ ಮಾಡಲಾರಂಭಿಸಿದನು. ಅವನು ಸಂಪತ್ತಿಯುಳ್ಳ ಸುರತ ಪಟ್ಟಣವನ್ನು ಸುಲಿದನೆಂಬ ಸುದ್ದಿಯನ್ನು ಕೇಳಿ, ಮೊಹಬತ್ಖಾನನೆಂಬ ಮೊಗಲರ ಸರದಾರನು ೧೦,೦೦೦ ರಾಹುತರೊಡನೆ ಅವನನ್ನು ಬೆನ್ನಟ್ಟಿದನು; ಖಡಾಸೆಯೆಂಬಲ್ಲಿ ಮೊಗಲರು ಸೋತರು.*

ಬಳಿಕ ಶಿವಾಜಿಯು ರಾಜಾಪುರದಲ್ಲಿದ್ದ ಸಿದ್ದೀಜನರನ್ನೂ ಕುಡಾಲಪ್ರಾಂತದ ದೇಸಾಯಿಯಾದ ಲಕ್ಷ್ಮಣಸಾವಂತನನ್ನೂ ವಿಜಾಪುರದ ಸರಕಾರದಿಂದ ಬಂದ ಖವಾಸಖಾನನೆಂಬ ಸರದಾರನನ್ನೂ ಸೋಲಿಸಿ, ಗೋಕರ್ಣದ ವರೆಗೆ ಪಶ್ಚಿಮಸಮುದ್ರದ ದಂಡೆಯ ಪ್ರಾಂತವನ್ನು ತನ್ನ ಕಯ್ವಶ ಮಾಡಿಕೊಂಡನು. ಆಮೇಲೆ ಅವನು ಬಿದನೂರಪ್ರಾಂತವನ್ನು ಸುಲಿದನು; ಈಸುಲಿಗೆಯಲ್ಲಿ ಅವನಿಗೆ ಎರಡುಕೋಟಿ ಹೊನ್ನುಗಳು ದೊರೆದವು.

ಮುಂದೆ ಶಿವಾಜಿಯು ಅದಿಲ್‌ಶಾಹಿ ಸರಕಾರಕ್ಕೆ ಸೇರಿದ ರಾಯಗಡವನ್ನು ತೆಗೆದುಕೊಂಡು, ಅದನ್ನು ತನ್ನ ರಾಜಧಾನಿಯನ್ನು ಮಾಡಿಕೊಂಡನು. ಇದೇ ಕಾಲಕ್ಕೆ ಗಾಗಾಭಟ್ಟನೆಂಬೊಬ್ಬ ಪಂಡಿತನು ಕಾಶಿಯಿಂದ ಬಂದು, ಶಿವಾಜಿಯನ್ನು ಸ್ತುತಿಸಿ, ಅವನಿಗೆ

---

* ಸುರತದ ಸುಲಿಗೆಯಲ್ಲಿ ಶಿವಾಜಿಗೆ ಅಯ್ದುಕೋಟಿ ಹೊನ್ನುಗಳೂ ನಾಲ್ಕು ಸಾವಿರ ಕುದುರೆಗಳೂ ದೊರೆದವು. ಇದೇ ಕಾಲಕ್ಕೆ ಶಹಾಜಿಯು ಚಿತ್ರಗಲ್‌ದುರ್ಗದ ಬಳಿಯಲ್ಲಿರುವ ಬೋದಗಿರಿಯ ಹತ್ತರ ಕುದುರೆಯ ಮೇಲಿಂದ ಬಿದ್ದು ಮಡಿದನು.

ರಾಜ್ಯಾಭಿಷೇಕ ಮಾಡಿಕೊಳ್ಳಲಿಕ್ಕೆ ಸೂಚಿಸಿದನು. ಆಮೇಲೆ ಕೆಲವು ಪಂಡಿತರು ಕೂಡಿ ಶಿವಾಜಿಯು ಸಿಸೋದಿಯ ಕುಲದ ಕ್ಷತ್ರಿಯ ವಂಶದವನೆಂದು ನಿರ್ಣಯಿಸಿ, ಅವನಿಗೆ ಜನಿವಾರವನ್ನು ಹಾಕಿಸಿ, ಶಾಲಿವಾಹನಶಕ ೧೫೯೬, ಆನಂದನಾಮ ಸಂವತ್ಸರ ಜ್ಯೇಷ್ಠ ಶುದ್ಧ ತ್ರಯೋದಶೀ ದಿವಸ ರಾಯಗಡದಲ್ಲಿ ಪಟ್ಟಾಭಿಷೇಕಮಾಡಿದರು. ಈಸಮಾರಂಭದಲ್ಲಿ ಶಿವಾಜಿಯು ಒಂದುಕೋಟಿ ನಾಲ್ವತ್ತೆರಡು ಸಾವಿರ ಹೊನ್ನುಗಳನ್ನು ದಾನಮಾಡಿದನಂತೆ.

ಬಳಿಕ ಶಿವಾಜಿಯು ಬೆಂಗಳೂರ ಕೋಟೆಯನ್ನು ತೆಗೆದುಕೊಂಡು, ತನ್ನ ಮಲತಮ್ಮನಾದ ವೆಂಕೋಜಿಯ ಕೂಡ ಒಪ್ಪಂದ ಮಾಡಿ, ಮರಳಿ ರಾಯಗಡಕ್ಕೆ ಬಂದನು.

ಇದೇ ಕಾಲಕ್ಕೆ ಸಂಭಾಜಿಯು ಶಿವಾಜಿಯ ಕೂಡ ಜಗಳಾಡಿ, ಜಾವಡೆಯೆಂಬಲ್ಲಿ ಇರುತ್ತಿದ್ದ ಮೊಗಲರ ಸರದಾರನಾದ ದಿಲೇರಖಾನನ ಹತ್ತರ ಹೋಗಿ, ನಿಂತುಕೊಂಡನು. ಈಖಾನನು ಸಂಭಾಜಿಯನ್ನು ತನ್ನ ಹತ್ತರ ಪ್ರೀತಿಯಿಂದ ಇಟ್ಟುಕೊಂಡಿದ್ದರೆ, ಅವರಂಗಜೇಬನಿಗೆ ಹಿತವಾಗುವಂತಿತ್ತು. ಆದರೆ ಅವರಂಗಜೇಬನು ಉಲಕೋಚಿತನದಿಂದ ಸಂಭಾಜಿಯನ್ನು ಸೆರೆಹಿಡಿದು ಕಳುಹಬೇಕೆಂದು ದಿಲೇರಖಾನನಿಗೆ ಪತ್ರಬರೆದು ಕಳುಹಿದ್ದರಿಂದ, ಅವನ ಉದ್ದೇಶವು ಕೊನೆಗಾಣಲಿಲ್ಲ. ದಿಲೇರಖಾನನು ಈಸುದ್ದಿಯನ್ನು ಸಂಭಾಜಿಗೆ ತಿಳಿಸಿ, ಅವನನ್ನು ಶಿವಾಜಿಯ ಬಳಿಗೆ ಕಳುಹಿ, ಬಾದಶಹನಿಗೆ ಸಂಭಾಜಿಯು ತನ್ನ ಪಾಳಯದಿಂದ ಓಡಿಹೋದನೆಂದು ಬರೆದು ತಿಳಿಸಿದನು.

ಸಂಭಾಜಿಯು ತಿರುಗಿ ಬಂದುದನ್ನು ನೋಡಿ ಶಿವಾಜಿಗೆ ಬಹಳ ಸಂತೋಷವಾಯಿತು. ಅವನು ಸಂಭಾಜಿಗೆ ಹೇಳಿದ್ದೇನಂದರೆ "ನನಗೆ ಗೋದಾವರಿಯಿಂದ ತುಂಗಭದ್ರೆಯ ವರೆಗೆ ಒಂದು, ತುಂಗಭದ್ರೆಯಿಂದ ಕಾವೇರಿಯ ವರೆಗೆ ಮತ್ತೊಂದು, ಹೀಗೆ ಎರಡು ರಾಜ್ಯಗಳಿರುತ್ತವೆ, ನೀನು ಹಿರಿಯ ಮಗನಾದ್ದರಿಂದ ನಿನಗೆ ಕರ್ನಾಟಕವನ್ನು ಕೊಡುತ್ತೇನೆ. ಉಳಿದುದನ್ನು ನಿನ್ನ ತಮ್ಮನಾದ ರಾಜಾ

ರಾಮನಿಗೆ ಕೊಡುತ್ತೇನೆ. ನೀವಿಬ್ಬರೂ ಚೆನ್ನಾಗಿ ರಾಜ್ಯವನ್ನಾಳಿಕೊಂಡು ಒಬ್ಬರಿಗೊಬ್ಬರು ಅನುಕೂಲರಾಗಿ ಸುಖದಿಂದ ಇರ್ರಿ; ನೀನು ದುರ್ವ್ಯಸನಗಳನ್ನು ಬಿಟ್ಟು ಒಳ್ಳೆಯ ನಡತೆಯವನಾಗಿ ರಾಜ್ಯವನ್ನಾಳಿದರೆ ನಿನಗೆ ಕ್ಷೇಮವಾಗುವದು". ಆದರೆ ಈಯುಪದೇಶವು ಸಂಭಾಜಿಯ ಮನಸ್ಸಿನಲ್ಲಿ ನಡಲಿಲ್ಲ, ಮತ್ತು ಅವನು ತನ್ನ ನಡತೆಯನ್ನು ತಿದ್ದಿಕೊಳ್ಳಲಿಲ್ಲ; ಆದ್ದರಿಂದ ಶಿವಾಜಿಯು ಮತ್ತೆ ಅವನನ್ನು ಸೆರೆಯಲ್ಲಿರಿಸಿದನು.

ಮುಂದೆ ಶಿವಾಜಿಯು ಬಹಳ ದಿವಸ ಬಾಳಲಿಲ್ಲ. ಅವನ ಕಾಲಿಗೆಯೊಂದು ಮಂಡೆಯಾಗಿ ಅದೇ ಬೇನೆಯಿಂದ ಅವನು ೧೬೮೦ರಲ್ಲಿ ರಾಯಗಡದಲ್ಲಿ ಪ್ರಾಣಬಿಟ್ಟನು.

ಶಿವಾಜಿಯು ಕಡುಗಲಿಯಾಗಿದ್ದನು. ಅವನ ಶೌರ್ಯಧೈರ್ಯಸಾಹಸಗಳು ಬಣ್ಣಿಸತಕ್ಕಂತಹವುಗಳೇ ಸರಿ. ಅವನು ಚಿಕ್ಕಂದಿನಲ್ಲಿ ಓದುಬರಹ ಕಲಿಯಲಿಲ್ಲ, ಮುಂದೆ ಅವನಿಗೆ ರುಜುಮಾಡಲಿಕ್ಕೆ ಕೂಡ ಬರುತ್ತಿದ್ದಿಲ್ಲ. ಅವನು ಬಾಲ್ಯದಲ್ಲಿ ಗುರಿಹೊಡೆಯಲಿಕ್ಕೂ ಕತ್ತಿತಿರವಲಿಕ್ಕೂ ಕಲಿತು, ತನ್ನ ಗೆಳೆಯರೊಡನೆ ಪುಂಡಾಟವನ್ನು ನಡಿಸಿದನು. ಅವನು ಚಿಕ್ಕವನಿರುವಾಗ ಅವನ ಗುರುವಾದ ದಾದೋಜಿಕೊಂಡದೇವನೂ ಅವನ ಧರ್ಮಗುರುವಾದ ರಾಮದಾಸಸ್ವಾಮಿಯವರೂ ಅವನಿಗೆ ರಾಮಾಯಣಭಾರತಭಾಗವತಗಳ ಕಥೆಗಳನ್ನು ವಿಸ್ತರಿಸಿ ಹೇಳಿ, ಪೌರಾಣಿಕ ಕಲಿಗಳ ಅನುಕರಣ ಮಾಡಬೇಕೆಂಬ ಇಚ್ಛೆಯನ್ನು ಅವನ ಮನಸ್ಸಿನಲ್ಲಿ ಹುಟ್ಟಿಸಿದ್ದರು. ಈಕಾರಣದಿಂದಲೂ ಆಕಾಲಕ್ಕೆ ಮುಸಲ್ಮಾನರು ಧರ್ಮದುರಭಿಮಾನದಿಂದ ಹಿಂದೂಜನರನ್ನು ಹಿಂಸೆಪಡಿಸಲಾರಂಭಿಸಿದ್ದರಿಂದಲೂ ಕಲಿಯಾದ ಶಿವಾಜಿಯ ಮನಸ್ಸಿನಲ್ಲಿ ಧರ್ಮಾಭಿಮಾನವೂ ದೇಶಾಭಿಮಾನವೂ ಹೆಚ್ಚಿದವು. ಆದ್ದರಿಂದ ಅವನು ವಿಶ್ವಪ್ರಯತ್ನಮಾಡಿ ಮುಸಲ್ಮಾನರನ್ನು ಮುರಿಬಡಿದು ಹಿಂದೂರಾಜ್ಯವನ್ನು ಸ್ಥಾಪಿಸಬೇಕೆಂದು ಹವಣಿಸಲಾರಂಭಿಸಿದನು.

ಶಿವಾಜಿಯು ಶೂರನೂ ಸಾಹಸಿಯೂ ಆಗಿದ್ದಂತೆ ಹಂಚಿಕೆ ಗಾರನಾದರೂ ಆಗಿದ್ದನು. ಅವನ ಪ್ರಸಂಗಾವಧಾನವನ್ನು ಎಷ್ಟು ಹೊಗಳಿದರೂ ತೀರದು. ಅಪಜುಲ್‌ಖಾನನು ದಂಡೆತ್ತಿಬಂದಾ ಗಲೂ ಅವರಂಗಜೇಬನು ಮೋಸದಿಂದ ಸೆರೆಯಲ್ಲಿಟ್ಟಾಗಲೂ ಅವನು ಮಾಡಿದ ಹಂಚಿಕೆಗಳು ಸಾಮಾನ್ಯವೇ? ಈತರದ ಪ್ರಸಂ ಗಗಳಲ್ಲಿ ಸಾಮಾನ್ಯ ಮನುಷ್ಯರು ಪಾರಾಗುವುದು ಅಸಂಭವವೇ ಸರಿ. ಆದರೆ ಶಿವಾಜಿಯು ಅಸಾಧಾರಣಮನುಷ್ಯನಾದ್ದರಿಂದ ಇಂತಹ ಬಿಕ್ಕಟ್ಟುಗಳಲ್ಲಿ ಪಾರಾದನು. ಅವನಿಗೆ ತುಳಜಾಪುರದ ಭವಾನಿಯಲ್ಲಿ ಪೂರ್ಣವಿಶ್ವಾಸವಿತ್ತು. ಆದ್ದರಿಂದ ಭವಾನಿಯು ಅವನ ಕನಸಿನಲ್ಲಿ ಬಂದು ಆಗಿಂದಾಗ ತರತರದ ಹಂಚಿಕೆಗಳನ್ನು ಹೇಳಿಕೊಡುತ್ತಿದ್ದಳೆಂಬ ತಿಳುವಳಿಕೆಯು ಆಕಾಲದ ಜನರಲ್ಲಿ ಹಬ್ಬಿತ್ತು.

ಶಿವಾಜಿಯು ಅಪಜುಲ್‌ಖಾನನನ್ನು ಕೊಂದ ಬಗ್ಗೆ ಕೆಲ ಇಂ ಗ್ಲಿಷ ಗ್ರಂಥಕರ್ತರು ಅವನನ್ನು ಮೋಸಗಾರನೆಂದು ಹಳೆಯು ತ್ತಾರಷ್ಟೇ. ಆದರೆ ಈಯಭಿಪ್ರಾಯವು ಸರಿಯಾದ್ದಲ್ಲೆಂದು ನಮಗೆ ತೋರುತ್ತದೆ. ಅಪಜುಲ್‌ಖಾನನು ಶಿವಾಜಿಯನ್ನು ಮೋಸದಿಂದ ಸೆರೆಹಿಡಿಯಲಿಕ್ಕೆ ಬಯಸಿದನೆಂಬ ಮಾತು ನಿಜವಿದ್ದರೆ, ಶಿವಾಜಿ ಯು ಅವನನ್ನು ಮೋಸದಿಂದ ಕೊಂದುದು ತಕ್ಕ ಕೆಲಸವೇ ಸರಿ. ಕಳ್ಳನು ಮನೆಯನ್ನು ಹೊಕ್ಕಾಗ ಅವನನ್ನು ಮೋಸ ದಿಂದ ಹಿಡಿದರೆ ಅಥವಾ ಹೊಡೆದರೆ ದೋಷ ಬರಬಹುದೋ? ಎಂದೂ ಇಲ್ಲ. ಆದ್ದರಿಂದ ಕಲಿಗಳು ಮಾಡಿದ ಈತರದಕೃತ್ಯ ಗಳಿಗೆ ಮೋಸವೆಂಬ ದುಷ್ಟಶಬ್ದವನ್ನು ಉಪಯೋಗಿಸದೆ ರಾಜ ತಂತ್ರವೆಂಬ ಯಥಾರ್ಥಶಬ್ದವನ್ನು ಉಪಯೋಗಿಸುವದು ಗ್ರಂಥ ಕರ್ತರ ಕರ್ತವ್ಯವಾಗಿರುತ್ತದೆ.

---

## ೨. ಬಾಳಾಜಿವಿಶ್ವನಾಥಭಟ್ಟ.

ಕೊಂಕಣದಲ್ಲಿ ಶ್ರೀವರ್ಧನವೆಂಬ* ಊರು ಇರುತ್ತದಷ್ಟೇ. ಅದು ೧೬, ೧೭ನೆಯ ಶತಮಾನಗಳಲ್ಲಿ ನಿಜಾಮಶಾಹಿ, ಆದಿಲ್ ಶಾಹಿ ರಾಜ್ಯಗಳಿಗೆ ಸೇರಿತ್ತು, ಮತ್ತು ಮುಂದೆ ೧೮ನೆಯ ಶತಕದ ಆರಂಭದಲ್ಲಿ ಹಬಸಿಯರ ಕಯ್ಸೇರಿತು. ಈಗಾದರೂ ಅದು **ಜಿಂಜೀರೆಯ** ಸಿದ್ದಿಜಾತಿಯ ನವಾಬನ ಕಯ್ಕೆಳಗಿರುತ್ತದೆ.

ಈಗ ೨೦೦ ವರ್ಷಗಳ ಹಿಂದೆ ಇದೇ ಊರ ದೇಶಮುಖಿಯ ಅಧಿಕಾರವನ್ನು ವಿಶ್ವನಾಥಭಟ್ಟನೆಂಬ ಕೊಂಕಣಸ್ಥಬ್ರಾಹ್ಮಣನೊಬ್ಬನು ನೋಡುತ್ತಿದ್ದನು. ಇವನಿಗೆ **ಬಾಳಾಜಿ,**† **ಜಾನೋಜಿಯೆಂ**ಬಿಬ್ಬರು ಗಂಡುಮಕ್ಕಳಿದ್ದರು. ಮೇಲೆ ಹೇಳಿದಂತೆ ಹಬಸಿಯರು ಈಯೂರನ್ನು ಹಿಡಿದುಕೊಂಡಾಗ, ಅವರು ಜಾನೋಜಿಯನ್ನು ಸೆರೆ ಹಿಡಿದು, ಒಂದು ಗೋಣಿತಟ್ಟಿನ ಚೀಲದಲ್ಲಿ ಹಾಕಿ, ಸಮುದ್ರದಲ್ಲಿ ಮುಳುಗಿಸಿ ಕೊಂದುಬಿಟ್ಟರು. ಬಾಳಾಜಿಯು ದೈವಯೋಗದಿಂದ ಅವರಿಂದ ತಪ್ಪಿಸಿಕೊಂಡು ವೇಳಾಸವೆಂಬೂರಿಗೆ‡ ಓಡಿಹೋದನು. ಅಲ್ಲಿ **ಬಾಳಾಜಿ ಮಹಾದೇವ ಭಾನು** ಎಂಬ ಅವನ ಗೆಳೆಯನು ಇದ್ದನು.§ ವೇಳಾಸಕ್ಕೆ ಹಬಸಿಯರು ದಂಡೆತ್ತಿ ಬರು

---

* ಇದು ರತ್ನಾಗಿರಿ ಜಿಲ್ಲೆಯಲ್ಲಿ ಬಾಣಕೋಟದ ಒತ್ತಿನ ಮೇಲೆ ಇರುತ್ತದೆ.

† ಆಂಗ್ರಿಯನಿಗೂ ಹಬಸಿಯವರಿಗೂ ಯುದ್ಧವಾರಂಭವಾಗಲು ಜಾನೋಜಿಯು ಆಂಗ್ರಿಯನ ಪಕ್ಷಹಿಡಿದು ಒಳಸಂಚುಮಾಡದೊಡಗಿ ಹಬಸಿಯರ ದ್ವೇಷಕ್ಕೆ ಪಾತ್ರನಾದನು.

‡ ಇದು ಸಾವಿತ್ರೀ ನದಿಯ ದಂಡೆಯ (ದಡದ) ಮೇಲಿದೆ.

§ ಬಾಳಾಜಿವಿಶ್ವನಾಥನು ಅಂಜನವೇಲಕ್ಕೆ ಹೋಗಲು ಅಲ್ಲಿಯ ಕಿಲ್ಲೆದಾರನು ಅವನನ್ನು ಸೆರೆಯಲ್ಲಿಟ್ಟನು. ಆಗ ಬಾಳಾಜಿ ಮಹಾದೇವ ಭಾನುವು ವಿಶ್ವಪ್ರಯತ್ನ ಮಾಡಿ, ಕಿಲ್ಲೆದಾರನಿಗೆ ಲಂಚಕೊಟ್ಟು ಅವನನ್ನು ಬಿಡಿಸಿದನು. ಆಗ ಬಾಳಾಜಿ ವಿಶ್ವನಾಥನು ಮುಂದೆ ತನಗೆ ದೊರೆದ ಒಂದು ರೊಟ್ಟಿಯಲ್ಲಿ ಅರ್ಧ ರೊಟ್ಟಿಯನ್ನು ಅವನಿಗೆ ಕೊಡುವೆನೆಂದು ಮಾತುಕೊಟ್ಟನು. ಮುಂದೆ ಕೊಟ್ಟ ನಾನಾಫಡನವೀಸನ ಚರಿತ್ರ ನೋಡಿರಿ.

ವರೆಂಬ ಸುದ್ದಿ ಬಂದುದರಿಂದ ಬಾಳಾಜಿವಿಶ್ವನಾಥನೂ ಬಾಳಾಜಿ ಮಹಾದೇವನೂ ಅವನ ಇಬ್ಬರು ತಮ್ಮಂದಿರೂ* ಕೂಡಿ ಸಾತಾರೆ ಯರಸನ ದಂಡಿನಲ್ಲಿ ದೊಡ್ಡ ಅಧಿಕಾರಿಯಾದ ಧನಾಜಿಜಾಧವ ರಾಯನ ಆಶ್ರಯಕ್ಕೆ ಹೋಗಿ ನಿಂತರು.

ಈಕಾಲಕ್ಕೆ ಸಾತಾರೆಯಲ್ಲಿ ರಾಜಾರಾಮಮಹಾರಾಜನ ಹೆಂಡತಿಯಾದ ತಾರಾಬಾಯಿಯು ಆಳುತ್ತಿದ್ದಳು. ಅವರಂಗಜೇಬನು ಮೃತನಾದುದರಿಂದ ಬಿಡುಗಡೆಮಾಡಲ್ಪಟ್ಟ ಶಾಹುಮಹಾರಾಜನು ತನ್ನ ರಾಜ್ಯವನ್ನು ತೆಗೆದುಕೊಳ್ಳಲಿಕ್ಕೆ ತಿರುಗಿ ಬರುತ್ತಾನೆಂಬ ಸುದ್ದಿಯನ್ನು ಕೇಳಿ, ತನ್ನ ಗಂಡನಾದ ರಾಜಾರಾಮನು ಶ್ರಮಬಟ್ಟು ಮೊಗಲರಿಂದ ಕಾಪಾಡಿದ ರಾಜ್ಯವನ್ನು ತನ್ನ ಮಗನೇ ಆಳಬೇಕೆಂಬುದ್ದೇಶದಿಂದ ಆವೀರವನಿತೆಯು ಎಲ್ಲ ಪ್ರಧಾನರನ್ನು ಕರಿಸಿ, ಅವರಿಂದ ಆಣೆಮಾಡಿಸಿಕೊಂಡು, ಧನಾಜಿಜಾಧವರಾಯನನ್ನೂ ಖಂಡೋಜಿ ಬಲ್ಲಾಳನನ್ನೂ ದೊಡ್ಡ ದಂಡಿನೊಡನೆ ಶಾಹುರಾಜನಿಗಿದುರಾಗಲಿಕ್ಕೆ ಖಾನದೇಶಕ್ಕೆ ಕಳುಹಿದಳು. ಆದರೆ ಶಾಹುಮಹಾರಾಜನು ಧನಾಜಿಯೊಡನೆ ಬಂದಿದ್ದ ಬಾಳಾಜಿ ವಿಶ್ವನಾಥನ ವಿದ್ಯಮಾನ ಮಾತುಕಥೆ ನಡಿಸಿ, ಧನಾಜಿಯನ್ನು ಒಡಕೊಂಡು, ಅವನೊಡನೆ ಸಾತಾರೆಯ ಹಾದಿಯನ್ನು ಹಿಡಿದುದರಿಂದ ತಾರಾಬಾಯಿಯು ತನ್ನ ನಂಬಿಗೆಯ ಅಧಿಕಾರಿಗಳಾದ ರಾಮಚಂದ್ರಪಂತ ಮುಂತಾದವರೊಡನೆ ಕೊಲ್ಹಾಪುರಕ್ಕೆ ಓಡಿ ಹೋದಳು. ಆದ್ದರಿಂದ ಶಾಹುಮಹಾರಾಜನು ಅನಾಯಾಸವಾಗಿ ಸಾತಾರೆಯನ್ನು ತೆಗೆದುಕೊಂಡು, ಅಲ್ಲಿ ಪಟ್ಟಾಭಿಷಿಕ್ತನಾದನು (ಮಾರ್ಚ ೧೭೦೮).

ಧನಾಜಿಜಾಧವನು ಮೊದಲಿನಂತೇ ಮುಖ್ಯಸೇನಾಪತಿಯಾಗಿ ತಾರಾಬಾಯಿಯ ಪಕ್ಷದ ದಂಡಿಗಿದುರಾಗಲಿಕ್ಕೆ ಕೊಲ್ಹಾಪುರಕ್ಕೆ ಹೋದನು. ಆಗ ಅವನ ರಾಯಸದವನಾದ ಬಾಳಾಜಿಯು ಅವ

* ರಾಮಾಜಿ ಹರಿ ಎಂಬವರಿಬ್ಬರು ಬಾಳಾಜಿ ಮಹಾದೇವ ಭಾನುವಿನ ತಮ್ಮಂದಿರು.

ನೊಲುಮೆಯನ್ನೂ ಶಾಹುಮಹಾರಾಜನೊಲುಮೆಯನ್ನೂ ಬಹು ಶ್ರಮದಿಂದ ಸಂಪಾದಿಸಿದ್ದನು. ಅದನ್ನು ನೋಡಿ, ಹೊಟ್ಟೆಕಿಚ್ಚಿನಿಂದಲೋ ಮತ್ತೆಯಾವ ಕಾರಣದಿಂದಲೋ ಧನಾಜಿಯ ಮಗನಾದ ಚಂದ್ರಸೇನನು ಬಾಳಾಜಿಯ ದ್ವೇಷಮಾಡ ತೊಡಗಿದ್ದನು. ಅಷ್ಟರಲ್ಲಿ ಧನಾಜಿಯು ಕೊಲ್ಹಾಪುರದಿಂದ ತಿರುಗಿ ಬರುವಾಗ ದಾರಿಯಲ್ಲಿ ಸತ್ತುದರಿಂದ ಅವನ ತರುವಾಯ ಅವನ ಮಗನಾದ ಚಂದ್ರಸೇನನು ಮುಖ್ಯಸೇನಾನಾಯಕನಾದನು (೧೭೦೯).

ಮರುವರ್ಷ ಶಾಹುಮಹಾರಾಜನು ಮೊಗಲಾಯಿಯಲ್ಲಿ ಚೌಥಾಯಿಸರದೇಶಮುಖಿಯ ಹಕ್ಕನ್ನು ಸಂಪಾದಿಸಲಿಕ್ಕೆ ಚಂದ್ರಸೇನಜಾಧವನನ್ನೂ ಅಲ್ಲಿ ತನಗೆ ಬರತಕ್ಕ ಹಣವನ್ನೆತ್ತಲಿಕ್ಕೆ ಅವನ ಹಗೆಯಾದ ಬಾಳಾಜಿವಿಶ್ವನಾಥನನ್ನೂ ಕಳುಹಿದನು. ಒಂದು ದಿನ ಅವರಿಬ್ಬರೂ ಒಂದೇ ಎಡೆಯಲ್ಲುಳಿದಾಗ ಬಾಳಾಜಿಯ ಕಡೆಯವನಾದ **ಪೀರಾಜಿ** ಎಂಬವನೊಬ್ಬ ಸಿಲ್ಲೇದಾರನು ಒಂದು ಜಿಂಕೆಯನ್ನು ಬೆನ್ನಟ್ಟಿ ಹೋದನು. ಅದು ಕರ್ಮಧರ್ಮಸಂಯೋಗದಿಂದ ಚಂದ್ರಸೇನನ ರಾಯಸದವನಾದ ವ್ಯಾಸರಾಯನೆಂಬ* ಗೃಹಸ್ಥನ ಡೇರೆಯನ್ನು ಹೊಕ್ಕಿತು. ಅವನು ಬ್ರಾಹ್ಮಣನಾದ್ದರಿಂದ ತನ್ನ ಬೆನ್ನುಬಿದ್ದ ಆಜಿಂಕೆಯನ್ನು ಪೀರಾಜಿಗೊಪ್ಪಿಸಲೊಡಂಬಡಲಿಲ್ಲ. ಆದರೆ ಪೀರಾಜಿಯು ಹಟಹಿಡಿದು ವ್ಯಾಸರಾಯನ ಹಿಂದೆ ಅಡಗಿಕೊಂಡಿದ್ದ ಚಿಗರೆಯನ್ನು ತನ್ನ ಬರ್ಚಿಯಿಂದ ಇರಿದನು. ಆಗ ಆಬರ್ಚಿಯು ತಪ್ಪಿ ವ್ಯಾಸರಾಯನಿಗೆ ತಾಕಿತು. ಅದನ್ನು ನೋಡಿ ಪೀರಾಜಿಯು ಹೆದರಿ ಓಡಿ ಹೋಗಿ ಬಾಳಾಜಿಯ ಮರೆಬಿದ್ದನು.

ಇತ್ತ ಚಂದ್ರಸೇನನು ಆಸುದ್ದಿಯನ್ನು ಕೇಳಿ, ಪೀರಾಜಿಯನ್ನು ದಂಡಿಸುವ ಉದ್ದೇಶದಿಂದ ಅವನನ್ನು ತನಗೊಪ್ಪಿಸಲಿಕ್ಕೆ ಬಾಳಾಜಿಗೆ ಹೇಳಿಕಳುಹಿದನು. ಅದಕ್ಕೆ ಬಾಳಾಜಿಯು ಒಪ್ಪದ್ದರಿಂದ ಚಂದ್ರಸೇನನು ಅವನನ್ನೂ ಪೀರಾಜಿಯನ್ನೂ ಹಿಡಿದು ತರಲಿಕ್ಕೆ

* ಇವನು ಹೆಸರಿನಿಂದ ಕನ್ನಡಿಗನಿದ್ದಂತೆ ತೋರುತ್ತದೆ.

ಪಡೆಗಾರರಿಗಪ್ಪಣೆಯಿತ್ತನು. ಈಸುದ್ದಿಯು ಹತ್ತಿದ ಕೂಡಲೆ ಬಾಳಾಜಿಯು ತನ್ನ ಜನರೊಡನೆ ಸಾಸ್ವಾಡಕ್ಕೆ ಓಡಿಹೋದನು. ಅಲ್ಲಿಯ ಮುಖ್ಯಸ್ಥನು ಅವನನ್ನು ಒಳಗೆ ಬಿಡದ್ದರಿಂದ, ಅವನು ತನ್ನಿಬ್ಬರು (ಬಾಜೀರಾವ, ಚಿಮಣಾಜಿ) ಮಕ್ಕಳೊಡನೆ **ಪಾಂಡವಗ ಡಕ್ಕೆ** ಓಡಿದನು. ಅಲ್ಲಿಯಧಿಕಾರಿಯಾದರೂ ಅವನನ್ನು ಒಳಗೆ ಬಿಡಲಿಲ್ಲ. ಆದುದರಿಂದ ಅವನ ಸಂಗಡಿಗರಾದ **ಪೀರಾಜಿ ಜಾಧವ, ಧೂಮಲ**ರೆಂಬಿಬ್ಬರು ಸಿಲ್ಲೇದಾರರು ಕೆಲವು ದಂಡಾಳುಗಳನ್ನು ಕೂಡಿಸಿದರು. ಅಷ್ಟರಲ್ಲಿ ಆಕೋಟೆಯ ಮುಖ್ಯಸ್ಥನಿಗೆ ಬಾಳಾಜಿಯನ್ನು ಕಾಪಾಡಬೇಕೆಂದು ಶಾಹುಮಹಾರಾಜನ ಅಪ್ಪಣೆಯಾದ್ದರಿಂದ ಬಾಳಾಜಿಯು ಸುರಕ್ಷಿತವಾಗಿ ಅಲ್ಲಿ ನಿಂತುಕೊಂಡನು.

ಅತ್ತ ಚಂದ್ರಸೇನಜಾಧವನು ಪೀರಾಜಿಯನ್ನೂ ಅವನ ಪಕ್ಷ ಹಿಡಿದ ಬಾಳಾಜಿಯನ್ನೂ ದಂಡಿಸಬೇಕೆಂದು ಹಟಹಿಡಿದುದರಿಂದಲೂ ಶಾಹುಮಹಾರಾಜನು ಹಾಗೆ ಮಾಡಲಿಕ್ಕೊಡಂಬಡದುದರಿಂದಲೂ ಅವರೊಳಗೆ ವಿರೋಧಹುಟ್ಟಿತು. ಆದಕಾರಣ ಮಹಾರಾಜನು ಅಹಮ್ಮದನಗರದ ನೆರೆಯಲ್ಲಿದ್ದ ತನ್ನ ಸರಲಷ್ಕರನಾದ **ನಿಂಬಾಳಕರ ಹಯಪತರಾಯ**ನನ್ನು ಚಂದ್ರಸೇನರಾಯನಿಗಿದುರಾಗಲಿಕ್ಕೆ ಕಳುಹಿದನು. ಅವರಿಬ್ಬರಿಗೂ **ದೇವೂರ**ಲ್ಲಿ ಕದನವಾಯಿತು (೧೭೧೧). ಈಕದನದಲ್ಲಿ ಚಂದ್ರಸೇನನು ಸೋತುದರಿಂದ ಅವನೂ ಘಾತಗೆ **ಸರ್ಜೆರಾಯ**ನೂ* ಕೊಲ್ಹಾಪುರದಲ್ಲಿದ್ದ ತಾರಾಬಾಯಿಯ ಮಗನಾದ ಸಂಭಾಜಿಮಹಾರಾಜನೆಡೆಗೆ ಹೋದರು. ಮುಂದೆ ಚಂದ್ರಸೇನನು ಹೈದರಾಬಾದಿನ ನಿಜಾಮನಾದ **ಚಿನ್‌ಕುಲಿಚ್ ಖಾನ**ನ (ನಿಜಾಮುಲ್ಮುಲುಖನ) ಆಶ್ರಯಕ್ಕೆ ಹೋಗಿ, ಅಲ್ಲಿ **ಚಿಟ ತೋದೆ ಬಾಲಕಿ**ಯೆಂಬೂರುಗಳನ್ನು ಉಂಬಳಿಪಡೆದು, ಅಲ್ಲೇ ನಿಂತುಕೊಂಡನು (೧೭೧೨).†

---

* ಇವನೇ ಕಾಗಲಮನೆತನದ ಮೂಲಪುರುಷನು.

† ಚಂದ್ರಸೇನನು ನಿಜಾಮನ ಕಡೆಗೆ ಹೋಗುವಾಗ ಸರಲಷ್ಕರನನ್ನು ಸೋಲಿಸಿದ ಹೊರತು ಬೇರೆ ಆರಿವೆಯನ್ನು ಹಾಕಲಿಕ್ಕಿಲ್ಲೆಂತಲೂ ಶಾಹುಮಹಾರಾಜನು ಬಾಳಾಜಿಯನ್ನೊಪ್ಪಿಸಿದ ಹೊರತು ಅವನಿಗೆ ಕಯ್ಮುಗಿಯಲಿಕ್ಕಿಲ್ಲೆಂತಲೂ ಪ್ರತಿಜ್ಞೆ ಮಾಡಿದುದಲ್ಲದೆ ಅದರಂತೆಯೇ ನಡೆದನು. ಮಾರಾಟ ಬಖೈರ.

ಮುಂದೆ ಚಂದ್ರಸೇನನು ನಿಜಾಮುಲ್ಮುಲುಖನ ದಂಡಿನೊಡನೆ ಪುಣೆಪ್ರಾಂತವನ್ನೊಳಸುಗ್ಗಿದನು. ಅವನಿಗಿದುರಾಗಲಿಕ್ಕೆ ಹಯಪತ ರಾಯನೂ ಬಾಳಾಜಿಯೂ ಬಂದರು. ಎರಡು ಪಕ್ಷದವರಿಗೂ ಪುರಂದರದ ಹತ್ತರವಿದ್ದ **ನಾರಾಯಣ**ವೆಂಬಲ್ಲಿ ಕದನವಾಯಿತು. ಅದರಲ್ಲಿಯಾರಿಗೆ ಜಯವಾಯಿತೆಂಬದು ತಿಳಿಯುವದಿಲ್ಲ. ಆದರೂ ಶಾಹುಮಹಾರಾಜನ ಪಕ್ಷದವರು ಹಿಂಜರೆದು ಸಾಲ್ಪಿಗೆ ಹೋದುದರಿಂದ, ಮೊಗಲರ ಪಕ್ಷದವರು ಗೆದ್ದಂತೆ ತೋರುತ್ತದೆ. ಬಳಿಕ ಕೆಲವು ದಿವಸದಲ್ಲೇ ಮರಾಟರು ನಿಜಾಮುಲ್ಮುಲುಖನೊಡನೆ ಒಪ್ಪಂದ ಮಾಡಿಕೊಂಡುದರಿಂದ ಚಂದ್ರಸೇನನ ಉದ್ದೇಶವು ಪೂರ್ಣವಾಗಲಿಲ್ಲ. ಆದರೂ ಅವನು ಮುಂದೆ ಸಾತಾರೆಯ ಕಡೆಗೆ ಹಣಿಕಿಹಾಕಲಿಲ್ಲ.

ಈಕಾಲಕ್ಕೆ ಗುತ್ತಿಯ ಮುರಾರಿರಾಯನ ತಮ್ಮನಾದ **ಸಿದ್ಧೋಜಿ ಘೋರ್ಪಡೆ**, ಸವಣೂರನವಾಬ, **ದಾಮಾಜಿಥೋರಾತ**, **ಕೃಷ್ಣರಾವ ಕಟಾವಕರ** ಮುಂತಾದವರು ಕೊಲ್ಹಾಪುರದವರ ಬೆಂಬಲದಿಂದ ಶಾಹುಮಹಾರಾಜನ ರಾಜ್ಯದಲ್ಲಿ ಹಾವಳಿ ಮಾಡಲಾರಂಭಿಸಿದರು. ಇವರೊಳಗೆ ದಾಮಾಜಿ ಥೋರಾತನು ಪಾಟಸದ ನೆರೆಯಲ್ಲಿದ್ದ ಹಿಂಗಣಿಗಾವವೆಂಬಲ್ಲಿರುತ್ತಿದ್ದನು. ಆದುದರಿಂದ ಅವನ ಹಾವಳಿಯನ್ನು ತಗ್ಗಿಸುವದು ಶಾಹುಮಹಾರಾಜನಿಗೆ ಅವಶ್ಯವಾಗಿತ್ತು. ಈಕೆಲಸವನ್ನು ಬಾಳಾಜಿಯು ಕಯ್ಕೊಂಡು ಅಲ್ಲಿಗೆ ದಂಡೆತ್ತಿ ಹೋದನು. ಆದರೆ ದಾಮಾಜಿಯು ಮೋಸ ಮಾಡಿ, ಅವನನ್ನೂ ಅವನಿಬ್ಬರು ಗಂಡುಮಕ್ಕಳನ್ನೂ ಪುರಂದರೆ **ಅಂಬಾಜಿ** ಎಂಬವನನ್ನೂ ಹಿಡಿದು ಸೆರೆಯಲ್ಲಿಟ್ಟನು. ಆಗ ಪೀರಾಜಿ ಜಾಧವನೆಂಬವನು ದಾಮಾಜಿಯು ಬೇಡಿದಷ್ಟು ಹಣವನ್ನು ತಂದುಕೊಟ್ಟು, ಬಾಳಾಜಿಯನ್ನೂ ಅವನ ಮಕ್ಕಳನ್ನೂ ಬಿಡಿಸಿಕೊಂಡನು.

ಬಳಿಕ ಶಾಹುಮಹಾರಾಜನ ಅಪ್ಪಣೆಯಂತೆ ಸಚೀವನ ಮುತಾಲಿಕನು ತನ್ನ ಯಜಮಾನನಾದ **ನಾರೋ ಶಂಕರ**ನೆಂಬ ಹುಡುಗನೊಡನೆ ದಾಮಾಜಿಯನ್ನು ದಂಡಿಸಲಿಕ್ಕೆ ಹೊರಟನು. ಇವರಾ

ದರೂ ದಾಮಾಜಿಯ ಸೆರೆಯಾಳಾದರು. ಆಗ ಬಾಳಾಜಿಯು ನಾರೋ ಶಂಕರನ ತಾಯಿಯಾದ **ಯೇಸುಬಾಯಿಯಿಂದ** ಪುರಂದರ ಕೋಟೆಯನ್ನು ತೆಗೆದುಕೊಂಡು, ಆಕೆಯ ಮಗನ ಬಿಡುಗಡೆಯ ಬಗ್ಗೆ ಮಾತನಾಡಲಿಕ್ಕೆ ತನ್ನ ಕಯ್ಗೆಳಗಿನವನಾದ ಪೀರಾಜಿ ಜಾಧವನನ್ನು ದಾಮಾಜಿಯ ಬಳಿಗೆ ಕಳುಹಿದನು. ದಾಮಾಜಿಯು ಕೆಲವು ಹಣ ತೆಗೆದುಕೊಂಡು ನಾರೋ ಶಂಕರನನ್ನೂ ಅವನ ಮುತಾಲಿಕನನ್ನೂ ಬಿಡುಗಡೆಮಾಡಿದನು (೧೭೧೪). ಇದೇ ಕಾಲಕ್ಕೆ ಬಾಳಾಜಿಯು ಶಾಹುಮಹಾರಾಜನಿಂದ ಸಾಸ್ವಾಡವೆಂಬ ಊರನ್ನು ಉಂಬಳಿಯಾಗಿ ದೊರೆಕಿಸಿದನು.

ಈಕಾಲಕ್ಕೆ **ಪರಶುರಾಮ ತ್ರಿಯಂಬಕನೆಂಬವನು** ಶಾಹುಮಹಾರಾಜನ ಪ್ರತಿನಿಧಿಯಾಗಿದ್ದನು. ಅವನಿಗೆ **ವಿಶಾಲಗಡವು** ಉಂಬಳಿಯಾಗಿತ್ತು. ಅವನ ಹಿರಿಯ ಮಗನು ೧೭೧೩ರಲ್ಲಿ ಆಕೋಟೆಯನ್ನು ಕೊಲ್ಹಾಪುರದ ಸಂಭಾಜಿಮಹಾರಾಜನಿಗೊಪ್ಪಿಸಿದ್ದರಿಂದ, ಶಾಹುಮಹಾರಾಜನು ಕೋಪಿಸಿಕೊಂಡು, ತನ್ನ ದರಬಾರದಲ್ಲಿದ್ದ ಅವನ ತಂದೆಯನ್ನು ಸೆರೆಯಲ್ಲಿಟ್ಟಿದ್ದನು. ಈಸಮಯದಲ್ಲಿ ಮೇಲೆ ಹೇಳಿದಂತೆ ಖಟಾವಕರ ಕೃಷ್ಣರಾಯನೆಂಬವನೊಬ್ಬ ಬ್ರಾಹ್ಮಣನು ಬಹಳ ಪುಂಡತನ ಮಾಡಹತ್ತಿದ್ದರಿಂದ ಬಾಳಾಜಿಯು ಈಪರಶುರಾಮನ ಮಗನಾದ **ಶ್ರೀಪತರಾಯನೆಂಬೊಬ್ಬ** ಶೂರಪುರುಷನನ್ನು ಸಂಗಡ ಕರೆದುಕೊಂಡು, ಕೃಷ್ಣರಾಯನ ಪಾರಪತ್ಯಮಾಡಲಿಕ್ಕೆ ಹೋದನು. ಶ್ರೀಪತರಾಯನು ಕೃಷ್ಣರಾಯನನ್ನು ಸೋಲಿಸಿ, ಜೇರಿಗೆ ತಂದುದರಿಂದ ಅವನು ಶಾಹುಮಹಾರಾಜನಿಗೆ ಶರಣು ಬಂದನು. ಆಗ ಮಹಾರಾಜನು ಅವನಿಗೆ ವಟಾವ ಗ್ರಾಮವನ್ನು ಉಂಬಳಿಯಾಗಿ ಕೊಟ್ಟನು, ಮತ್ತು ಶ್ರೀಪತರಾಯನು ಮಾಡಿದ ಸೇವೆಗೋಸುಗ ಅವನ ತಂದೆಯು ಬಿಡುಗಡೆಹೊಂದಿ ಮತ್ತೆ ಪ್ರತಿನಿಧಿಯಾದನು (೧೭೧೪).

ಮೊದಲು ತಾರಾಬಾಯಿಯ ಕಾಲಕ್ಕೆ **ಕನ್ಹೋಜಿ ಆಂಗ್ರೆಯೆಂಬವನು** ಮರಾಟರ ಹಡಗುಪಡೆಯ ಮುಖ್ಯಸ್ಥನಾಗಿದ್ದನು. ತಾರಾ

ಬಾಯಿಯು ಕೊಲ್ಹಾಪುರಕ್ಕೆ ಹೋದ ಬಳಿಕ ಅವನು ಆಕೆಯ ಪಕ್ಷ ವನ್ನು ಹಿಡಿದು, ಶಾಹುಮಹಾರಾಜನ ರಾಜ್ಯದಲ್ಲಿ ಕೊಲೆಸುಲಿಗೆ ಮಾಡಲಾರಂಭಿಸಿದನು. ಆದ್ದರಿಂದ ಮಹಾರಾಜನು ತನ್ನ ಮುಖ್ಯ ಪ್ರಧಾನಿಯಾದ **ಬಹಿರೋಪಂತ ಪಿಂಗಳೆ**ಯೆಂಬವನನ್ನು ಕನ್ಹೋಜಿಯ ಬಂಡುಮುರಿಯಲಿಕ್ಕೆ ಕಳುಹಿದನು (೧೭೧೨). ಆದರೆ ಆದಂಡಯಾತ್ರೆಯಲ್ಲಿ ಬಹಿರೋಪಂತನಿಗೆ ಗೆಲವು ಬರಲಿಲ್ಲ. ಕನ್ಹೋಜಿಯು ಬಹಿರೋಪಂತನ ಉಂಬಳಿಯ ಊರಾದ **ಲೋಹಗಡ**ವನ್ನು ತೆಗೆದುಕೊಂಡುದಲ್ಲದೆ ಅವನನ್ನೇ ಸೆರೆಹಿಡಿದನು. ಈ ಸುದ್ದಿಯನ್ನು ಕೇಳಿ ಮಹಾರಾಜನು ಬಾಳಾಜಿಯನ್ನು ಅವನ ಸಮಾಚಾರಕ್ಕೆ ಕಳುಹಿದನು. ಬಾಳಾಜಿಗೂ ಕನ್ಹೋಜಿಗೂ ಮೊದಲಿನಿಂದ ಗುರುತಿತ್ತು. ಆದುದರಿಂದ ಬಾಳಾಜಿಯು ಕನ್ಹೋಜಿಯನ್ನು ಕೆಳಗೆ ಬರೆದ ಶರ್ತುಗಳಿಗೊಡಂಬಡಿಸಿದನು:—

(೧) ಕನ್ಹೋಜಿಯು ಕೊಲ್ಹಾಪುರದವರ ಪಕ್ಷವನ್ನು ಬಿಟ್ಟು, ಶಾಹುಮಹಾರಾಜನ ಹಡಗುಗಳ ಮುಖ್ಯಸ್ಥನಾಗಬೇಕು.

(೨) ಅವನಿಗೆ **ಸರಖೇಲ**ವೆಂಬ ಬಿರುದು ಇರತಕ್ಕದ್ದು.

(೩) ಅವನು ತಾನು ಹಿಡಿದುಕೊಂಡ ಚೌಲ ಮುಂತಾದ ಸ್ಥಳಗಳನ್ನು ಬಿಟ್ಟುಕೊಡಬೇಕು, ಮತ್ತು ಬಹಿರೋಪಂತನನ್ನೂ ಖಂಡೋಬಲ್ಲಾಳನನ್ನೂ ಸೆರೆಯಿಂದ ಬಿಡುಗಡೆ ಮಾಡಬೇಕು.

(೪) ಶಾಹುಮಹಾರಾಜನು ಅವನಿಗೆ **ಕುಲಾಬಾ, ವಿಜಯದುರ್ಗ, ಸುವರ್ಣದುರ್ಗ, ಜಲದುರ್ಗ** ಮುಂತಾದ ೧೦ ಕೋಟೆಗಳನ್ನೂ **ರಾಮದುರ್ಗ ರಾಜಾಪುರ** ಮುಂತಾದ ೧೬ ಊರುಗಳನ್ನೂ ಉಂಬಳಿಹಾಕಿ ಕೊಡಬೇಕು.*

ಬಾಳಾಜಿಯು ಆಂಗ್ರೆಯೊಡನೆ ಒಪ್ಪಂದಮಾಡಿ ಅವನನ್ನು ಸಂಗಡ ಕರೆದುಕೊಂಡು ಸಾತಾರೆಗೆ ಬಂದನು. ಆಗ ಶಾಹುಮಹಾ

---

* ಈಯೊಪ್ಪದಿಂದ ಜಂಜೀರೆಯ ಹಬಸಿಯ ವಶದಲ್ಲಿದ್ದ ಎಷ್ಟೋ ಊರುಗಳು ಆಂಗ್ರೆಯನ ಕಯ್ಸೇರಿದವು. ಆದ್ದರಿಂದ ಹಬಸಿಯು ಸಿಟ್ಟಾಗಿ ಕಾಲುಗೆದರಿ ಜಗಳತೆಗೆದನು. ಆಗ ಆಂಗ್ರೆಯು ಮರಾಟರ ನೆರವಿನಿಂದ ಅವನನ್ನು ಸೋಲಿಸಿದನು.

ರಾಜನು ಸಂತೋಷಹೊಂದಿ, ಆಕಾಲಕ್ಕೆ ತನ್ನ ಪೇಶ್ವೆ ಅಥವಾ ಮುಖ್ಯಪ್ರಧಾನಿಯಾದ ಬಹಿರೋಪಂತನು ಆಕೆಲಸಕ್ಕೆ ತಕ್ಕವನಲ್ಲೆಂದೆಣಿಸಿ, ಅವನ ಕೆಲಸವನ್ನು ತನಗೆ ಮೊದಲಿಂದ ಅನುಕೂಲನಾಗಿದ್ದ ಬಾಳಾಜಿಗೆ ಕೊಟ್ಟನು. ಬಳಿಕ ಬಾಳಾಜಿಯು ತನ್ನ ಗೆಳೆಯನಾದ ಪುರಂದರೆ ಆಬಾಜಿಯನ್ನು ತನ್ನ ಮುತಾಲಿಕನನ್ನೂ ತನ್ನ ಸಂಗಡ ಓಡಿ ಬಂದ ಹರಿಮಹಾದೇವಭಾನುವನ್ನು* ತನ್ನ ಫಡನವೀಸನನ್ನೂ ಮಾಡಿಕೊಂಡನು (ವಿಜಯ ಸಂವತ್ಸರ ಮಾಘಮಾಸ ಶಕೆ ೧೬೩೬ ಅಂದರೆ ಕ್ರಿ. ಶ. ೧೭೧೪.) ಇದೇ ಸಮಯಕ್ಕೆ ಉಳಿದ ಪ್ರಧಾನರಲ್ಲಿಯಾದರೂ ತುಸು ಹೆಚ್ಚುಕಡಮೆಯಾಯಿತು; ಮತ್ತು ಶಾಹು ಮಹಾರಾಜನು ಬಾಳಾಜಿಯ ಅನುಮತಿಯಿಂದ ಬೇರೆಬೇರೆ ಪ್ರಧಾನರಿಗೆ ತನ್ನ ರಾಜ್ಯದ ಬೇರೆಬೇರೆ ಭಾಗಗಳನ್ನೊಪ್ಪಿಸಿ, ಅವರು ತಂತಮ್ಮ ಅಧಿಕಾರವನ್ನು ನೆಲೆಗೊಳಿಸಿ, ತಂತಮ್ಮ ವೆಚ್ಚಕಳೆದು ಉಳಿದ ಹಣವನ್ನು ತನಗೆ ಕಳುಹಬೇಕೆಂದು ಕಟ್ಟುಮಾಡಿದನು. ಈಯೋರ್ಪಾಡಿನಂತೆ ಬಾಳಾಜಿಗೆ ಬಾನರೇಕ, ಮಾಳವಾ, ಬಾಗಲಾಣ ಸುಬೆಗಳು ದೊರೆದವು. ತರುವಾಯ ಬಾಳಾಜಿಯು ಪುರಂದರಕ್ಕೆ ಹೋಗಿ, ಆಕೋಟೆಯ ವ್ಯವಸ್ಥೆಯನ್ನು ಮಾಡಿ, ಓಲವಣಕ್ಕೆ† ಬಂದನು. ಅಲ್ಲಿ ಕನ್ಹೋಜಿ ಆಂಗ್ರೆಯು ಅವನನ್ನು ಕಾಣಲಿಕ್ಕೆ ಬರಲು, ಬಾಳಾಜಿಯು ಅವನಿಂದ ಲೋಹಗಡದ ಕೋಟೆಯನ್ನು ತೆಗೆದುಕೊಂಡು, ಅದಕ್ಕೆ ರಾಮಾಜಿ ಮಹಾದೇವ ಭಾನುವನ್ನು ನಿಯಮಿಸಿ, ಜೆಜೂರಿಗೆ ಬಂದನು; ಅಲ್ಲಿ ಅವನ ಫಡನವೀಸನಾದ ಹರಿ ಮಹಾದೇವ ಭಾನುವು ಮೃತಪಟ್ಟುದರಿಂದ ಅವನ ಸ್ಥಳಕ್ಕೆ ಬಾಳಾಜಿ ಮಹಾದೇವ ಭಾನುವನ್ನು ನಿಯಮಿಸಿ, ಸಾತಾರೆಗೆ ತಿರುಗಿ ಹೋದನು.

ಅತ್ತ ದಿಲ್ಲಿಯ ದರಬಾರದಲ್ಲಿ ಅಬ್ದುಲಖಾನ, ಹುಸೇನ ಅಲ್ಲಿ ಖಾನರೆಂಬಿಬ್ಬರು ಸಯ್ಯದ ಮನೆತನದ ಅಣ್ಣತಮ್ಮಂದಿರು ತಮ್ಮ

* ಗ್ರಾಂಟಡಫ್ ಸಾಹೇಬರು ತಮ್ಮ ಇತಿಹಾಸದಲ್ಲಿ ಬಾಳಾಜಿಯು ರಾಮಾಜಿಯನ್ನು ಫಡನವೀಸಿಯ ಕೆಲಸಕ್ಕೆ ನಿಯಮಿಸಿದನೆಂದು ಬರೆಯುತ್ತಾರೆ (೧ನೆಯ ಸಂಪುಟ ೭೭೧ ಪುಟ).

† ಇದಕ್ಕೆ ಈಗ ವಲವಣವೆನ್ನುತ್ತಾರೆ. ಇದು ಲೋನಾಳಿಯ ಹತ್ತರವಿರುತ್ತದೆ.

ಕಲಿತನದಿಂದ ಪ್ರಬಲರಾಗಿ, ಅವರಂಗಜೇಬನ ಮೊಮ್ಮಗನಾದ ಫೆರೋಕಶರನೆಂಬವನನ್ನು ಪಟ್ಟದ ಮೇಲೆ ಕುಳ್ಳಿರಿಸಿ, ತಾವೇ ರಾಜ್ಯಭಾರವನ್ನು ಮನಸ್ಸಿಗೆ ಬಂದಂತೆ ನಡಿಸುತ್ತಿದ್ದರು. ಈಬೊಂಬೆ ಬಾದಶಹನ ಮನಸ್ಸಿನಲ್ಲಿ ಸ್ವತಂತ್ರನಾಗಬೇಕೆಂದು ಇದ್ದುದರಿಂದ ಇವನು ಈಸಯ್ಯದರ ವಿರುದ್ಧವಾಗಿ ಮರಾಟರೊಡನೆ ಒಳಸಂಚು ನಡಿಸಿದನು. ಇಂತು ಬಾದಶಹನಿಂದ ಪ್ರೇರಿತರಾದ ಮರಾಟರು ನೂಳವಾ ಗುಜರಾಥಪ್ರಾಂತಗಳಲ್ಲಿ ಹಾವಳಿಯನ್ನು ಮಾಡಲಾರಂಭಿಸಿದರು. ಆಗ ಸಯ್ಯದರು ಉಪಾಯಾಂತರವನ್ನು ಕಾಣದೆ, ಮರಾಟರನ್ನು ತಮ್ಮ ಕಡೆಗೆ ಮಾಡಿಕೊಳ್ಳುವ ಉದ್ದೇಶದಿಂದ ಶಾಹು ಮಹಾರಾಜನೆಡೆಗೆ ತಮ್ಮ ರಾಯಸದವನಾದ ಶಂಕರಾಜಿ ಮಲ್ಹಾರನೆಂಬವನನ್ನು* ಕಳುಹಿ ಕೊಟ್ಟರು (೧೭೧೭). ಇವನ ಮಾಧ್ಯಸ್ಥಿಕೆಯಿಂದ ಕೆಳಗೆ ಬರೆದ ಒಪ್ಪಂದದ ಕಲಮುಗಳು ಕಟ್ಟಕಡೆಗೆ ಗೊತ್ತಾದವು.

(೧) ಶಾಹುಮಹಾರಾಜನು ೧೫೦೦೦ ರಾಹುತರನ್ನಿಟ್ಟು ದಕ್ಷಿಣ ಹಿಂದುಸ್ಥಾನದಲ್ಲಿ ಸ್ವಸ್ಥತೆಯನ್ನುಂಟುಮಾಡಬೇಕು.

(೨) ಬಾದಶಹನು ಶಾಹುಮಹಾರಾಜನಿಗೆ ಸ್ವರಾಜ್ಯವನ್ನು ಅಂದರೆ ಶಿವಾಜಿ ಮಹಾರಾಜನು ಗೆದ್ದುಕೊಂಡ ೧ ಪುಣೆ, ೨ ಸುಪೆ (ಬಾರಾಮತಿ ಸಹಿತ), ೩ ಇಂದಾಪೂರ, ೪ ವಾಯಿ, ೫ ಮಾವಳೆ, ೬ ಸಾತಾರೆ, ೭ ಕರ್ಹಾಡ, ೮ ಕಟಾವ, ೯ ಮಾಣ, ೧೦ ಫಲ್ಟನ್: ೧೧ ಮಲಕಾಪೂರ, ೧೨ ಕಾರಳೆ, ೧೩ ಪನ್ಹಾಳ, ೧೪ ಅಜರ, ೧೫ ಜುನ್ನರ, ೧೬ ಕೊಲ್ಹಾಪೂರ ಈಸುಬೆಗಳನ್ನೂ ರಾಮನಗರ, ಜಾವೂರ, ಚೌಲ, ಕಲ್ಯಾಣ, ರಾಜಾಪೂರ, ದಾಭೋಳ ಮುಂತಾದ ೧೩ ಕೊಂಕಣದ ಜಿಲ್ಲೆಗಳನ್ನೂ ಕೊಪ್ಪಳ ಗದಗ ಮುಂತಾದ ತುಂಗಭದ್ರೆಯ ಬಡಗ

---

* ಈಶಂಕರಾಜಿಯು ರಾಜಾರಾಮಮಹಾರಾಜನ ಕಾಲದಲ್ಲಿ ಸಚೀವನಾಗಿದ್ದನು. ಅವರಂಗಜೇಬನು ಜಂಜಿಕೋಟೆಯನ್ನು ಮುತ್ತಿದಾಗ ಇವನು ತನ್ನ ಕೆಲಸವನ್ನು ವೈರಾಗ್ಯದಿಂದ ಬಿಟ್ಟುಕೊಟ್ಟು ಕಾಶೀಯಾತ್ರೆ ಮಾಡಿ, ಕಾಶಿಯಲ್ಲಿ ಬಹಳ ದಿವಸ ನಿಲ್ಲದೆ ಹುಸೇನ ಅಲ್ಲಿಖಾನ ಸಯ್ಯದನ ಕಯ್ಕೆಳಗೆ ಕೆಲಸಮಾಡಲುಪಕ್ರಮಿಸಿದನು.

ಣಗಿದ್ದ ಕರ್ನಾಟಕದ ಪ್ರದೇಶಗಳನ್ನೂ ಉಂಬಳಿಯಾಗಿ ಕೊಡಬೇಕು.

(೩) ಅವರಂಗಾಬಾದ, ಬೇದರ, ವರ್ಹಾಡ, ವಿಜಾಪುರ, ಹೈದರಾಬಾದ, ಖಾನದೇಶ ಈ ೬ ದಕ್ಷಿಣದ ಸುಭೆಗಳಲ್ಲಿಯೂ ತಂಜಾವೂರು, ಮೈಸೂರು, ತಿರುಚಿನಾಪಳ್ಳಿ, ಈ ಮಾಂಡಲಿಕ ಸಂಸ್ಥಾನಗಳಲ್ಲಿಯೂ ಶಾಹುಮಹಾರಾಜನು ಚೌಥವನ್ನು (ಉತ್ಪನ್ನದ ಚತುರ್ಥಾಂಶವನ್ನು) ತೆಗೆದುಕೊಳ್ಳಬೇಕು.

(೪) ಚೌಥದ ಹೊರತು ಸರದೇಶಮುಖಿಯನ್ನು (ಉತ್ಪನ್ನದ ದಶಮಾಂಶವನ್ನು) ಶಾಹುಮಹಾರಾಜನು ಮೇಲೆ ಹೇಳಿದ ಸುಭೆಗಳಲ್ಲಿ ತೆಗೆದುಕೊಳ್ಳಬೇಕು.

(೫) ಬಾದಶಹನು ಶಾಹುಮಹಾರಾಜನ ತಾಯಿ ಹೆಂಡತಿ ಮುಂತಾದವರನ್ನು ಸೆರೆಯಿಂದ ಬಿಡುಗಡೆಮಾಡಿ, ಶಾಹುಮಹಾರಾಜನ ಕಡೆಗೆ ಕಳುಹಿಕೊಡಬೇಕು.

ಇಂತು ಮಾತುಕಥೆಗಳು ಗೊತ್ತಾದಬಳಿಕ ಶಂಕರಾಜಿಯು ತನ್ನ ಯಜಮಾನನೆಡೆಗೆ ಹೋದನು. ಬಳಿಕ ಶಾಹುಮಹಾರಾಜನು ಬಾಳಾಜಿಯನ್ನೂ ತನ್ನ ಸೇನಾಪತಿಯಾದ **ಖಂಡೇರಾವದಭಾಡೆಯನ್ನೂ** ಅವರಂಗಾಬಾದಕ್ಕೆ ಕಳುಹಿದನು. ಅಲ್ಲಿಂದ ಅವರಿಬ್ಬರೂ ಸಯ್ಯದ ಹುಸೇನ ಅಲ್ಲಿಖಾನನನ್ನು ಕೂಡಿಕೊಂಡು ದಿಲ್ಲಿಯ ಹಾದಿಯನ್ನು ಹಿಡಿದರು. ಹುಸೇನ ಅಲ್ಲಿಖಾನನು ಮರಾಟರ ದಂಡಿನ ವೆಚ್ಚವನ್ನು ಕೊಡಲೊಪ್ಪಿದನು.

ಹುಸೇನ ಅಲ್ಲಿಖಾನನು ದಿಲ್ಲಿಯನ್ನು ಮುಟ್ಟಿದ ಬಳಿಕ ಸಯ್ಯದರು ಫರೋಕಶರನನ್ನು ಪಟ್ಟದಿಂದ ತಳ್ಳಿ ಕೊಲ್ಲಿಸಿಬಿಟ್ಟರು. ತರುವಾಯ ಅವರು ಪಟ್ಟಗಟ್ಟಿದ ಇಬ್ಬರು ಅರಸುಗಳು ೭ ತಿಂಗಳಲ್ಲೇ ತೀರಿಕೊಂಡುದರಿಂದ ಜಲಂದರಶಹನ ಮಗನಾದ ರೋಷನ್‌ಯಖ್ತಿಯಾರನು **ಮಹಮ್ಮದಶಹನೆಂಬ** ಹೆಸರಿನಿಂದ ಪಟ್ಟವೇರಿದನು (೧೭೧೯).

ಸಯ್ಯದರು ಮರಾಟರೊಡನೆ ಮಾಡಿದ ಒಪ್ಪಂದಕ್ಕೆ ಪೆರೋ

ಕಶರನು ಒಡಂಬಡಲಿಲ್ಲ. ಆದುದರಿಂದ ಮಹಮ್ಮದಶಹನು ಪಟ್ಟ ವೇರುವ ವರೆಗೆ ಮರಾಟರು ದಿಲ್ಲಿಯಲ್ಲೇ ಉಳಿದರು. ಆದರೆ ಚೌಥಸರದೇಶಮುಖಿಸ್ವರಾಜ್ಯಗಳ ಸಂಬಂಧದಿಂದ ಮರಾಟರಿಗೆ ಸನದುಕೊಡುವದು ದಿಲ್ಲಿಯಲ್ಲಿದ್ದ ಮುಸಲ್ಮಾನ ಸರದಾರರ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ಅವರು, ಬಾಳಾಜಿಯು ಸನದುಗಳನ್ನು ತೆಗೆದುಕೊಂಡು ದರಬಾರದಿಂದ ತಿರುಗಿ ಬರುವಾಗ, ಅವನನ್ನು ಕೊಂದು ಸನದುಗಳನ್ನು ಕಸಕೊಂಡು ಹೋಗಬೇಕೆಂದು ಸಂಚುಮಾಡಿದರು. ಈಸುದ್ದಿಯು ಬಾಳಾಜಿಗೆ ತಿಳಿದುದರಿಂದ ಅವನು ತನ್ನ ಪಲ್ಲಕ್ಕಿಯಲ್ಲಿ ತನ್ನ ಪಡನವೀಸನಾದ ಬಾಳಾಜಿಮಹಾದೇವನನ್ನು ಕುಳ್ಳಿರಿಸಿ, ತಾನು ಸನದುಗಳನ್ನು ತೆಗೆದುಕೊಂಡು ಒಬ್ಬರಿಗೂ ಗೊತ್ತಾಗದಂತೆ ಅಡ್ಡಹಾದಿಯಿಂದ ಸುರಕ್ಷಿತವಾಗಿ ತನ್ನ ಪಾಳಯಕ್ಕೆ ಬಂದು ಮುಟ್ಟಿದನು. ಅತ್ತ ದಿಲ್ಲಿಯ ಮುಸಲ್ಮಾನರು ಪಲ್ಲಕ್ಕಿಯಲ್ಲಿ ಕೂತವನೇ ಬಾಳಾಜಿಯೆಂದೆಣಿಸಿ ಅವನನ್ನು ಕೊಂದು, ಆಗದ್ದಲದಲ್ಲಿ ಎಷ್ಟೋ ಮಂದಿ ಮರಾಟರನ್ನು ಕೊಂದರು.

ಬಳಿಕ ಬಾಳಾಜಿಯು ಶಾಹುಮಹಾರಾಜನ ತಾಯಿ ಮುಂತಾದವರೊಡನೆ ಸಾತಾರೆಗೆ ಸುರಕ್ಷಿತವಾಗಿ ಬಂದು ಮುಟ್ಟಿದನು. ಮರಾಟರ ದರಬಾರದಲ್ಲಿ ಎಲ್ಲರಿಗೂ ಸಂತೋಷವಾಯಿತು. ಮುಂದೆ ಕೆಲವು ದಿವಸಗಳ ತರುವಾಯ ಬಾಳಾಜಿಯು ಹೊಸತಾಗಿ ದೊರೆದ ಚೌಥಸರದೇಶಮುಖಿಯನ್ನೆತ್ತಲಿಕ್ಕೆ ಅಲ್ಲಲ್ಲಿ ಬೇರೆ ಬೇರೆ ಅಧಿಕಾರಿಗಳನ್ನು ನಿಯಮಿಸಿ, ಅವರಿಗೆ ಉಂಬಳಿಯನ್ನು ಹಾಕಿಕೊಟ್ಟು, ಅವರು ತಂತಮ್ಮ ಊರುಗಳ ಕಂದಾಯದ ಅಂಶವನ್ನು ತೆಗೆದುಕೊಂಡು, ಉಳಿದ ಹಣವನ್ನು ಸರಕಾರಕ್ಕೆ ಕೊಡಬೇಕೆಂದು ಗೊತ್ತುಮಾಡಿದನು. ಈಯೇರ್ಪಾಡಿನಿಂದ ಸಾವಿರಾರು ಮಂದಿ ಓದುಬರಹ ಬಲ್ಲ ಬ್ರಾಹ್ಮಣರು ವಿಶೇಷವಾಗಿ ಚಿತ್ಪಾವನರು ಅನ್ನಕ್ಕೆ ಹತ್ತಿದ್ದಲ್ಲದೆ, ಅವರೆಲ್ಲರೂ ಮರಾಟರ ರಾಜ್ಯದ ಹಿತಚಿಂತಕರಾದರು. ಇದರಿಂದಲೇ ಈರಾಜ್ಯವು ನಾಲ್ಕೊಪ್ಪತ್ತು ನಡೆಯಿತೆನ್ನಬಹುದು.

ದಿಲ್ಲಿಗೆ ಹೋಗಿಬಂದಂದಿನಿಂದ ಬಾಳಾಜಿಯ ಮೈಯ್ಯಲ್ಲಿ ಸ್ವಸ್ಥವಿರಲಿಲ್ಲ. ದಿನದಿನಕ್ಕೆ ಅವನ ಪ್ರಕೃತಿಯು ಹೆಚ್ಚೆಚ್ಚು ಕೆಡುತ್ತಾ ಬಂದುದರಿಂದ, ಅವನು ಶಾಹುಮಹಾರಾಜನಪ್ಪಣೆಪಡೆದು, ತನ್ನ ಕುಟುಂಬವಿದ್ದ ಸಾಸ್ವಾಡಕ್ಕೆ ಹೋದನು. ಅಲ್ಲಿಯೂ ಅವನ ಪ್ರಕೃತಿಯು ಸುಧಾರಿಸದ್ದರಿಂದ ಅವನು ಮುಂದೆ ಕೆಲವು ದಿವಸಗಳಲ್ಲಿ ಮಡಿದನು (ಅಕ್ಟೋಬರ ೧೭೨೦).

ಬಾಳಾಜಿಯು ಚಿಕ್ಕಂದಿನಲ್ಲಿ ಬಡ ದೇಶಮುಖನಾಗಿದ್ದು ಮುಂದೆ ಹೆಸರಾದ ಪೇಶ್ವೆಯರ ಮೂಲಪುರುಷನಾದುದು ಸೋಜಿಗದ ಮಾತೆಂದು ತೋರಬಹುದು. ಆದರೆ ಮಾನವೀ-ದೊಡ್ಡಿಸ್ತಿಕೆಗೆ ಅಮಾನುಷ-ಗುಣಗಳು ಅವಶ್ಯವಾಗಿ ಬೇಕಾಗುವದಿಲ್ಲ. ಬಾಳಾಜಿಯು ಹೆಚ್ಚಿನ ಕಲಿಯಾಗಿದ್ದಿಲ್ಲ, ಮತ್ತು ಅವನು ಹೇಳಿಕೊಳ್ಳುವಂತಹ ಪಂಡಿತನಿದ್ದಿಲ್ಲ. ಹಬಸಿಯರ ಎದ್ದಲಗಾಟವೇ ಅವನ ಏಳ್ಗೆಯ ಆದಿಕಾರಣವಾಯಿತು, ಮತ್ತು ಅವನ ದೀರ್ಘಸಾಹಸಕ್ಕೆ ಇಂಬುಗೊಟ್ಟಿತು. ಅವನಲ್ಲಿ ಆರ್ಜವಶಕ್ತಿಯೂ ಆಸಕ್ತಿಯೂ ಹೆಚ್ಚಾಗಿದ್ದವು. ಈಗುಣಗಳಿಂದಲೇ ಅವನು ತನ್ನ ಸಾಕ್ಷಾತ್ ಒಡೆಯನಾದ ಜಾಧವರಾಯನ ಒಲುಮೆಯನ್ನು ಸಂಪಾದಿಸಿದನು. ಅವನು ತನ್ನ ಯಜಮಾನನನ್ನು ತಾರಾಬಾಯಿಯ ಪಕ್ಷ ಬಿಡಿಸಲಿಕ್ಕೆ ಒಡಂಬಡಿಸಿದ್ದರಿಂದ, ಶಾಹುಮಹಾರಾಜನ ಪ್ರೀತಿಗೆ ಪಾತ್ರನಾದನು; ಮತ್ತು ಈಪ್ರೀತಿಯು ಕಡೆತನಕ ಕುಂದಿಲ್ಲದೆ ನಡೆಯಿತು. ಈಸಂಬಂಧದಿಂದ ಕೆಲ ನೀತಿಜ್ಞರು ಅವನಿಗೆ ದೋಷಕೊಡಬಹುದು. ಆದರೆ ಶಾಹುಮಹಾರಾಜನು ಸರಿಯಾದ ಬಾಧ್ಯಸ್ಥನಾದುದರಿಂದಲೂ ತಾರಾಬಾಯಿಯು ಬಾಳಾಜಿಯಿಂದ ಸರಿಯಾದ ವಚನ ತೆಗೆದುಕೊಳ್ಳದ್ದರಿಂದಲೂ ಈದೋಷದ ಕಸುವು ಕಡಮೆಯಾಗುತ್ತದೆ. ಬಾಳಾಜಿಯಲ್ಲಿ ಕರ್ತೃತ್ವ ಶಕ್ತಿಯೂ ಸ್ವಜನಾಭಿಮಾನವೂ ಪಿರಿದಾಗಿದ್ದವು. ಅವನು ಶಾಹುಮಹಾರಾಜನನ್ನು ಏಕನಿಷ್ಠೆಯಿಂದ ಸೇವಿಸದೆ, ಅವನನ್ನು ಮೂಲೆಗೊತ್ತಿ, ತಾನೇ ರಾಜ್ಯಸೂತ್ರವನ್ನು ಕಯ್ಕೊಂಡನೆಂದು ಕೆಲವರು ಅವನನ್ನು ದೂಷಿಸುತ್ತಾರಷ್ಟೇ. ಆದರೆ ಶಾಹುಮಹಾ

ರಾಜನು ವಿಷಯಲಂಪಟನಾದ್ದರಿಂದಲೂ ಅವನಿಗೂ ಬಾಳಾಜಿಗೂ ಕಡೆತನಕ ವೈಮನಸ್ಸು ಬಾರದ್ದರಿಂದಲೂ ಈಮಾತು ಸಾಕಷ್ಟು ಬಲಪಡುವದಿಲ್ಲ; ಇದಲ್ಲದೆ ಬಾಳಾಜಿಯು ಶಾಹುಮಹಾರಾಜನಿರುವ ವರೆಗೆ ತಾನು ಸ್ವತಂತ್ರನಾದಂತೆ ತೋರಗೊಡಲಿಲ್ಲ. ಅದು ಹೇಗೇ ಇರಲಿ, ಕೊಂಕಣಸ್ಥರಲ್ಲಿ ಈಗಲೂ ಸಾಧಾರಣವಾಗಿ ಕಂಡುಬರುವ ಆರ್ಜವಶಕ್ತಿ, ಉದ್ಯೋಗಪ್ರೀತಿ, ದೀರ್ಘಪ್ರಯತ್ನ, ಸ್ವಕುಲಾಭಿಮಾನ, ದೀರ್ಘದೃಷ್ಟಿ ಮುಂತಾದ ಗುಣಗಳೇ ಬಾಳಾಜಿಯಲ್ಲಿ ಯಥೇಷ್ಟವಾಗಿ ಕಂಗೊಳಿಸುತ್ತಿದ್ದವು.

---



## ೩. ನಾನಾಫಡನವೀಸ.

೧೮ನೆಯ ಶತಕದ ಕೊನೆಯಲ್ಲಿ ದಕ್ಷಿಣಹಿಂದುಸ್ಥಾನದೊಳಗೆ ಮೂರೂವರೆ ಮಂದಿ ಜಾಣರಿದ್ದರೆಂಬ ಮಾತು ವಾಚಕರಿಗೆ ಗೊತ್ತಿರಬಹುದು. ಈಜಾಣರಾರೆಂದರೆ—೧ **ಸಖಾರಾಮ ಬಾಪು ಬೋಕಿಲ**, ೧ ವಿಠ್ಠಲಸುಂದರ (ನಿಜಾಮನ ಮಂತ್ರಿ), ೧ **ದೇವಾಜಿಪಂತ** (ಭೋಸಲೆಯನ ವಕೀಲ), ೧/೨ ನಾನಾಫಡನವೀಸ. ಕಡೆಯವನಾದ ನಾನಾಫಡನವೀಸನು ಅರೆಜಾಣನೆಂದು ಆಗಿನ ಕಾಲದ ಮುತ್ಸದ್ದಿಗಳ ಅಭಿಪ್ರಾಯವಿತ್ತು. ಇವನು ಏನು ಕಾರಣ ಜಾಣರ ಪಟ್ಟಿಯಲ್ಲಿ ಸೇರಿಸಲ್ಪಟ್ಟನೆಂಬದೂ ಇವನು ಏನು ಕಾರಣ

ಅರೆಜಾಣನೆಂದು ಕರೆಯಲ್ಪಟ್ಟನೆಂಬದೂ ಮುಂದಿನ ಚರಿತ್ರದಿಂದ ಸ್ಪಷ್ಟವಾಗಿ ತಿಳಿಯುವದು.

ಪೇಶ್ವೆಯರ ಮೂಲಪುರುಷನಾದ ಬಾಳಾಜಿ ವಿಶ್ವನಾಥನು ಅಂಜನವೇಲದಲ್ಲಿ ಹಬಸಿಯರ ಸೆರೆಯಾಳಾದಾಗ ವೇಳಾಸದಲ್ಲಿದ್ದ ತ್ರಿವರ್ಗಭಾನುಗಳು—ಹರಿ, ಬಾಳಾಜಿ, ರಾಮಾಜಿ—ತಮ್ಮ ಹಿರಿಯರಿಂದ ನಡೆದು ಬಂದ ಋಣಾನುಭಂದವ ಸ್ಮರಿಸಿ ವಿಶ್ವಪ್ರಯತ್ನಮಾಡಿ, ಅವನನ್ನು ಕಾವಲಿನಿಂದ ಬಿಡಿಸಿದರು. ಮುಂದೆ ಬಾಳಾಜಿ ವಿಶ್ವನಾಥನು ಮೂರುಮಂದಿ ಭಾನುಗಳೊಡನೆ ಹಬಸಿಯರ ಕಾಟವನ್ನು ತಪ್ಪಿಸಿಕೊಳ್ಳಲಿಕ್ಕೆ ಸಾತಾರೆಗೆ ಹೋದನು; ಅಲ್ಲಿ ಇರಿರುತ್ತಾ ಶಾಹು ಮಹಾರಾಜನ ಒಲುಮೆಯನ್ನು ಸಂಪಾದಿಸಿ, ಪೇಶ್ವೆಯಾದ ಬಳಿಕ ತನ್ನ ಸಂಗಡಲಿದ್ದ ಹರಿಮಹಾದೇವಭಾನುವಿಗೆ ಫಡನವೀಸಿಯ ವಸ್ತ್ರಗಳನ್ನು ಕೊಡಿಸಿದನು.* ಹರಿಯು ಮುಂದೆ ४-೫ ತಿಂಗಳಲ್ಲೇ ಮಕ್ಕಳಿಲ್ಲದೆ ತೀರಿಕೊಂಡುದರಿಂದ ಅವನ ತಮ್ಮನಾದ ಬಾಳಾಜಿಯು ಫಡನವೀಸನಾದನು (೧೭೧४). ಈ ಬಾಳಾಜಿಯ ಮಗನಾದ ಜನಾರ್ದನನು ಮೇಂಥಳೆ ಮನೆತನದವಳಾದ ರಖುಮಾಬಾಯಿಯನ್ನು ಮದುವೆಯಾದನು. ಇವರಿಂದಲೇ ಮುಂದೆ ಹೆಸರಾದ ಬಾಳಾಜಿ ಜನಾರ್ದನ (ಊರ್ಫ ನಾನಾಫಡನವೀಸನು) ಸಾತಾರೆಯಲ್ಲಿ ಹುಟ್ಟಿದನು (೧೭४೧).†

ನಾನಾನ ಬಾಲ್ಯದ ಸಂಬಂಧದಿಂದ ನಮಗೆ ಹೆಚ್ಚಿಗೇನೂ ಗೊತ್ತಾಗುವದಿಲ್ಲ. ಅವನ ತಂದೆಯು ಬಹುಶಃ ಪೇಶ್ವೆಯನ ಸಂಗಡ ಹೊರಗೆ ಇರುತ್ತಿದ್ದ ಕಾರಣ ಅವನು ತಾಯಿಯ ಮಾತು ಕೇಳದೆ ಸಿಕ್ಕ ಹಾಗೆ ಗೊಂದಲ ಹಾಕುವುದರಲ್ಲಿಯೂ ಪುರಾಣ-ಪುಣ್ಯಕಥೆಗಳನ್ನು ಕೇಳುವುದರಲ್ಲಿಯೂ ದೇವರ ಪೂಜೆಯಲ್ಲಿಯೂ ಕಾಲಕಳೆಯುತ್ತಿದ್ದನು. ಅವನು ಹೀಗೆ ಉಂಡಿಗನಾಗುವುದನ್ನು ನೋಡಿ,

---

*ಹಿಂದೆ ಪುಟ ೬೨ ನೋಡಿರಿ.

† ನಾನಾಫಡನವೀಸನು ಶಕೆ ೧೬೬೩ ದುರ್ಮತಿ ನಾಮಸಂವತ್ಸರ ಮಾಘವದ್ಯ ४ ಶುಕ್ರವಾರ ಚಿತ್ರಾನಕ್ಷತ್ರ ರಾತ್ರಿ ೧೧ ಘಟಿಕೆ ೧೦ ಪಳೆಯಲ್ಲಿ ಹುಟ್ಟಿದನು.

ನಾನಾಸಾಹೇಬ ಪೇಶ್ವೆಯನ ಕಕ್ಕನ ಮಗನಾದ **ಸದಾಶಿವರಾಯನು** ಅವನನ್ನೂ ಅವನ ಕಕ್ಕನ ಮಗನಾದ **ಮೋರೋಬನನ್ನೂ** ನಾನಾಸಾಹೇಬನ ಮಕ್ಕಳಾದ **ವಿಶ್ವಾಸರಾವ-ಮಾಧವರಾವರೊ**ಡನೆ ವಿದ್ಯಾಭ್ಯಾಸ ಮಾಡಲಿಕ್ಕಿಟ್ಟನು.

ಆಕಾಲದ ಶಿಕ್ಷಣವು ಈಗಿನಿಂದ ತೀರ ಭಿನ್ನವಾಗಿತ್ತು. ಆಗಿನ ಜನರು ತಮ್ಮ ಮನೆತನದ ಹೋರೆಗಳನ್ನು ಬಿಟ್ಟು, ಸರಕಾರದ ಕೆಲಸಗಳಿಗೆ ಹಂಬಲಿಸಿ ನಿರುದ್ಯೋಗಿಗಳಂತೆ ಕೆಲಸಬೇಕೆಂದು ಸರಕಾರಕ್ಕೆ ಅರ್ಜಿಗಳನ್ನು ಮಾಡುವುದರಲ್ಲಿಯೂ ಅಧಿಕಾರಿಗಳ ಮನೆಗೆ ಮಜ್ಜೆಹಱಿಯುವ ಸುದ್ದಿಯಿಲ್ಲದೆ ಎಡೆತಾಕುವುದರಲ್ಲಿಯೂ ತಮ್ಮ ಅಮೌಲ್ಯವಾದ ಆಯುಷ್ಯವನ್ನು ಪೋಲುಗಳೆಯುತ್ತಿದ್ದಿಲ್ಲ; ಮತ್ತು ಧರ್ಮಶ್ರದ್ಧೆಯಿಲ್ಲದವರಾಗಿ ಸುಳ್ಳುಕೆಲಸಗಳಿಂದ ನ್ಯಾಯಾಧಿಕಾರಿಗಳನ್ನು ದಣಿಸುತ್ತಿದ್ದಿಲ್ಲ. ಆಗ ಬ್ರಾಹ್ಮಣಬಾಲಕರು ಬ್ರಾಹ್ಮಣ್ಯಕ್ಕೆ ಅವಶ್ಯವಾದ ರುದ್ರಪವಮಾನ ಮುಂತಾದ ಕೆಲವು ಮಂತ್ರಗಳನ್ನೂ ಓದುಬರಹವನ್ನೂ ಕಲಿಯುತ್ತಿದ್ದರು. ಆದ್ದರಿಂದ ಸದಾಶಿವರಾವ ಮುಂತಾದ ನಾಲ್ವರು ಮಂತ್ರಗಳನ್ನೂ ಓದುಬರಹವನ್ನೂ ಕಲಿತುದಲ್ಲದೆ, ಕುದುರೆಯೇರುವುದನ್ನೂ ಕತ್ತಿ-ಡಾಲು-ತುಬಾಕಿಗಳ ಉಪಯೋಗವನ್ನೂ ಗೊತ್ತುಮಾಡಿಕೊಂಡರು.

ನಾನಾನು ದಷ್ಟಪುಷ್ಟನಿಲ್ಲದಿದ್ದರೂ ಚುರುಕುಬುದ್ಧಿಯವನಾಗಿದ್ದನು. ಅವನ ನಮ್ರತೆಯೂ ಚುರುಕತನವೂ ಎಲ್ಲ ಜನರ ಮನಸ್ಸನ್ನು ಎಳೆಕೊಂಡುದಲ್ಲದೆ, ಅವನ ತಮ್ಮನಾದ ಮೋರೋಬನ ಹೊಟ್ಟೆಕಿಚ್ಚನ್ನು ಹೆಚ್ಚಿಸಿದವು. ಆದ್ದರಿಂದ ಅವರೊಳಗೆ ಬಾರಿಬಾರಿಗೆ ವಾಸೆಯಾಟವಾಗುತ್ತಿತ್ತು. ಒಂದು ದಿನ ಅವರಿಬ್ಬರು ಕುದುರೆಗಳನ್ನು ತಿರುವಿಯಾಡುವಾಗ ಮೋರೋಬನು ಸಿಟ್ಟಿಗೆದ್ದು, ಅವನನ್ನು ಕುದುರೆಯಿಂದೆಳೆದು, ಕೆಡವಿ, ಮೆಯ್ಯುಹಣ್ಣಾಗುವಂತೆ ಹೊಡೆದನು. ಈನೋವಿನಿಂದ ನಾನಾನಿಗೆ ಮುಂದೆ ಎಷ್ಟೋ ದಿವಸ ಹಾಸಿಗೆ ಹಿಡಿದು ಮಲಗಿಕೊಳ್ಳಬೇಕಾಯಿತು!!*

---

* ಇದಕ್ಕೂ ಬಹಳೇ ಮೊದಲು ಅಂದರೆ ೧೭೫೧ರಲ್ಲಿ ಗದ್ರೆಮನೆತನದವಳಾದ ಯಶೋದಾಬಾಯಿಯೊಡನೆ ನಾನಾನ ಲಗ್ನವಾಯಿತು.

ನಾನಾನು ೧೫ ವರ್ಷದವನಿದ್ದಾಗ ಅವನಿಗೊಂದು ದೊಡ್ಡ ಸಂಕಟವೊದಗಿತು. ಅದೇನಂದರೆ, ಅವನ ತಂದೆಯಾದ ಜನಾರ್ದನ ಬಲ್ಲಾಳ ಫಡನವೀಸನು ರಘುನಾಥರಾವ ದಾದಾನ ಸಂಗಡ ದಂಡಿನೊಡನೆ ಹೋದಾಗ ನರ್ಮದೆಯ ಉತ್ತರದಲ್ಲಿ ತನಗಿದ್ದ ಹೊಟ್ಟೆ ಸೂಲಿಯ ಬೇನೆಯಿಂದ ಮಡಿದನು (ಶಕೆ ೧೬೭೮). ನಾವು ನಮ್ಮ ಹೆಂಗಸರಿಗೆ ಹೆಚ್ಚು ವಿದ್ಯವನ್ನು ಕಲಿಸದೆ ಇರುವದರಿಂದಲೂ ಅವರಿಗೆ ಹೆಚ್ಚು ಸ್ವಾತಂತ್ರ್ಯ ಕೊಡದ್ದರಿಂದಲೂ ಮನೆಯ ಒಡೆಯನು ಅಕಾಲಮರಣ ಹೊಂದಿದ ಕೂಡಲೆ ಉಳಿದವರ ತಾರುಂಬಳಿಯು ಎಷ್ಟು ಆಗುತ್ತದೆಂಬದನ್ನು ವಾಚಕರೇ ಊಹಿಸಬಹುದು. ರಖುಮಾಬಾಯಿಯು ಯಥಾರ್ಥವಾದ ಅಬಲೆಯು; ನಾನಾನು ಚಿಕ್ಕ ಹುಡುಗನು. ಮನೆಯಲ್ಲಿ ಉತ್ತಾಪಕರಾರೂ ಇದ್ದಿಲ್ಲ. ಇಂತಹ ಸ್ಥಿತಿಯಲ್ಲಿದ್ದ ಹುಡುಗರು ಉಂಡಿಗರಾಗುವದು ಸ್ವಾಭಾವಿಕವೇ ಸರಿ. ಆದರೆ ಸುದೈವದಿಂದ ನಾನಾನಿಗೆ ಪೇಶ್ವೆಯರ ಆಸರವಿತ್ತು. ಆದ್ದರಿಂದ ಆಕಾಲಕ್ಕೆ ಪೇಶ್ವೆಯನಾದ ನಾನಾಸಾಹೇಬನು ಈ ಚಿಕ್ಕ ನಾನಾನಿಗೆ ಫಡನವೀಸಿಯ ವಸ್ತ್ರಗಳನ್ನು ಕೊಟ್ಟು, ಅವನಿಂದ ಆದಷ್ಟು ಕೆಲಸ ತೆಗೆದುಕೊಳ್ಳಲಾರಂಭಿಸಿದನು; ಮತ್ತು ಮುಂದೆ ಕೆಲವು ದಿವಸಗಳ ಮೇಲೆ ಅವನನ್ನು ತನ್ನ ಸಂಗಡ ಕರೆದುಕೊಂಡು ಮೈಸೂರಿನ ಮೇಲೆ ದಂಡೆತ್ತಿ ಹೋದನು (ಶಕೆ ೧೬೭೯). ಇದೇ ನಾನಾನ ಮೊದಲಿನ ಪ್ರವಾಸವು; ಮತ್ತು ಇದೇ ವರ್ಷವೇ ಇಂಗ್ಲಿಷ-ರಾಜ್ಯ ಸ್ಥಾಪನೆಯ ಸಮೀಪಕಾರಣವಾದ ಪ್ಲಾಸಿಯ ಕದನವಾಯಿತು. ಆಕಾಲಕ್ಕೆ ಆಂಗ್ಲರು ಈಭರತಖಂಡದ ಸಾಮ್ರಾಜ್ಯವನ್ನೆಯ್ದುವರೆಂಬ ವಿಚಾರವು ಒಬ್ಬರ ಮನಸ್ಸಿನಲ್ಲಾದರೂ ಬಂದಿರಬಹುದೇ?

ಮುಂದೆ ಮೂರು ವರ್ಷಗಳ ವರೆಗೆ ಹೆಚ್ಚಿನಾವ ಸಂಗತಿಯೂ ಒದಗಲಿಲ್ಲ. ನಾನಾನಿಗೂ ಮೋರೋಬನಿಗೂ ಕೂಡಿಬಾರದ್ದರಿಂದ ಮನೆತನದ ಹಿರಿಯನಾದ ಬಾಬೂರಾವ ರಾಮಚಂದ್ರನು ಪಿತ್ರಾರ್ಜಿತ ಆಸ್ತಿಯನ್ನು ಇಬ್ಭಾಗಿಸಿ, ಒಂದು ಭಾಗವನ್ನು ನಾನಾನಿಗೊಪ್ಪಿಸಿದನು.

ಇ. ಸ. ೧೭೬೦-೧೭೬೧ ಈಯೆರಡು ವರ್ಷಗಳು ಪೇಶ್ವೆಯರ ಇತಿಹಾಸದಲ್ಲಿ ಬಲು ಹೆಸರಾದವು. ಮೊದಲನೆಯ ವರ್ಷದಲ್ಲಿ ಪೇಶ್ವೆಯು ಉದಯಗಿರಿಯಲ್ಲಿ ನಿಜಾಮನ ದಂಡನ್ನು ಮುರಿಬಡಿದು, ಜಯಭೇರಿಯನ್ನು ಹೊಡಿಸುತ್ತಾ ಪುಣೆಗೆ ತಿರುಗಿ ಬಂದು, ಸಂತೋಷಸಾಗರದಲ್ಲಿ ಮುಳುಗಿದನು. ಆದರೆ ಮುಂದಿನ ವರ್ಷ ತನ್ನ ದಂಡೂ ಕಲಿಗಳಾದ ದಳವಾಯಿಗಳೂ ಪ್ರೀತಿಯ ಆಪ್ತರೂ ಅಬ್ದಾಲಿಯೆಂಬ ಹೆಬ್ಬುಲಿಯ ಪಂಜರದ ಹೊಡತಕ್ಕೆ ಸಿಲುಕಿ ಒದ್ದಾಡಿ, ಅವನ ತುತ್ತುಗಳಾಗುವರೆಂಬ ವಿಚಾರವು ಆಕಾಲದ ಜನರ ಕನಸುಮನಸ್ಸಿನಲ್ಲಿಯಾದರೂ ಬಂದಿರಲಿಕ್ಕಿಲ್ಲವಲ್ಲ!! ಮನುಷ್ಯನು ಬಯಸುವದೊಂದು ದೇವರು ಮಾಡುವದು ಮತ್ತೊಂದು ಎಂಬ ಗಾದೆಯಂತೆ ಪೇಶ್ವೆಯು ತನ್ನ ಗೆಲವಿನಿಂದುಂಟಾದ ಆನಂದದ ಮಬ್ಬಿನಿಂದ ಎಚ್ಚರವಾಗಿ ನೋಡುವಷ್ಟರಲ್ಲಿ ತಾನು ಮೊದಲು ಮುಳುಗಿ ಉರುಳಾಡುವ ಸಂತೋಷಸಾಗರವು ಅತ್ಯಗಾಧವಾದ ದುಃಖಸಮುದ್ರವಾಗಿತ್ತು! ಅದು ಹೇಗಂದರೆ:—

೧೭೫೭ನೆಯ ಇಸವಿಯು ಪೇಶ್ವೆಯರ ಇತಿಹಾಸದಲ್ಲಿ, ಅದೇಕೆ, ನಮ್ಮ ಭರತಖಂಡದ ಇತಿಹಾಸದಲ್ಲಿ ಬಲುಹೆಸರಾದ ವರ್ಷವೆಂಬದು ವಾಚಕರಿಗೆಲ್ಲಾ ಗೊತ್ತಿರುವದು. ಇದೇ ವರ್ಷ ಇಂಗ್ಲಿಷರು ತಮ್ಮ ಸಾಮ್ರಾಜ್ಯದ ಬೀಜಾರೋಪಣವನ್ನು ಪಲಸಿಯೆಂಬೂರಲ್ಲಿ ಮಾಡಿದರು. ಇದೇ ವರ್ಷ ನಾನಾಸು ಪೇಶ್ವೆಯನ ಫಡನವೀಸನಾದನು; ಮತ್ತು ಇದೇ ಸುಮಾರಿಗೆ ಪೇಶ್ವೆಯನ ಕಕ್ಕನ ಮಗನಾದ ರಘುನಾಥರಾಯನು ನಾಮಶೇಷನಾದ ದಿಲ್ಲಿಯ ಬಾದಶಹನ ಮಂತ್ರಿಯಾದ ಮೀರಸಾಬುದ್ದೀನನ ಪಕ್ಷಹಿಡಿದು ಅವನ ವಿರೋಧಿಯಾದ ವಜೀಬುದ್ದೌಲನನ್ನು* ದಿಲ್ಲಿಯಿಂದೋಡಿಸಿ, ಪಂಜಾಬದಲ್ಲಿ ರಾಜದ್ರೋಹಿಯಾದ ಅಡಿನಾ ಬೇಗನೆಂಬವ

* ಕಂದಹಾರ ಅರಸನಾದ ಅಹಮ್ಮದಶಹಾ ಅಬ್ದಾಲಿಯು ಇವನನ್ನು ದಿಲ್ಲಿ ಬಾದಶಹನ ಮೀರಬಕ್ಷಿಯನ್ನು ಮಾಡಿ ಅವನಿಗೆ ಅಮೀರ-ಉಲ್-ಉಮರಾಯೆಂಬ ಬಿರುದನ್ನು ಕೊಟ್ಟು ಸ್ವದೇಶಕ್ಕೆ ತೆರಳಿದನು (೧೭೫೬).

ನಿಗೆ ನೆರವಾಗಲಿಕ್ಕೆ ಹೋದನು (೧೭೫೭). ಬಳಿಕ ರಘುನಾಥರಾಯನು ಅಬ್ದಾಲಿಯ ಕಯ್ಕೆಳಗಿನವನಾದ ಸರಹಿಂದದ ಸರಸುಬೇದಾರನನ್ನು ನೆರೆಸೋಲಿಸಿ, ಅಬ್ದಾಲಿಯೆಂಬ ಹುಲಿಯನ್ನು ಕೆಣಕಿ, ತನ್ನ ಆಶ್ರಿತನಾದ ಅಡಿನಾ ಬೇಗನನ್ನು ಮುಲ್ತಾನ ಲಾಹೋರಗಳ ಸರಸುಬೇದಾರನನ್ನು ಮಾಡಿ, ಸಾಬಾಜಿಯೆಂಬ ದಳವಾಯಿಯನ್ನು ಲಾಹೋರದಲ್ಲಿಯೂ ಸಿಂದೆಹೋಳಕರರನ್ನು ಮಾಳವದಲ್ಲಿಯೂ ಸಿಂದೆಜಯಪ್ಪನನ್ನು ದಿಲ್ಲಿಯಲ್ಲಿಯೂ ಇಟ್ಟು, ತಾನು ಪುಣೆಗೆ ತಿರುಗಿ ಬಂದನು (೧೭೫೮).

ಈಕಾಲಕ್ಕೆ ದಿಲ್ಲಿಯಲ್ಲಿ ೨ನೆಯ ಅಲಮ್‌ಗೀರನು* ಆಳುತ್ತಿದ್ದನು. ಅವನು ತನ್ನ ವಜೀರನ ವಿರುದ್ಧವಾಗಿ ಅಬ್ದಾಲಿಯೊಡನೆ ಸಂಚು ನಡಿಸಿದ್ದರಿಂದ ಆವಜೀರನು ಸಿಟ್ಟಿಗೆದ್ದು, ಅಲಮ್‌ಗೀರನನ್ನು ಕೊಲ್ಲಿಸಿ, ಅವರಂಗಜೇಬನ ಮೊಮ್ಮಗನಾದ ಶಹಾಜಹಾನನನ್ನು ಪಟ್ಟದ ಮೇಲೆ ಕುಳ್ಳಿರಿಸಿದನು. ಮರಾಟರ ಹಾವಳಿಯನ್ನೂ ಮೀರಶಾಬುದ್ದೀನನ ಪುಂಡಾಟವನ್ನೂ ನಜೀಬುದ್ದೌಲನ ಹಯರಾಣವನ್ನೂ ಕೇಳಿ ಅಬ್ದಾಲಿಯು ಕನಲ್ದು ಕೆಂಡಾಗಿ ದೊಡ್ಡ ದಂಡಿನೊಡನೆ ಪಂಜಾಬವನ್ನೊಳನುಗ್ಗಿದನು. ಸಾಬಾಜಿಯು ಪಲಾಯನ ಮಂತ್ರವನ್ನು ಜಪಿಸಲಾರಂಭಿಸಿದ್ದರಿಂದಲೂ ಸಿಂದೆಹೋಳಕರರು ಅವನಿಗೆ ನೆರವಾಗಲಿಕ್ಕೆ ಬಾರದ್ದರಿಂದಲೂ ಅಬ್ದಾಲಿಯು ಏನೂ ಅಡ್ಡಿಯಿಲ್ಲದೆ ದಿಲ್ಲಿಯ ವರೆಗೆ ಬಂದು, ಆವೂರ ಹತ್ತರ ಯಮುನಾ ನದಿಯನ್ನು ದಾಟಿ, ಸಿಂದೆದತ್ತಾಜಿಯ ದಂಡನ್ನು ಕೆಣಕಿ, ಅದನ್ನು ನೆರೆಸೋಲಿಸಿದನು. ಈಸುದ್ದಿಯನ್ನು ಕೇಳಿ ಹೋಳಕರನು ಹಿಂಜರಿದು ಸಿಕಂದರಕ್ಕೆ ಹೋಗಲು, ಅವನನ್ನು ಬೆನ್ನಟ್ಟಿದ ಅಬ್ದಾಲಿಯ ದಂಡು ಅವನನ್ನು ಅಲ್ಲೇ ಮುರಿಬಡಿಯಿತು (೧೭೬೦).

ಈಕಡುಕೆಟ್ಟ ಸುದ್ದಿಯನ್ನು ಕೇಳಿ ಪೇಶ್ವೆಯು ಎಚ್ಚತ್ತನು. ತುಸು ದಿವಸಗಳ ಹಿಂದೆ ನಿಜಾಮನನ್ನು **ಉದಯಗಿರಿಯ** ಕಾಳಗ

---

*ಈಯಲಮ್ಗೀರನ ಮಗನಾದ ಅಲ್ಲಿ ಗೋಹುರನು ಶಹಾ ಅಲಮ್ಮನೆಂಬ ಹೆಸರಿನಿಂದ ಮೀರಕಾಶಿಮನ ಪಕ್ಷಹಿಡಿದು ಇಂಗ್ಲಿಷರೊಡನೆ ಹೋರಾಡಿದನು. ಬಕಾರದ ಕಾಳಗದಲ್ಲಿ ಸೋತವನು ಇವನೇ (೧೭೬೪).

ದಲ್ಲಿ ಮುರಿಬಡಿದ ಸಂತೋಷವು ಒಮ್ಮೆಲೆ ಕಡಮೆಯಾಯಿತು. ತಮ್ಮ ಪೂರ್ವಜರು ಇಷ್ಟು ದಿವಸ ಪ್ರಯತ್ನಮಾಡಿ ಉತ್ತರಹಿಂದುಸ್ಥಾನದಲ್ಲಿ ದೊರಕಿಸಿದ ಕೀರ್ತಿಯು ಹೋಗುವ ಹೊತ್ತು ಬಂತೆಂದು ತೋರಲಾರಂಭಿಸಿತು. ಆದ್ದರಿಂದ ಪೇಶ್ವೆ ನಾನಾಸಾಹೇಬನು ವಿಶ್ವಪ್ರಯತ್ನದಿಂದ ಅಬ್ದಾಲಿಯನ್ನು ಈದೇಶದಿಂದ ಓಡಿಸಬೇಕೆಂದು ಸಂಕಲ್ಪಮಾಡಿ, ದಂಡಯಾತ್ರೆಯ ಜೋಡಣೆಯನ್ನು ಮಾಡಲಾರಂಭಿಸಿದನು. ಕೂಡಲೆ ೨೦,೦೦೦ ಸ್ವಾರರೂ ೧೦,೦೦೦ ಉಳಿದ ದಂಡಾಳುಗಳೂ ತೋಫುಖಾನೆಯೂ ಸಿದ್ಧವಾಯಿತು. ಪೇಶ್ವೆಯ ಚಿಗಪ್ಪನ ಮಗನಾದ ಸದಾಶಿವರಾವಭಾವು ಎಂಬವನು ಈದಂಡಿನ ಮುಖ್ಯದಳವಾಯಿಯಾಗಿ ನಿಯಮಿಸಲ್ಪಟ್ಟನು. ಅವನ ಸಂಗಡ ಪೇಶ್ವೆಯ ಹಿರಿಮಗನಾದ ವಿಶ್ವಾಸರಾಯನೂ ಬಳವಂತರಾವ ಮೇಂಧಳೆ, ಸಮಶೇರ ಬಹದ್ದೂರ, ನಾರೋಶಂಕರ (ರಾಜಾಬಹದ್ದೂರ), ವಿಠ್ಠಲರಾವ ವಿಂಚೂರಕರ, ತ್ರಿಯಂಬಕರಾವ ಪುರಂಧರೆ ಮುಂತಾದ ಸರದಾರರು ಭಾವುವಿನ ಸಂಗಡ ಹೋಗಲಿಕ್ಕೆ ಸಿದ್ಧರಾದರು.

ಈಯಟೋಕಾಟ ಸಿದ್ಧತೆಯನ್ನು ನೋಡಿ ನಾನಾಫಡನವೀಸನ ಮನಸ್ಸಿನಲ್ಲಿ ತಾನೂ ಆದಂಡಿನೊಡನೆ ಹೋಗಬೇಕೆಂಬ ಬುದ್ಧಿಯು ಹುಟ್ಟಿತು. ಅವನ ಉದ್ದೇಶವು ಕಾಳಗದಲ್ಲಿ ಕಲಿತನ ತೋರಿಸಬೇಕೆಂದಿದ್ದಿಲ್ಲ; ಆದರೆ ಆಜನಸಮುದಾಯದೊಡನೆ ಹೋಗಿ, ಉತ್ತರಹಿಂದುಸ್ಥಾನದಲ್ಲಿದ್ದ ದೊಡ್ಡ ದೊಡ್ಡ ಕ್ಷೇತ್ರಗಳನ್ನು ನೋಡಿ, ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿ, ದೇಹಸಾರ್ಥಕ್ಯವನ್ನು ಮಾಡಿಕೊಳ್ಳುವದೇ ಅವನ ಮುಖ್ಯ ಉದ್ದೇಶವಾಗಿತ್ತು. ಆದ್ದರಿಂದ ಅವನು ತನ್ನ ತಾಯಿ-ಹೆಂಡತಿಯರನ್ನು ಸಂಗಡ ಕರೆದುಕೊಂಡು, ಆದಂಡಿನೊಡನೆ ಯಾತ್ರೆಗೆ ಹೊರಟನು!!

ಭಾವುಸಾಹೇಬನು ನಾನಾನ ಮೇಲೆ ಬಹುಪ್ರೀತಿಯನ್ನು ಮಾಡುತ್ತಿದ್ದನು. ಆದ್ದರಿಂದ ಅವನು ಹಾದಿಯಲ್ಲಿ ನಾನಾನಿಗೆ ಆಮಶೌಚ ಹತ್ತಿದ್ದನ್ನು ಕಂಡು, ಅವನ ಇಚ್ಛೆಗನುಸರಿಸಿ ಪ್ರವಾಸ

ಮಾಡಿ ಮಥುರೆಗೆ ಬಂದು ಮುಟ್ಟಿದನು; ಆದರೆ ಅಲ್ಲಿ ಕೆಲಕಾಲ ಇರಬೇಕೆಂದು ನಾನಾನ ಮನಸ್ಸಿನಲ್ಲಿದ್ದುದರಿಂದ ಭಾವುಸಾಹೇಬನು ಅವನನ್ನು ಅಲ್ಲೇ ಬಿಟ್ಟು ತಾನು ಮುಂದೆ ಹೋದನು. ಇತ್ತ ನಾನಾನು ಆಕ್ಷೇತ್ರದಲ್ಲಿದ್ದ ಎಲ್ಲ ದೇವರ ದರ್ಶನ ತೆಗೆದುಕೊಂಡು, ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿ, ಕ್ಷೇತ್ರವಿಧಿಯನ್ನು ಮುಗಿಸಿಕೊಂಡು, ಸಾವಕಾಶವಾಗಿ ಹೊರಟು ದಿಲ್ಲಿಗೆ ಬಂದು ಭಾವುಸಾಹೇಬನನ್ನು ಕೂಡಿದನು.

ಭಾವುಸಾಹೇಬನು ಉದಯಗಿರಿಯ ಕಾಳಗದಿಂದ ಉಬ್ಬಿದ್ದರಿಂದಲೂ ಅವನಿಗೆ ಅನುಭವವು ಕಡಮೆಯಾದ್ದರಿಂದಲೂ ಅವನು ದಿಲ್ಲಿಯಲ್ಲಿ ಮಾಡಿದ ಅವಿಚಾರಕೃತ್ಯಗಳನ್ನೂ ಸುರಾಜಮಲ್ಲ, ಹೋಳಕರ ಮುಂತಾದ ಅನುಭವಿಕ ಸರದಾರರ ಆಲೋಚನೆಗಳನ್ನು ಕೇಳದೆ ಮನಸ್ಸಿಗೆಬಂದಂತೆ ನಡೆದು ದಂಡನ್ನು ಹಾಳುಮಾಡಿಕೊಂಡದ್ದನ್ನೂ ಇಲ್ಲಿ ವರ್ಣಿಸುವುದು ಅವಶ್ಯವಿಲ್ಲ*. ಏಕೆಂ

* ಈ ದಂಡಯಾತ್ರೆಯಲ್ಲಿ ಭಾವುಸಾಹೇಬನು ಮಾಡಿದ ತಪ್ಪುಗಳು ಕೆಳಗೆ ಬರೆದಂತೆ ಇರುತ್ತವೆ:—೧. ಉದಯಗಿರಿಯ ಗೆಲವಿನಿಂದ ಭಾವುಸಾಹೇಬನು ಸೊಕ್ಕಿಗೆ ಬಂದಿದ್ದನು. ೨. ಅವನು ಮೊದಲಿನ ಮರಾಟರ ಸಾದೆತನವನ್ನು ಬಿಟ್ಟು ಮೊಗಲರ ಅಟ್ಟಹಾಸಕ್ಕೆ ಮೆಚ್ಚಿದ್ದನು. ೩. ಮರಾಟರ ಮೊದಲಿನ ಯುದ್ಧಸಾಂಪ್ರದಾಯವು ಹಗೆಗಳು ಕಸುವುಳ್ಳವರಿದ್ದರೆ, ಅವರಿಗೆ ಇದುರಾಗದೆ ಅವರ ಸಾಮುಗ್ರಿಗಳನ್ನು ಹಾಳುಮಾಡುವುದೂ ತುಸು ಜನರು ಸಿಕ್ಕರೆ ಅವರನ್ನು ಕೆಣಕುವುದೂ ಆಗಿತ್ತು. ಭಾವುಸಾಹೇಬನು ಆಸಾಂಪ್ರದಾಯವನ್ನು ಬಿಟ್ಟು, ತನ್ನ ದಂಡಿನವರು ಕವಾಯತ ಕಲಿತವರೆಂಬ ಹೆಮ್ಮೆಯಿಂದ ಶತ್ರುಗಳಿಗಿದುರಾದನು. ೪. ಸುರಾಜಮಲ್ಲನ ಹಿತದ ಆಲೋಚನೆಯನ್ನು ಕೇಳದೆ ಅವನನ್ನು ಸಿಟ್ಟಿಗೆಬ್ಬಿಸಿ ಕಳಿಸಿಬಿಟ್ಟನು. ೫. ಹೋಳಕರ ಮುಂತಾದ ಅನುಭವಿಕ ಸರದಾರರ ಮನಸ್ಸನ್ನು ನೋಯಿಸಿದನು. ೬. ಪಾಣಿಪತದಲ್ಲಿ ತನ್ನ ಪಾಳಯದ ಸುತ್ತಲು ಖಂದಕವನ್ನು ಅಗಿಸಿ, ಪ್ರಸಂಗ ಬಿದ್ದಾಗ ತನ್ನ ದಂಡಿಗೆ ಹೊರಗೆ ಹೋಗಲಿಕ್ಕೆ ಬಾರದಂತೆ ಮಾಡಿಕೊಂಡನು. ೭. ಹಿಂದೆ ದಂಡನ್ನು ಕಾದಿಡದೆ ತನ್ನ ಎಲ್ಲ ದಂಡನ್ನು ಕಾಳಗಕ್ಕೊಯ್ದನು. ೮. ಅಯೋಧ್ಯೆಯ ನವಾಬನಾದ ಸುಜಾವುದ್ದೌಲನ ಮೇಲೆ ಪೂರ್ಣವಿಶ್ವಾಸವಿಟ್ಟು, ಅವನಿಗೆ ಮೇಲಿಂದ ಮೇಲೆ ಪತ್ರಬರೆಯುತ್ತಿದ್ದನು, ಮತ್ತು ಸುಜಾವುದ್ದೌಲನು ಆಪತ್ರಗಳನ್ನು ಅಬ್ದಾಲಿಗೆ ತೋರಿಸಿ, ಅವನ ಅನುಮತಿಯಂತೆ ಉತ್ತರ ಬರೆಯುತ್ತಿದ್ದನು. ೯. ವಿಶ್ವಾಸರಾಯನು ಮಡಿದ ಕೂಡಲೆ ಧೈರ್ಯತಾಳಿ ವಿಚಾರದಿಂದ ನಡೆಯದೆ, ಹೋಳಕರನಿಗೆ "ಕುಟುಂಬದವರನ್ನು ಕಾಪಾಡು" ಎಂದು ಹೇಳಿ, ತಾನು ಹುಚ್ಚನಂತೆ ಹಗೆಗಳ ಮೇಲೆ ಹರಿದು ಹೋದನು.

ದರೆ ಈಗದ್ದಲದಲ್ಲಿ ನಮ್ಮ ಚರಿತ್ರದ ನಾಯಕನ ಅಂಗವು ಬಲು ತುಸುವಿತ್ತು. ಪೇಶ್ವೆಯ ಈಯದ್ಭುತಸೇನೆಯನ್ನು ಹಾಳುಮಾಡಿದ ಹೆಸರಾದ ಪಾಣಿಪತದ ಕಾಳಗವು ಶಕೆ ೧೬೮೨ ಪೌಷಶುದ್ಧ ೮ಯ ದಿವಸವಾಯಿತು. ಆರಣಾಂಗಣದಲ್ಲಿ ಭಾವುಸಾಹೇಬನ ಹೆಂಡತಿಯು, ಮೇಂಧಳೆಯನ ಹೆಂಡತಿಯು, ನಾನಾನ ತಾಯಿ-ಹೆಂಡತಿಯರು ಮುಂತಾದ ಹಲವು ಹೆಂಗಸರು ಇದ್ದರು. ಅವರು ತಮ್ಮ ಗಂಡಂದಿರು ಮಡಿದುದನ್ನು ನೋಡಿ, ಆಕ್ರೋಶಮಾಡಿ ಉಳಿದ ದಂಡಿನವರನ್ನು ಕಂಗೆಡಿಸಿದರು. ಮೊದಲು ಮೇಂಧಳೆಯನು ಸತ್ತನು, ಬಳಿಕ ವಿಶ್ವಾಸರಾಯನು ಮಡಿದನು, ಕೊನೆಗೆ ಭಾವುಸಾಹೇಬನು ಕಾಣದಂತಾದನು.

ಈಕಾಳಗದಲ್ಲಿ ನಾನಾನು ಭಾವುಸಾಹೇಬನ ಹತ್ತರದಲ್ಲೇ ಇದ್ದನು. ಭಾವುಸಾಹೇಬನು ಕಣ್ಮರೆಯಾದ ಕೂಡಲೆ ಅವನು ರಣಭೂಮಿಯಿಂದ ಓಡಿ ಹೋಗಿ, ಉಡಿಗೆ-ತೊಡಿಗೆ-ಕುದುರೆಗಳನ್ನು ಬಿಟ್ಟು ಕಪ್ಪುವನ್ನು ಹಾಕಿಕೊಂಡು ಬೂದಿಯನ್ನು ಮೆಯ್ಗೆಲ್ಲ ಬಡಕೊಂಡು, ದಿನಾಲು ೧೦-೨೦ ಮೈಲು ನಡೆಯುತ್ತ, ಹಾದಿಯಲ್ಲಿ ಬಾರಿಯ ತಪ್ಪಲನ್ನು ತಿಂದು ಹಸಿವೆ ಹರಕೊಳ್ಳುತ್ತ ತೊಳಲಿ ಬಳಲಿ ಆಸತ್ತುಬೇಸತ್ತು ರೇವಡಿಯೆಂಬೂರಿಗೆ ಬಂದು ಮುಟ್ಟಿದನು. ಅಲ್ಲಿ ಕೆಲಗೃಹಸ್ಥರು ಅವನ ಆದರಾತಿಥ್ಯವನ್ನು ಚೆನ್ನಾಗಿ ಮಾಡಿದರು. ಅಲ್ಲಿರುವಾಗ ಅವನ ಹೆಂಡತಿಯಾದ ಯಶೋದಾಬಾಯಿಯು ಜಿಗನಿಗೆ ಸುರಕ್ಷಿತವಾಗಿ ಬಂದು ಮುಟ್ಟಿರುತ್ತಾಳೆಂದು ಸುದ್ದಿ ಬಂದುದರಿಂದ, ಅವನು ಅಲ್ಲಿಗೆ ಹೋದನು.* ಅಲ್ಲಿ ಕೆಲವು ದಿವಸ ನಿಂತು, ಬಳಿಕ ಅವನು ತನ್ನ ಹೆಂಡತಿಯೊಡನೆ ಹೊರಟು, ಡೀಗ-ಧೋಳಪುರಗಳ ಮೇಲೆ ಹಾಯ್ದು

---

*ತನ್ನ ತಾಯಿಯು ಪಾಣಿಪತದ ಕಾಳಗದಿಂದ ಓಡಿ ಹೋಗುವಾಗ ಹಾದಿಯಲ್ಲಿ ಕುದುರೆಯ ಮೇಲಿಂದ ಬಿದ್ದು ಸತ್ತಳೆಂಬ ಸುದ್ದಿಯು ನಾನಾನಿಗೆ ಜಗನಿಯಲ್ಲಿ ಹತ್ತಿತೆಂದು ಖರೆಯೆಂಬವರು ಬರೆಯುತ್ತಾರೆ. ಆದರೆ ಭಾವುಸಾಹೇಬನ ಬಖೈರಿನಲ್ಲಿ ಶತ್ರುಗಳು ಆಕೆಯನ್ನು ಹಿಡಕೊಂಡು ಹೋದರೆಂದು ಲೇಖವಿದೆ.

ಗ್ವಾಲ್ಹೇರಕ್ಕೆ ಬಂದು, ಪಾರ್ವತಿಬಾಯಿ ನಾನಾಫುರಂಧರೆ ಮಲ್ಹಾರಜಿ ಹೋಳಕರ ಮುಂತಾದವರೊಡನೆ ನಾನಾಸಾಹೇಬನು ಆ ಕಾಲಕ್ಕೆ ಪಾಳಯವನ್ನು ಹಾಕಿಕೊಂಡಿದ್ದ ಬರ್ಹಾಣಪುರಕ್ಕೆ ಬಂದು ಮುಟ್ಟಿದನು.

ಈಕಾಲಕ್ಕೆ ನಾನಾನ ಮನಸ್ಸಿನಲ್ಲಿ ವೈರಾಗ್ಯ ಹುಟ್ಟಿದಂತೆ ತೋರುತ್ತದೆ. ಆದ್ದರಿಂದ ಅವನು ಕಾಶೀವಾಸಮಾಡಲಿಕ್ಕೆ ಪೇಶ್ವೆಯುನ ಅಪ್ಪಣೆಯುನ್ನು ಪಡೆದು, ಟೋಂಕಕ್ಕೆ ಹೋದನು. ಆದರೆ ಅಷ್ಟರಲ್ಲಿ ನಾನಾಸಾಹೇಬನಿಗೆ ಜೇರಾಗಿರುತ್ತದೆಂದು ಪತ್ರಬಂದುದರಿಂದ, ಅವನು ತಿರುಗಿ ಪುಣೆಗೆ ಬಂದನು (ಶಕೆ. ೧೬೮೩ ಜ್ಯೇಷ್ಠ). ಈವೊದಲೇ ನಾನಾಸಾಹೇಬನು ತೀರಿಕೊಂಡುದರಿಂದ ಅವನ ಮಗನಾದ ಮಾಧವರಾಯುನಿಗೆ ಪೇಶ್ವೆಯ ವಸ್ತ್ರಗಳು ದೊರೆದವು (ಶ್ರಾವಣ).

ಇಷ್ಟು ದಿವಸ ಪೇಶ್ವೆಯರ ರಾಜ್ಯವು ಒಕ್ಕಟ್ಟಿನಿಂದ ನಡೆದಿತ್ತು; ಆದರೆ ಮಾಧವರಾಯುನು ಪಟ್ಟವೇರಿದಂದಿನಿಂದ ಪೇಶ್ವೆಯರ ಮನೆತನದಲ್ಲಿ ಜಗಳ ಹುಟ್ಟಿತು. ಮಾಧವರಾಯುನ ಕಕ್ಕನಾದ ರಘುನಾಥರಾಯುನು ಶೂರನೂ ಅನುಭವಿಯೂ ಆದರೂ ದೂರದೃಷ್ಟಿಯೂ ದೇಶಾಭಿಮಾನಿಯೂ ಆಗಿರಲಿಲ್ಲ. ಮಾಧವರಾಯುನಾದರೂ ಹೆಚ್ಚು ಸ್ವಾಭಿಮಾನಿಯೂ ಸಿಟ್ಟಿನವನೂ ಆಗಿದ್ದನು. ಆದಕಾರಣ ಇವರೊಳಗೆ ಒಬ್ಬನು ಮಾಡಿದ್ದು ಮತ್ತೊಬ್ಬನಿಗೆ ಸೇರದಂತಾಯಿತು. ಆದ್ದರಿಂದ ರಘುನಾಥರಾಯುನು ಸಿಟ್ಟಗೆದ್ದು, ತಾನು ನಡಿಸುತ್ತಿದ್ದ ಕಾರ್ಯಭಾರವನ್ನು ಬಿಟ್ಟು, ತನ್ನ ಅಣ್ಣನ ಮಗನ ಪಾರಪತ್ಯ-ಮಾಡುವ ಉದ್ದೇಶದಿಂದ ನಿಜಾಮನ ಆಶ್ರಯಕ್ಕೆ ಹೋಗಿ* ಅವನ ದಂಡಿನೊಡನೆ ಪುಣೆಯ ಮೇಲೆ ಸಾಗಿಬಂದನು. ಆಗ ಮಾಧವರಾಯುನ ಕಯ್ಕಾಲುಗಳು ತಣ್ಣಗಾದ್ದರಿಂದ ಅವನು ರಘುನಾಥರಾಯುನಿಗೆ ಶರಣುಹೋಗಿ, ಅವನಿಗೆ ತನ್ನ ರಾಜ್ಯವನ್ನು ಒಪ್ಪಿಸಿದನು.

---

* ಸಖಾರಾಮು ಭಗವಂತ ಬೋಕೀಲ (ಸಖಾರಾಮಬಾಪು) ತ್ರ್ಯಂಬಕ ವಿಶ್ವನಾಥ ಪೇಠೆ ಮುಂತಾದ ಗೃಹಸ್ಥರು ರಘುನಾಥರಾಯನ ಬೆನ್ನುಹತ್ತಿ ಹೋದರು.

ಇಲ್ಲಿಗೆ ಪೇಶ್ವೆಯರ ಮನೆಜಗಳದ ಮೊದಲನೆಯಂಕವು ಮುಗಿದಂತಾಯಿತು. ರಘುನಾಥರಾಯನಿಗೆ ಸರ್ವಾಧಿಕಾರವು ದೊರೆದ ಕೂಡಲೆ ಅವನು ತನ್ನ ವಿರೋಧಿಗಳಾದ **ಮೋರೋಬಾದಾದಾ** ನಿಂದ ಫಡನವೀಸಿಯ ಕೆಲಸವನ್ನು ತೆಗೆದು ಹಾಕಿ **ಚಿಂತೋವಿಠ್ಠಲ ರಾಯರೀಕ**ನೆಂಬವನಿಗೆ ಕೊಟ್ಟನು; ಮತ್ತು ಭವಾನರಾವ ಪ್ರತಿನಿಧಿ, ಗೋಪಾಳರಾವ ಪಟವರ್ಧನ, ನಿಂಬಾಳಕರ ಮುಂತಾದವರ ಉಂಬಳಿಗಳನ್ನು ಸೆಳೆದುಕೊಂಡನು. ಆದ್ದರಿಂದ ಇವರೆಲ್ಲರು ಹೋಗಿ ನಿಜಾಮನನ್ನು ಆಶ್ರಯಿಸಿದರು. ಆಕಾರಣ ನಿಜಾಮನು ಉಬ್ಬಿ, ಪೇಶ್ವೆಯನ ಮೇಲೆ ದಂಡೆತ್ತಿ ಬಂದು, ಗೋದಾವರೀತೀರದಲ್ಲಿದ್ದ ರಾಕ್ಷಸಭುವನವೆಂಬೂರಲ್ಲಿ ನೆರೆಸೋತು* ತಿರುಗಿಹೋದನು (೧೭೬೩).

ಈಕಾಳಗದಿಂದ ರಘುನಾಥರಾಯನ ಅಧಿಕಾರವು ಮುಗಿದಂತಾಯಿತು. ಮಾಧವರಾಯನು ಎಲ್ಲ ಅಧಿಕಾರವನ್ನು ತನ್ನ ಕಯ್ಯಲ್ಲಿ ತೆಗೆದುಕೊಂಡು, ರಘುನಾಥರಾಯನು ಕಸಕೊಂಡ ಎಲ್ಲ ಉಂಬಳಿಗಳನ್ನು ಅವರವರಿಗೆ ತಿರುಗಿ ಕೊಟ್ಟು, ನಾನಾನನ್ನು ಫಡನವೀಸಿಯ ಕೆಲಸಕ್ಕೆ ಮತ್ತೆ ನಿಯಮಿಸಿದನು. ನಾನಾನ ಮೇಲೆ ಪೇಶ್ವೆಯನ ಪ್ರೀತಿಯು ವಿಶೇಷವಾದ್ದರಿಂದ ದರಬಾರದಲ್ಲಿ ಅವನ ವರ್ಚಸ್ಸು ಬೆಳೆಯಿತು. ಅವನು **ತುಕೋಜಿ ಹೋಳಕರ, ಮಹಾದಾಜಿ ಸಿಂದೆ** ಇವರ ಮೇಲೆ ಉಪಕಾರಮಾಡಿದ್ದರಿಂದ ಅವರು ಅವನ ಗೆಳೆಯರಾದರು.

ಆದರೆ ನಾನಾನ ಈಯೋಗ್ಯೆಯು ಬಹಳ ದಿವಸ ನಡೆಯಲಿಲ್ಲ. ಏಕಂದರೆ ಮಾಧವರಾಯನು ಮುಂದೆ ಬಹುದಿವಸ ಬಾಳಲಿಲ್ಲ; ಅವನಿಗೆ ರಾಜಯಕ್ಷ್ಮವೆಂಬ ರೋಗವಾಗಿ ಅವನು ದಿನದಿನಕ್ಕೆ ಕ್ಷೀಣವಾಗುತ್ತಾ ನಡೆದನು. ಆದ್ದರಿಂದ ಅವನು ಇನ್ನು ಮುಂದೆ ತಾನು ಬದುಕುವದಿಲ್ಲೆಂದೆಣಿಸಿ, ಪುಣೆಯನ್ನು ಬಿಟ್ಟು **ಥೇವೂರೆಂ**ಬಲ್ಲಿಯ

* ಈ ಕಾಳಗಕ್ಕಿಂತ ಮೊದಲು ಸಖಾರಾಮ ಬಾಪು ಎಂಬವನು ಎಲ್ಲ ಪೇಶ್ವಾಯಿ ಸರದಾರರನ್ನು ಒಡಕೊಂಡುದರಿಂದ ಪೇಶ್ವೆಯನಿಗೆ ಗೆಲವು ಬಂತು.

ಗಣಪತಿಯ ಸಾನ್ನಿಧ್ಯದಲ್ಲಿ ಹೋಗಿ ನಿಂತನು. ಸಾಯುವ ಮುಂಚೆ ಅವನು ತನ್ನ ಎಲ್ಲ ಸರದಾರರನ್ನು ಕರಿಸಿ ಅಂದುದೇನಂದರೆ: – ನನ್ನ ಮೂರು ಬಯಕೆಗಳು ಪೂರ್ಣವಾಗದ್ದರಿಂದ ನನ್ನ ಜೀವವು ತೊಳಲಾಡುತ್ತದೆ. ಆ ಬಯಕೆಗಳಾವವೆಂದರೆ—೧, ಪಾಣಿಪತದ ಕಾಳಗದ ಸೇಡನ್ನು ಪೂರ್ಣವಾಗಿ ತೀರಿಸಿಕೊಳ್ಳುವದು; ೨, ಟೀಪುಸುಲ್ತಾನನ ಪಾರಪತ್ಯ ಮಾಡುವುದು; ೩, ನಾನು ಮಾಡಿದ ೨೫ ಲಕ್ಷ ರೂಪಾಯಿಯ ಸಾಲವನ್ನು ತೀರಿಸುವುದು. ಈ ಮಾತನ್ನು ಕೇಳಿ ಎಲ್ಲ ಸರದಾರರು ಒಬ್ಬರ ಮೋರೆಯನ್ನು ಮತ್ತೊಬ್ಬರು ಮಿಕಿಮಿಕಿ ನೋಡಲಾರಂಭಿಸಿದರು. ಆಗ ಎಲ್ಲರಿಗೂ ಆಶ್ಚರ್ಯವಾಗುವಂತೆ ನಾನಾನು ಸಾಲವನ್ನು ತೀರಿಸುವೆನೆಂದು ಹೇಳಿ, ತನ್ನ ಗೆಳೆಯನಾದ **ರಾಮಚಂದ್ರನಾಯಕ ಪರಾಂಜಪೆ** ಎಂಬವನ ನೆರವಿನಿಂದ ಮಾಧವರಾಯನು ಬರೆದುಕೊಟ್ಟ ಎಲ್ಲ ಸಾಲದ ಕಾಗದಗಳನ್ನು ತಿರುಗಿ ತರಿಸಿ ಅವನ ಕಣ್ಣ ಮುಂದೆ ಸುಡಿಸಿಬಿಟ್ಟನು. ಮುಂದೆ ತುಸು ದಿವಸದಲ್ಲೇ ಮಾಧವರಾಯನು ತೀರಿಕೊಂಡನು (ಶಕೆ. ೧೬೯೪ ಕಾ. ವ. ೮). ಬಳಿಕ ಅವನ ತಮ್ಮನಾದ **ನಾರಾಯಣರಾಯನು** ಪಟ್ಟವೇರಿದನು. ಅವನು ಚಿಕ್ಕವನಿದ್ದ ಕಾರಣ ರಘುನಾಥರಾಯನು ರಾಜ್ಯಕಾರ್ಯವನ್ನು ನಡಿಸಲಾರಂಭಿಸಿದನು.

ನಾರಾಯಣರಾಯನು ಪಟ್ಟವೇರಿದಂದಿನಿಂದ ಪೇಶ್ವೆಯರ ಮನೆಜಗಳದ ೨ನೆಯ ಅಂಕವು ಆರಂಭವಾಯಿತೆನ್ನಬಹುದು. ಏಕೆಂದರೆ ನಾರಾಯಣರಾಯನು ನಾನಾ ಮುಂತಾದವರನ್ನು ನಂಬದೆ **ಬಾಬಾಜಿ ಬರ್ವೆ** ಎಂಬೊಬ್ಬ ಕೀಳ್ತರದ ಮನುಷ್ಯನ ಮೇಲೆ ವಿಶ್ವಾಸವಿಟ್ಟು, ರಘುನಾಥರಾಯನನ್ನು ಮತ್ತೆ ಕಾವಲಿನಲ್ಲಿರಿಸಿದನು. ಆಗಲವನು ಸಿಟ್ಟಿಗೆದ್ದು ತನ್ನ ಕಯ್ಕೆಳಗಿನ ಜನರಿಗೆ ನಾರಾಯಣರಾಯನನ್ನು ಹಿಡಿಯಿರೆಂದು ಕಾಗದ ಬರೆದನು. ಅವನ ಹೆಂಡತಿಯಾದ **ಆನಂದಿಬಾಯಿ**ಯೆಂಬ ರಕ್ಕಸಿಯು ಹಿಡಿಶಬ್ದದ 'ಹಿ' ಅಕ್ಷರವನ್ನು 'ಹೊ' ಮಾಡಿಕೊಟ್ಟಳು. ಅದರಂತೇ ಆದಂಡಾಳುಗಳು ನಾರಾಯಣರಾಯನನ್ನು ಹಗಲೇಹಾಡು ಅರಮನೆಯಲ್ಲೇ ಕೊಂ

ದರು (೧೭೭೩ ಭಾ. ವ. ೧೩). ಬಳಿಕ ರಘುನಾಥರಾಯನು ಈ ಕೊಲೆಯ ಹದಿಮೂರನೆಯ ದಿವಸ ಪೇಶ್ವೆಯಾದನು. ಅವನು ತನ್ನ ವಿಶ್ವಾಸಿಕರಾದ **ಚಿಂತೋ ವಿಠ್ಠಲ** ಮುಂತಾದವರನ್ನು ಬೇರೆ ಬೇರೆ ಉದ್ಯೋಗಗಳಿಗೆ ನಿಯಮಿಸಿದ್ದರಿಂದ ನಾನಾ ಮುಂತಾದವರಿಗೆ ತಂತಮ್ಮ ಮನೆಗಳಲ್ಲಿ ಸ್ವಸ್ಥ ಕುಳ್ಳಿರಬೇಕಾಯಿತು.

ನಾರಾಯಣರಾಯನ ಈಕೆಟ್ಟ ಕೊಲೆಯಿಂದ ರಘುನಾಥರಾಯನು ಎಲ್ಲರಿಗೂ ಬೇಡಾದವನಾದನು. ನಾರಾಯಣರಾಯನು ಸತ್ತ ಹತ್ತನೆಯ ದಿವಸ ಪೇಶ್ವೆಯನ ಎಲ್ಲ ಆಪ್ತೇಷ್ಟರು ನೀರುಬಿಡಲಿಕ್ಕೆ ಸ್ಮಶಾನಕ್ಕೆ ಹೋದಾಗ, ನಾನಾಫಡನವೀಸ, ಸಖಾರಾಮಬಾಪು, ತ್ರ್ಯಂಬಕರಾವ ಮಾಮಾ, ಹರಿಪಂತ ಫಡಕೆ, ಈನಾಲ್ವರು ಕೂಡಿ, ನಾನಾಸಾಹೇಬನ ವಂಶದವರಿಂದ ಮಾತ್ರ ರಾಜ್ಯವನ್ನು ನಡಿಸಬೇಕು. ಮತ್ತು ದಾದಾಸಾಹೇಬನ ವಂಶದವರಿಗೆ ನಮಸ್ಕಾರ ಮಾಡಕೂಡದು ಎಂದು ಪಾರ್ಥಿವಲಿಂಗ ಮುಟ್ಟಿ ಆಣೆ ಮಾಡಿದರು. ಬಳಿಕ ನಾನಾನು ಒಂದು ದಿನ ಅರಮನೆಗೆ ಹೋದಾಗ ಸದಾಶಿವರಾವ ಭಾವುವಿನ ಮಡದಿಯಾದ **ಪಾರ್ವತಿಬಾಯಿಯು** ಹೇಳಿದ್ದೇನಂದರೆ—**ಗಂಗಾಬಾಯಿ** (ನಾರಾಯಣರಾಯನ ಹೆಂಡತಿ)ಯು ಈಗ ಎರಡು ತಿಂಗಳು ಬಸುರಿದ್ದಾಳೆ; ಆದ್ದರಿಂದ ರಘುನಾಥರಾಯನನ್ನು ಹಿಡಿದು, ಆಕೆಯ ಹೊಟ್ಟೆಯಲ್ಲಿ ಹುಟ್ಟುವ ಮಗುವನ್ನು ಪಟ್ಟದ ಮೇಲೆ ಕುಳ್ಳಿರಿಸುವ ಪ್ರಯತ್ನ ಮಾಡಿರಿ. ಈಯಪ್ಪಣೆಯ ಮೇರೆಗೆ ೧೨ ಜನ ಮುಖ್ಯ ಸರದಾರರು* ನಾನಾನ ಮನೆಯಲ್ಲಿ ಒಟ್ಟುಗೂಡಿ, ರಘುನಾಥರಾಯನು ಪುಣೆ ಬಿಟ್ಟು ಹೋದಕೂಡಲೆ ಅವನನ್ನು ಪಟ್ಟದಿಂದ ತಳ್ಳಿ, ಗಂಗಾಬಾಯಿಯ ಹೆಸರಲ್ಲಿ ರಾಜ್ಯವಾಳಬೇಕೆಂದು ಸಂಚುಮಾಡಿದರು.

ದೈವಯೋಗದಿಂದ ಈಸಂಚುಗಾರರು ಹುಡುಕುತ್ತಿದ್ದ ಸಂಧಿ

---

* ನಾನಾಫಡನವೀಸ, ಸಖಾರಾಮಬಾಪು ಬೋಕೀಲ, ತ್ರ್ಯಂಬಕರಾವ ಮಾಮಾ ಪೇಠೆ, ನಾರೋ ಅಪ್ಪಾಜಿ, ಬಾಪುರಾವ ಕೇಶವ, ವಿಸಾಜಿ ಕೃಷ್ಣ ಬಿನಿವಾಲೆ, ಅಪ್ಪಾಜಿ ಬಳವಂತ, ಕೃಷ್ಣಾಜಿ ಬಹಿರವ ಥತ್ತೆ, ಅಪ್ಪಾಜಿ ಪುರಂದರೆ, ಹರಿ ಬಲ್ಲಾಳ ಫಡಕೆ, ಆನಂದರಾವ ಪಾನಸೆ, ಖಾಸಗಿವಾಲೆ.

ಯು ಬೇಗನೆ ದೊರಕಿತು. ನಿಜಾಮು ಅಲ್ಲಿಯು ನಾರಾಯಣರಾಯನ ಕೊಲೆಯ ಸುದ್ದಿಯನ್ನು ಕೇಳಿ ಪೇಶ್ವೆಯನ ಊರುಗಳನ್ನು ಹಿಡಿದುಕೊಳ್ಳಲಾರಂಭಿಸಿದ್ದನು. ಆದ್ದರಿಂದ ರಘುನಾಥರಾಯನು ನಾನಾ ಬಾಪು ಮುಂತಾದವರನ್ನು ತನ್ನ ಸಂಗಡ ತೆಗೆದುಕೊಂಡು, ಅವನಿಗಿದುರಾಗಲಿಕ್ಕೆ ದಂಡೆತ್ತಿ ಹೊರಟನು. ಹಾದಿಯಲ್ಲಿ ಸಂಚುಗಾರರು ಏನಾದರೊಂದು ನೆವನ ಹೇಳಿ, ಪುಣೆಗೆ ತಿರುಗಿ ಬಂದು, ಗಂಗಾಪಾರ್ವತೀಬಾಯಿಯರನ್ನು ಪುರಂಧರಕ್ಕೆ ಕಳುಹಿ, ರಘುನಾಥರಾಯನ ಪಕ್ಷದವರನ್ನು ಕಾವಲಲ್ಲಿರಿಸಿ, ನಾನಾ ಬಾಪು ಇವರನ್ನು ಗಂಗಾಬಾಯಿಯ ಕಾರ್ಯಭಾರಿಗಳನ್ನು ಮಾಡಿದರು. ನಾಗಪೂರಕರ **ಸಾಬಾಜಿ ಭೋಸಲೆಯು** ಈಸಂಚುಗಾರರ ಪಕ್ಷವನ್ನು ಸ್ವೀಕರಿಸಿ ರಘುನಾಥರಾಯನ ಮೇಲೆ ದಂಡೆತ್ತಿ ಬರಲೊಡಂಬಟ್ಟನು.

ಅತ್ತ ರಘುನಾಥರಾಯನು ನಿಜಾಮುನನ್ನು ಶರಣು ಬರಮಾಡಿಕೊಂಡು, ಸಾಬಾಜಿಭೋಸಲೆಯನಿಗೆ ಇದುರಾಗಿ ತ್ರ್ಯಂಬಕರಾವಮಾಮಾನನ್ನು ಕೆಲದಂಡಿನೊಡನೆ ಕಳುಹಿ, ತಾನು ಹೈದರ ಅಲ್ಲಿಯ ವಿರುದ್ಧವಾಗಿ ಕರ್ನಾಟಕಕ್ಕೆ ಹೊರಟನು. ಆದರೆ ಅಷ್ಟರಲ್ಲಿ ಅವನಿಗೆ ಪುಣೆಯಲ್ಲಿ ನಡೆದ ಒಳಸಂಚಿನ ಸುದ್ದಿ ಹತ್ತಿದ್ದರಿಂದ ಅವನು ಕರ್ನಾಟಕಕ್ಕೆ ಹೋಗುವ ಆಲೋಚನೆಯನ್ನು ಬಿಟ್ಟು, ಪುಣೆಯ ಹಾದಿಯನ್ನು ಹಿಡಿದು, ಸಂಚುಗಾರರನ್ನು ಸೇರಿದ ತ್ರ್ಯಂಬಕರಾವಮಾಮಾನ ದಂಡನ್ನು ಪೂರ್ಣವಾಗಿ ಸೋಲಿಸಿದನು. ಆದರೆ ರಘುನಾಥರಾಯನ ದಂಡಿನ ಮುಖ್ಯ ಮುಖ್ಯ ಸರದಾರರು ಸಂಚುಗಾರರನ್ನು ಸೇರಿದ್ದರಿಂದ ಅವನು ಮುಂದೆ ಹೋಗಲೀಸದೆ **ಇಂದೂರಿಗೆ** ಓಡಿಹೋದನು.

ಇತ್ತ ಗಂಗಾಬಾಯಿಯು ಶಕೆ ೧೬೯೬ ವೈಶಾಖ ಶುದ್ಧ ೭ ದಿವಸ **ಪುರಂದರ**ದಲ್ಲಿ ಗಂಡುಮಗನನ್ನು ಹೆತ್ತಳು. ನಾನಾನು ಅವನಿಗೆ **ಸವಾಯಿ** (ಒಂದೂಕಾಲು) **ಮಾಧವರಾಯ**ನೆಂಬ ಹೆಸರನ್ನಿಟ್ಟು, ಸಾತಾರೆಯ ಮಹಾರಾಜನಿಂದ ಅವನಿಗೆ ಪೇಶ್ವೆಯ ವಸ್ತ್ರಗಳನ್ನು ಕೊಡಿಸಿದನು; ಈಸಂಗತಿಯಿಂದ ರಘುನಾಥರಾಯನ

ಆಶೆಗಳು ಕಡಮೆಯಾದರೂ ಅವನು ಧೈರ್ಯ ಬಿಡದೆ ಸಿಂದೆ-ಹೋಳಕರರ ದಂಡನ್ನು ತನ್ನ ಸಹಾಯಕ್ಕೆ ತೆಗೆದುಕೊಂಡು, ಪುಣೆಯ ಮೇಲೆ ಸಾಗಿ ಬಂದನು. ಆದರೆ ನಾನಾ ಬಾಪು ಇವರು ಸಿಂದೆ ಹೋಳಕರರನ್ನು ತಮ್ಮ ಕಡೆಗೆ ಒಡಕೊಂಡುದರಿಂದ ಅವನು ನಿರುಪಾಯನಾಗಿ ಗುಜರಾಥಕ್ಕೆ ಹೋದನು.* **ಹರಿಪಂತ ಫಡಕೆ** ಎಂಬ ಸಂಚುಗಾರರ ದಳವಾಯಿಯು ಅವನನ್ನು ಬೆನ್ನಟ್ಟಿದ್ದರಿಂದ ಅವನು **ಸುರತಕ್ಕೆ** ಹೋಗಿ, ಅಲ್ಲಿ ಇಂಗ್ಲಿಷರ ಮರೆಬಿದ್ದನು.

೧ನೆಯ ಬಾಜಿರಾಯನ ತಮ್ಮನಾದ **ಚಿಮಾಜಿಯಪ್ಪನು ಸಾಷ್ಟಿ** ನಡುಗಡ್ಡೆಯನ್ನು ಹಿಡಿದುಕೊಂಡಂದಿನಿಂದ ಇಂಗ್ಲಿಷರು ಅದನ್ನು ತಿರುಗಿ ತೆಗೆದುಕೊಳ್ಳಲಿಕ್ಕೆ ಹೊಂಚು-ಹಾಕಿಕೊಂಡು ಕುಳಿತಿದ್ದರು. ಪೇಶ್ವೆಯರ ಮನೆಜಗಳವು ಬಲಿತು ನಾರಾಯಣರಾಯನ ಕೊಲೆಯಾದ ಕೂಡಲೆ ಅವರು ಅದನ್ನು ಹಿಡಿದುಕೊಂಡು ಮುಂದೆ ಏನು ಮಾಡಬೇಕೆಂಬ ಎಣಿಕೆಯಲ್ಲಿರುವಾಗ ರಘುನಾಥರಾಯನು ಶರಣುಬಂದು, ತನಗೆ ನೆರವಾಗಿ ಪೇಶ್ವಾಯಿಯನ್ನು ಕೊಡಿಸಿದರೆ ಸಾಷ್ಟಿ ನಡುಗಡ್ಡೆಯನ್ನೂ ೧೯½ ಲಕ್ಷ ವಾರ್ಷಿಕೋತ್ಪನ್ನವುಳ್ಳ **ವಸಯಿ** ಪ್ರಾಂತವನ್ನೂ ದಂಡಿನ ವೆಚ್ಚಕ್ಕಾಗಿ ತಿಂಗಳೊಂದಕ್ಕೆ ೧⅔ ಲಕ್ಷ ರೂಪಾಯಿಗಳನ್ನೂ ಕೊಡುತ್ತೇನೆಂದು ಮಾತುಕೊಟ್ಟನು. ಆಗ ತೂಕಡಿಸುವವರಿಗೆ ಹಾಸಿಗೆ ಹಾಸಿಕೊಟ್ಟಂತಾಯಿತು. ಆದ್ದರಿಂದ ಮುಂಬಯಿ ಅಧಿಪತಿಯು ಈಮಾತಿಗೊಡಂಬಟ್ಟು, **ಕರ್ನಲ್ ಕೀಟಿಂಜನೆಂಬ** ದಳವಾಯಿಯೊಡನೆ ದಂಡುಕೊಟ್ಟು, ರಘುನಾಥರಾಯನಿದ್ದ ಸುರತಕ್ಕೆ ಅವನನ್ನು ಕಳುಹಿದನು. ಈದಂಡಿನವರು ಪೇಶ್ವೆಯನ ರಾಜ್ಯವನ್ನು ಹೊಕ್ಕು, ತಮಗೆ ಇದುರಾಗಲಿಕ್ಕೆ ಬಂದ ಹರಿಪಂತಫಡಕೆಯನ ದಂಡನ್ನು **ಆರಾಸವೆಂಬಲ್ಲಿ** ಸೋಲಿಸಿ,

---

* ರಘುನಾಥರಾಯನು ಗುಜರಾಥಕ್ಕೆ ಹೋಗುವಾಗ ತನ್ನ ಎರಡನೆಯ ಹೆಂಡತಿಯಾದ ಆನಂದೀಬಾಯಿಯು ತುಂಬಾ ಬಸುರಿದ್ದುದರಿಂದ ಆಕೆಯನ್ನು ಧಾರದಲ್ಲಿಟ್ಟು ಹೋದನು. ಮುಂದೆ ತುಸು ದಿವಸದಲ್ಲಿ ಆಕೆಯು ಕಡೆಯ ಪೇಶ್ವೆಯನಾದ ಬಾಜೀರಾಯನನ್ನು ಹೆತ್ತಳು.

ಮಳೆಗಾಲ ಬಂದುದರಿಂದ ಡಬಯಿಯೆಂಬಲ್ಲಿ ಪಾಳೆಯಹಾಕಿ ದರು.

ಈಕಾಲಕ್ಕೆ ವಾರನ್ ಹೇಸ್ಟಿಂಗ್ಸನೆಂಬವನು ಈದೇಶದ ಸರ್ವಾಧಿಪತಿಯಾಗಿದ್ದನು. ಮುಂಬಯಿಯಧಿಪತಿಯು ಹೂಡಿದ ಯುದ್ಧವು ಅವನ ಮನಸ್ಸಿಗೆ ಬಾರದ್ದರಿಂದ ಅವನು ಯುದ್ಧವನ್ನು ನಿಲ್ಲಿಸಬೇಕೆಂದು ಮುಂಬಯಿಸರಕಾರಕ್ಕೆ ಹುಕುಮುಕಳುಹಿ, ಕರ್ನಲ್ ಅಪ್ಟನ್ನನೆಂಬವನನ್ನು ಬಾಪು ನಾನಾ ಇವರೊಡನೆ ಮಾತಾಡಲಿಕ್ಕೆ ಪುರಂದರಕ್ಕೆ ಕಳುಹಿದನು. ಅವರ ನಡುವೆ ಮಾತುಕಥೆಗಳಾಗಿ ಕೆಳಗೆ ಬರೆದ ಒಪ್ಪಂದದ ಶರ್ತುಗಳು ಗೊತ್ತಾದವು:—

೧. ಪೇಶ್ವೆಯು ಸಾಷ್ಟಿ ನಡುಗಡ್ಡೆಯನ್ನು ಇಂಗ್ಲಿಷರಿಗೆ ಬಿಟ್ಟು ಕೊಡಬೇಕು, ಮತ್ತು ೩ಲಕ್ಷ ರೂಪಾಯಿ ಉತ್ಪನ್ನವಾಗುವ ಬಡೋಚಪ್ರಾಂತವನ್ನು ಇಂಗ್ಲಿಷರಿಗೆ ಒಪ್ಪಿಸಬೇಕು.

೨. ಇಂಗ್ಲಿಷರು ತಮ್ಮ ದಂಡನ್ನು ತಿರುಗಿ ಒಯ್ಯಬೇಕು, ಮತ್ತು ಒಂದು ತಿಂಗಳೊಳಗೆ ರಘುನಾಥರಾಯನು ತನ್ನ ದಂಡಿನವರನ್ನು ಮನೆಗೆ ಕಳಿಸಿಕೊಡುವಂತೆ ಮಾಡಬೇಕು.

೩. ರಘುನಾಥರಾಯನು ಪೇಶ್ವೆಯನ ಆಶ್ರಯದಲ್ಲಿರಲಿಕ್ಕೊಡಂಬಟ್ಟರೆ, ಅವನು ಕೋಪರಗಾವವೆಂಬಲ್ಲಿರಬೇಕು, ಮತ್ತು ಪೇಶ್ವೆಯು ಅವನ ಬೆಂಬಲವಾಗಿದ್ದ ೧೦೦೦ ಮಂದಿ ಸ್ವಾರರ ಸಂಬಳವನ್ನೂ ೨೦೦ ಮಂದಿ ಊಳಿಗದವರ ಸಂಬಳವನ್ನೂ ಕೊಡಬೇಕಲ್ಲದೆ ಅವನ ವೆಚ್ಚಕ್ಕಾಗಿ ತಿಂಗಳೊಂದಕ್ಕೆ ೨೫,೦೦೦ ರೂಪಾಯಿ ಕೊಡಬೇಕು.

೪. ಇಂಗ್ಲಿಷರು ರಘುನಾಥರಾಯನಿಗಾಗಲಿ ಉಳಿದ ಪೇಶ್ವೆಯನ ವಿರುದ್ಧ ಬಂಡುಗಾರರಿಗಾಗಲಿ ನೆರವಾಗ ಕೂಡದು.

ಈಯೊಪ್ಪಂದವು ಶಕೆ ೧೬೯೭ ಫಾಲ್ಗುಣ ಶುದ್ಧ ೧೧ ದಿವಸವಾಯಿತು.

ಇಷ್ಟು ದಿವಸ ನಾನಾನು ಉಳಿದ ಸರದಾರರೊಡನೆ ಆಲೋಚಿಸಿ ರಾಜಕಾರ್ಯವನ್ನು ಜರಗಿಸುತ್ತಿದ್ದನು. ಆದರೆ ಇನ್ನು ಮುಂ

ದೆ ಅವನು ಸ್ವಬುದ್ಧಿಯಿಂದ ಕೆಲಸ ನಡಿಸಿ ಹೆಸರುವಾಸಿಯಾಗುವ ಹೊತ್ತು ಬಂತು. ಅದು ಹೇಗಂದರೆ.—ಶಕೆ ೧೬೯೬ಲರಲ್ಲಿ ಹೈದರ ಅಲ್ಲಿಯ ಉರವಣಿಗೆಯು ಹೆಚ್ಚಾದ್ದರಿಂದ ಹರಿಪಂತ ಫಡಕೆಯು ಅವನ ಮೇಲೆ ದಂಡೆತ್ತಿ ಹೋದನು. ಅದೇ ಸಮಯದಲ್ಲಿ ಮಹಾದಾಜಿ ಸಿಂದೆಯು ಕೊಲ್ಹಾಪುರದವರನ್ನು ದಂಡಿಸಲಿಕ್ಕೆ ಹೋದನು. ಈಸಂಧಿಯನ್ನು ಸಾಧಿಸಿ ನಾನಾನ ಪ್ರತಿಸ್ಪರ್ಧಿಯಾದ ಮೋರೋಬನು ಸಖಾರಾಮ ಬಾಪು ಹೋಳಕರ ಮುಂತಾದವರನ್ನೊಡಗೊಂಡು, ನಾನಾನನ್ನು ಹಿಡಿಯಲಿಕ್ಕೂ ರಘುನಾಥರಾಯನನ್ನು ಮುಖ್ಯಕಾರ್ಯಭಾರಿಯನ್ನು ಮಾಡಲಿಕ್ಕೂ ಒಳಸಂಚು-ಮಾಡಿದನು. ಈಸುದ್ದಿಯು ನಾನಾನಿಗೆ ಹತ್ತಿದರೂ ಸಂಚುಗಾರರ ಪಾರಪತ್ಯ ಮಾಡುವಷ್ಟು ಶಕ್ತಿಯು ಅವನಲ್ಲಿದ್ದಿಲ್ಲ. ಆದ್ದರಿಂದ ಅವನು ತನ್ನನ್ನು ಹಿಡಿಯಲಿಕ್ಕೆ ಗೊತ್ತುಮಾಡಿದ ಹೊತ್ತಿಗಿಂತ ತುಸು ಮೊದಲೇ ಎರಡನೆಯವರಿಗೆ ತಿಳಿಸದೆ ಪುರಂದರಕ್ಕೆ ಹೊರಟು ಹೋದನು. ಮರುದಿವಸ ಅಂದರೆ ಫಾಲ್ಗುಣವದ್ಯ ೧೩ ದಿವಸ ಮೋರೋಬನು ಪುಣೆಯನ್ನು ಹೊಕ್ಕು ಎಲ್ಲ ರಾಜ್ಯಕಾರ್ಯಭಾರವನ್ನು ತನ್ನ ಕಯ್ಯಲ್ಲಿ ತೆಗೆದುಕೊಂಡನು. ಆಗ ದೀರ್ಘದೃಷ್ಟಿಯಾದ ನಾನಾನು ಹೆಚ್ಚು ದ್ವೇಷಬೆಳಿಸದೆ ಮೋರೋಬನೊಡನೆ ಸ್ನೇಹದ ಮಾತುಗಳನ್ನು ನಡಿಸಿ, ರಘುನಾಥರಾಯನನ್ನು ತಿರುಗಿ ಕರಿಸಿದರೆ ಎಲ್ಲರಿಗೂ ಕೇಡುಂಟೆಂದು ತಿಳಿಹೇಳಿ, ಸವಾಯಿ ಮಾಧವರಾಯನು ದೊಡ್ಡವನಾಗುವ ವರೆಗೆ ೧ ಮೋರೋಬಾ, ೨ ಸಖಾರಾಮ ಬಾಪು ೩ ಬಜಾಬಾ ಪುರಂದರೆ, ೪ ಚಿಂತೋ ವಿಠ್ಠಲ, ೫ ನಾನಾ ಈಮೇರೆಗೆ ಅಯ್ದು ಜನರು ಒಟ್ಟುಗೂಡಿ ರಾಜ್ಯವನ್ನು ನಡಿಸಬೇಕೆಂತಲೂ ತಾನು ಚಿಕ್ಕ ಪೇಶ್ವೆಯ ಸಂರಕ್ಷಕನಾಗಿ ಪುರಂದರದಲ್ಲೆ ಇರಬೇಕೆಂತಲೂ ಎಲ್ಲರನ್ನು ಒಡಂಬಡಿಸಿದನು. ಈಕಾಲಕ್ಕೆ ನಾನಾನು ತನ್ನ ಮನಸ್ಸಿನಲ್ಲಿ ಮಾಡಿದ ಹಂಚಿಕೆಯನ್ನು ಒಬ್ಬರಿಗೂ ತಿಳಿಯಗೊಡಲಿಲ್ಲ. ಮುಂದೆ ಕೆಲವು ದಿವಸಗಳಾದ ಬಳಿಕ ಅವನಿಗೆ ಅನುಕೂಲರಾದ ಫಡಕೆಸಿಂದೆಯರು ತಮ್ಮಿಬ್ಬರ ದಂಡುಗಳನ್ನು ಒಟ್ಟುಗೂ

ಡಿಸಿ ಪುರಂದರಕ್ಕೆ ಬಂದು, ಹೋಳಕರನನ್ನು ಒಡಕೊಂಡು ನಾನಾನ ಅಪ್ಪಣೆಯಂತೆ ಮೋರೋಬನನ್ನು ಹಿಡಿದು ಅಹಮ್ಮದನಗರದ ಲ್ಲಿಯೂ ಬಜಾಬಾ ಪುರಂದರೆಯನ್ನು ವಂದನವೆಂಬಲ್ಲಿಯೂ ಸೆರೆ ಯಲ್ಲಿಟ್ಟುದರಿಂದ ನಾನಾನು ಪೇಶ್ವೆಯರ ರಾಜ್ಯಕ್ಕೆ ಮತ್ತೆ ಮುಖ್ಯ ಸ್ಥನಾದನು (ಶಕೆ ೧೭೦೦ ಆಷಾಢವದ್ಯ ದ್ವಿತೀಯಾ).

ಇನ್ನು ಮುಂದೆ ಸವಾಯಿ ಮಾಧವರಾಯನ ದುರ್ಮರಣದ ವರೆಗೆ ನಾನಾನ ಚರಿತ್ರವೇ ಪೇಶ್ವೆಯರ ಇತಿಹಾಸವೆನ್ನಬಹುದು. ಈಯವಧಿಯಲ್ಲಿ ನಡೆದ ಎಲ್ಲ ಮಹತ್ವದ ಸಂಗತಿಗಳು ನಾನಾನ ವಿಚಾರದ ಫಲಗಳೇ ಸರಿ. ಆದ್ದರಿಂದ ನಾನಾನಲ್ಲಿ ದೀರ್ಘದೃಷ್ಟಿ ಕಾರ್ಯದಕ್ಷತಾ ಜನಸೌಹೃದಯ ಚಾತುರ್ಯ ಮುಂತಾದ ಗುಣ ಗಳು ಎಷ್ಟು ಮಟ್ಟಿಗೆ ಇದ್ದವೆಂಬದು ಅವನು ಮಾಡಿದ ಕೃತ್ಯಗಳಿಂದ ತಿಳಿದುಕೊಳ್ಳಬಹುದು.

ಪುರಂದರದ ಒಪ್ಪಂದವು ಸ್ವಾಭಾವಿಕವಾಗಿ ಮುಂಬಯಿ ಸರ ಕಾರದವರಿಗೆ ಸೇರಲಿಲ್ಲ. ಆದ್ದರಿಂದ ಅವರು ಸರ್ವಾಧಿಪತಿಯ ವಿರುದ್ಧವಾಗಿ ಇಂಗ್ಲಂಡಕ್ಕೆ ಬರೆಯಲು, ಅಲ್ಲಿಯ ಆಡಳತೆಗಾರರು ಸರ್ವಾಧಿಪತಿಗೆ ದೋಷಕೊಟ್ಟು ಬರೆದರು. ಇದರಿಂದ ಮುಂಬಯಿ ಯಧಿಪತಿಯು ಧೈರ್ಯಗೊಂಡು ಪುರಂದರದ ಒಪ್ಪಂದದಂತೆ ನಡೆ ಯದೆ, ಅದರ ಶರ್ತುಗಳ ವಿರುದ್ಧವಾಗಿ ಇಂಗ್ಲಿಷ ದಂಡನ್ನು ಸುರತ ಬಡೋಚಗಳಲ್ಲಿ ಯುದ್ಧದ ಸಿದ್ಧತೆಯಲ್ಲಿಟ್ಟನು; ರಘುನಾಥರಾಯ ನನ್ನು ಪೇಶ್ವೆಯ ಕಡೆಗೆ ಕಳುಹಲಿಲ್ಲ; ಮತ್ತು ತೋತಯಾಭಾವು ಎಂಬವನು ಕೊಂಕಣದಲ್ಲಿ ಬಂಡಾಯ-ಹೂಡಲು ಅವನಿಗೆ ಒಳ ಗಿಂದೊಳಗೆ ಅನುಕೂಲನಾದನೆಂಬ ಸಂಶಯವನ್ನು ನಾನಾನ ಮನಸ್ಸಿನಲ್ಲಿ ಹುಟ್ಟಿಸಿದನು. ಈಕಾರಣಗಳಿಂದ ನಾನಾನು ಇಂಗ್ಲಿ ಷರಿಗೆ ಕೊಡಲೊಪ್ಪಿದ ಪ್ರಾಂತವನ್ನು ಕೊಡಲಿಲ್ಲ. ಇದಲ್ಲದೆ ಅವ ನು ಪುಣೆಗೆ ಬಂದ ಫ್ರಾನ್ಸದ ವಕೀಲನಿಗೆ ಬಹಳ ಆದರಾತಿಥ್ಯ ತೋರಿಸಿದನು. ಆದ್ದರಿಂದ ಇಂಗ್ಲಿಷರು ಪೇಶ್ವೆಯನೊಡನೆ ಯುದ್ಧ

ಮಾಡಬೇಕೆಂದು ನಿಶ್ಚಯಿಸಿ, ಮುಂಬಯಿಯಿಂದ ಪನವೇಲ ಮಾರ್ಗವಾಗಿ ೪೦೦೦ ದಂಡನ್ನು ಕಳುಹಿದರು (ಶಕೆ ೧೭೦೨).

ಈಕಾಲಕ್ಕೆ ನಾನಾನು ಮಾಡಿದ ಪ್ರಯತ್ನವು ಹೊಗಳತಕ್ಕಂತಹದೇ ಸರಿ. ಅವನು ಮುಂಬಯಿಯಲ್ಲಿದ್ದ ವಕೀಲನಿಂದ ಇಂಗ್ಲಿಷರ ಎಲ್ಲ ವಿಚಾರಗಳನ್ನು ಮೊದಲೇ ಅರಿತುಕೊಂಡು, ಪೇಶ್ವೆಯನ ಎಲ್ಲ ಸರದಾರರಿಗೆ ತಂತಮ್ಮ ದಂಡಿನೊಡನೆ ದಸರೆಯ ದಿವಸ ಪುಣೆಗೆ ಬರಬೇಕೆಂದು ಅಪ್ಪಣೆಮಾಡಿ, ಇಂಗ್ಲಿಷರ ರಾಜ್ಯದ ಮೇರೆಯ ಮೇಲಿದ್ದ ಎಲ್ಲ ಕೋಟೆಗಳಿಗೆ ದಂಡಾಳುಗಳನ್ನೂ ಅನ್ನಯುದ್ಧಸಾಮಗ್ರಿಗಳನ್ನೂ ಕಳುಹಿದನು. ಇಂಗ್ಲಿಷರಿಗಿದುರಾಗಿ ರಣಾಂಗಣದೊಳಗೆ ಕಾದುವಷ್ಟು ಶಕ್ತಿಯು ಮರಾಟರಲ್ಲಿ ಇಲ್ಲೆಂಬದು ನಾನಾನಿಗೆ ಗೊತ್ತಿತ್ತು. ಆದ್ದರಿಂದ ಅವನು ತನ್ನ ಎಲ್ಲ ದಳವಾಯಿಗಳಿಗೆ ಇಂಗ್ಲಿಷರ ಮುಂದೆ ನಿಂತು ಕಾದಬಾರದೆಂತಲೂ ಅವರಿಗೆ ಅನ್ನಸಾಮಗ್ರಿಯು ಮುಟ್ಟದಂತೆ ಮಾಡಿ ಅವರನ್ನು ಹಣ್ಣುಮಾಡಬೇಕೆಂತಲೂ ಇದ್ದ ಊರನ್ನು ಬಿಟ್ಟು ಹಿಂತಿರುಗುವ ಪ್ರಸಂಗ ಬಂದರೆ ಆವೂರನ್ನು ಸುಟ್ಟು ಬಿಡಬೇಕೆಂತಲೂ ಸೂಚಿಸಿದನು.* ಸಹ್ಯಾದ್ರಿಯ ಘಟ್ಟದ ಪ್ರದೇಶದೊಳಗೆ ಮುಂಬಯಿ ದಂಡಿಗೂ ಪೇಶ್ವೆಯರಿಗೂ ಕೆಲದಿವಸ ಬಡದಾಟವಾದ ಬಳಿಕ, ಇಂಗ್ಲಿಷರು **ವಡಗಾವ**ವೆಂಬಲ್ಲಿ ಸೋತು ಶರಣುಬಂದರು (ಶಕೆ ೧೭೦೧ ಪೌಷ್ಯವದ್ಯ ೯).

ಈಯುದ್ಧದಲ್ಲಿ ನಮ್ಮ ಚರಿತ್ರನಾಯಕನ ಅಂಗವು ಬಲುತುಸು ಇದ್ದುದರಿಂದ ಮುಂಬಯಿಯ ದಂಡಿನ ಹಾಡನ್ನು ಮೇಲೆ ತುಸುದರಲ್ಲಿ ಹೇಳಿದಂತೆ, ಬಂಗಾಲದಿಂದ ಬಂದ ಇಂಗ್ಲಿಷರ ದೊಡ್ಡ ದಂಡು ಗುಜರಾಥದಲ್ಲಿ ಏನು ಮಾಡಿತೆಂಬದನ್ನಾದರೂ ಸ್ವಲ್ಪದರಲ್ಲಿ

---

* ಇಂಗ್ಲಿಷರು ಪುಣೆಯ ವರೆಗೆ ಸಾಗಿ ಬಂದರೆ ಪುಣೆಯನ್ನಾದರೂ ಸುಟ್ಟು ಬಿಡಬೇಕೆಂದು ನಾನಾನ ಮನಸ್ಸಿನಲ್ಲಿತ್ತೆಂಬದಾಗಿ ಅವನ ಚರಿತ್ರಕಾರರು ಬರೆಯುತ್ತಾರೆ. ಈ ಹಂಚಿಕೆಯೂ ರೂಸದೇಶದ ಬಾದಶಹನಾದ ಅಲೆಗ್ಝಾಂಡರನು ಹೆಸರಾದ ನೆಪೋಲಿಯನ್ ಬೊನಾಪಾರ್ಟನನ್ನು ಬಲೆಯಲ್ಲಿ ಹಿಡಿಯಲಿಕ್ಕೆ ೧೮೧೧ರಲ್ಲಿ ಮಾಡಿದ ಹಂಚಿಕೆಯೂ ಒಂದೇ ಆಗಿದ್ದವೆಂದು ಹೇಳಬಹುದು. ಆದರೆ ಇಂತಹ ಪ್ರಸಂಗವೇ ನಾನಾನಿಗೆ ಬರಲಿಲ್ಲ.

ಹೇಳಿದರೆ ಸಾಕಾಗುವದು. ಈದೊಡ್ಡ ದಂಡಿನ ಮುಖ್ಯಸ್ಥನು ಇಂಗ್ಲಿಷರ ಮುಖ್ಯ ದಳವಾಯಿಯಾದ ಕರ್ನಲ್ ಗೊಡಾರ್ಡನೆಂಬವನಿದ್ದನು. ಅವನು ಶೂರನೂ ಧೀರನೂ ವಿಚಾರಿಯೂ ಆದ್ದರಿಂದ ಹಾದಿಯಲ್ಲಿ ಭೋಸಲೆಯನ್ನು ತನ್ನ ಕಡೆಗೆ ಮಾಡಿಕೊಂಡು, ಹುಸೆಂಗಾಬಾದ-ಅವರಂಗಾಬಾದಗಳ ಮೇಲಿಂದ ಗುಜರಾಥವನ್ನು ಹೊಕ್ಕನು. ಈಕಾಲಕ್ಕೆ ಸಿಂದೆ-ಹೋಳಕರರು ವಡಗಾವದಲ್ಲಿ ಇಂಗ್ಲಿಷರನ್ನು ಸೋಲಿಸಿ ಅದೇ ಪುಣೆಗೆ ಬಂದಿದ್ದರು. ಅವರು ಗೊಡಾರ್ಡನು ದಂಡೆತ್ತಿಬಂದ ಸುದ್ದಿಯನ್ನು ಕೇಳಿ, ಅವನಿಗಿದುರಾಗಲಿಕ್ಕೆ ಹೊರಟರು.* ಅತ್ತ ಗೊಡಾರ್ಡನು ಫತ್ತೆಸಿಂಗ ಗಾಯಕವಾಡನನ್ನು ತನ್ನ ಕಡೆಗೆ ಮಾಡಿಕೊಂಡು, ಡಭಯಿ-ಅಹಮ್ಮದಾಬಾದಗಳನ್ನು ಹಿಡಿದುಕೊಂಡನು. ಆಗ ಸಿಂದೆಯನು ಅವನಿಗೆ ಇದುರಾಗಲಿಕ್ಕೆ ಧೈರ್ಯ ಸಾಲದೆ ಒಪ್ಪಂದದ ಮಾತುಗಳನ್ನು ನಡಿಸಿ ಹೊತ್ತುಗಳೆಯಲಾರಂಭಿಸಿದನು.

ಅಷ್ಟರಲ್ಲಿ ಪೇಶ್ವೆಯನಿಗೆ ಅನುಕೂಲವಾದ ಒಂದು ಸಂಗತಿಯು ವರ್ತಿಸಿತು. ನಾನಾನು ನಾಗಪುರ-ಹೈದರಾಬಾದ-ಶ್ರೀರಂಗಪಟ್ಟಣಗಳಿಗೆ ವಕೀಲರನ್ನು ಕಳುಹಿ ಭೋಸಲೆ, ಹೈದರ ಅಲ್ಲಿ, ನಿಜಾಮಅಲ್ಲಿ ಇವರನ್ನು ಇಂಗ್ಲಿಷರ ರಾಜ್ಯದ ಮೇಲೆ ದಂಡೆತ್ತಿ ಹೋಗಲಿಕ್ಕೊಡಂಬಡಿಸಿದನು. ಭೋಸಲೆ-ನಿಜಾಮರು ಮಾತುಕೊಟ್ಟಂತೆ ನಡೆಯದಿದ್ದರೂ ಹೈದರ ಅಲ್ಲಿಯು ಇಂಗ್ಲಿಷ ರಾಜ್ಯದೊಳಗೆ ದಾಳಿ ಮಾಡಿ, ಮದ್ರಾಸ ಸರಕಾರದವರನ್ನು ಜೇರಿಗೆ ತಂದನು. ಆದ್ದರಿಂ

---

* ವಡಗಾವದಲ್ಲಿ ಇಂಗ್ಲಿಷರು ಸೋತ ಬಳಿಕ ರಘುನಾಥರಾಯನು ಸಿಂದೆಯನಿಗೆ ಶರಣುಬಂದನು. ಮುಂದೆ ಸಿಂದೆಯು ಅವನನ್ನು ನಾನಾನಿಗೆ ಒಪ್ಪಿಸದೆ, ಝಾಶಿಯಲ್ಲಿ ಸೆರೆಯಿಡುವ ಉದ್ದೇಶದಿಂದ ತನ್ನ ದಿವಾನನೊಡನೆ ಅಲ್ಲಿಗೆ ಕಳುಹಲು, ಅವನು ಹಾದಿಯಲ್ಲಿ ತಪ್ಪಿಸಿಕೊಂಡು ಓಡಿಹೋಗಿ ಭಡೋಚದಲ್ಲಿದ್ದ ಇಂಗ್ಲಿಷರ ಮರೆಹೊಕ್ಕನು. ಸಿಂದೆಯನ ಸೆರೆಯಾಳಾಗಿ ಅವನ ವಶದಲ್ಲಿದ್ದ ಸಖಾರಾಮ ಬಾಪು ಬೋಕೀಲ, ಚಿಂತೋ ವಿಠ್ಠಲ ರಾಯರೀಕರ, ಸಖಾರಾಮ ಹರಿ ಪ್ರಭು ಮುಂತಾದವರನ್ನು ನಾನಾನು ತನ್ನ ಕಯ್ಯಲ್ಲಿ ತೆಗೆದುಕೊಂಡು, ಅವನಲ್ಲೆಬಡಿಸಿ ಸಾಯಗೊಟ್ಟುದರಿಂದ ತನ್ನ ಸ್ವಭಾವಕ್ಕೆ ಕುಂದುತಂದುಕೊಂಡನೆನ್ನ ಬಹುದು.

ದ ಮದ್ರಾಸದ ಅಧಿಪತಿಯು ಈಪೇಶ್ವೆಯರ ಯುದ್ಧವನ್ನು ಬೇಗನೆ ಮುಗಿಸಿ, ತನ್ನ ನೆರವಿಗೆ ದಂಡನ್ನು ಕಳುಹಿರೆಂದು ಅಂಗಲಾಚಿ ಬೇಡಿಕೊಳ್ಳಲಾರಂಭಿಸಿದನು. ಆದ್ದರಿಂದ ಗೊಡಾರ್ಡನು ಪುಣೆಯ ಮೇಲೆ ಸಾಗಿ ಹೋಗಿ, ಪೇಶ್ವೆಯರನ್ನು ಬೇಗನೆ ಹಣ್ಣಿಗೆ ತರಬೇಕೆಂಬ ಬಯಲಾಶೆಗೆ ಒಳಗಾಗಿ ಕೊಂಕಣಕ್ಕೆ ಹೋಗಿ ವಸಯಿಯನ್ನು ಹಿಡಿದುಕೊಂಡನು (ಶಕೆ ೧೭೦೩). ಆದರೆ ಕೊಂಕಣವು ಮರಾಟರ ಮನೆಯಾದ್ದರಿಂದಲೂ ಅಲ್ಲಿಯ ಹಳ್ಳತಿಟ್ಟುಗಳೆಲ್ಲ ಅವರ ಗೊತ್ತಿನವಾದ್ದರಿಂದಲೂ ಅವರು ಇಂಗ್ಲಿಷರಿಗೆ ಅನ್ನಸಾಮಗ್ರಿಯು ದೊರೆಯದಂತೆ ಮಾಡಿದರು. ಈಕಾರಣದಿಂದಲೂ ಮದ್ರಾಸದಲ್ಲಿ ಹೈದರ ಅಲ್ಲಿಯ ಹಾವಳಿಯು ಹೆಚ್ಚಾದ್ದರಿಂದಲೂ ಇಂಗ್ಲಿಷರು ಒಪ್ಪಂದ ಮಾಡಲಿಕ್ಕೆ ಆತುರ ಪಡಲಾರಂಭಿಸಿದರು. ಮೊದಲು ನಾನಾನು ಹೈದರ ಅಲ್ಲಿಯನ್ನು ಬಿಟ್ಟು ಒಪ್ಪಂದಮಾಡಲಿಕ್ಕೆ ಬರುವದಿಲ್ಲೆಂದು ತೋರಿಕೆಗೆ ಹೇಳಿ, ಇಂಗ್ಲಿಷರು ತುಸುಹೆಚ್ಚು ಅನುಕೂಲವಾದ ಶರ್ತುಗಳನ್ನು ಹೇಳಿದ ಕೂಡಲೆ ಮುಂದಿನ ಪರಿಣಾಮವನ್ನು ಲಕ್ಷ್ಯಕ್ಕೆ ತಾರದೆ, ಸಿಂದೆಯನ ಮಧ್ಯಸ್ಥಿಕೆಯಿಂದ ಅವರೊಡನೆ ಒಪ್ಪಂದಮಾಡಿಕೊಂಡನು.* ಈಯೊಪ್ಪಂದದ ಶರ್ತುಗಳು ಸಾಲ್ಬಾಯಿಯಲ್ಲಿ ಗೊತ್ತಾದ್ದರಿಂದ ಇದಕ್ಕೆ ಸಾಲ್ಬಾಯಿಒಪ್ಪಂದವೆನ್ನುತ್ತಾರೆ. ಇದು ಶಕೆ ೧೭೦೪ ಜ್ಯೇಷ್ಠಮಾಸದಲ್ಲಿ ಆಯಿತು. ಇದರಲ್ಲಿದ್ದ ೧೭ ಕಲಮುಗಳಲ್ಲಿ ಮುಖ್ಯವಾದವುಗಳಾವವೆಂದರೆ:—

೧. ಇಂಗ್ಲಿಷರು ಸಾಷ್ಟಿಯನ್ನು ತಮ್ಮ ಕಡೆಗೆ ಇಟ್ಟುಕೊಂಡು, ಯುದ್ಧದಲ್ಲಿ ಹಿಡಿದುಕೊಂಡ ಪೇಶ್ವೆಯರ ಎಲ್ಲ ಸ್ಥಳಗಳನ್ನು ಅವರಿಗೆ ತಿರುಗಿ ಕೊಡಬೇಕು.

---

* ಇದು ವಿಶ್ವಾಸಘಾತಕತನವಲ್ಲವೇ? ಈಸ್ವಾರ್ಥಸಾಧಕತನವು ನಾನಾನ ದೂರದೃಷ್ಟಿಗೆ ಕುಂದುತರುತ್ತದೆ. ಇದೇ ಕಾರಣದಿಂದ ಹೈದರ ಅಲ್ಲಿಯೂ ಅವನ ಮಗನಾದ ಟೀಪುಸುಲ್ತಾನನೂ ಪೇಶ್ವೆಯರನ್ನು ನಂಬದಂತಾದರು. ನಾನಾನ ಈ ಕೃತಿಯಿಂದ ಇಂಗ್ಲಿಷರ ಸಾಮ್ರಾಜ್ಯವುಂಟಾಯಿತೆಂಬದು ಸಂತೋಷದ ಸಂಗತಿಯಾದರೂ, ಈಕೃತಿಯು ನಾನಾನ ಜಾಣ್ಮೆಗೆ ಕಲಂಕ ತಾರದೆ ಬಿಡದು.

೨. ಪುರಂದರದ ಒಪ್ಪಂದದಲ್ಲಿ ಪೇಶ್ವೆಯನು ಇಂಗ್ಲಿಷರಿಗೆ ಕೊಡಲೊಪ್ಪಿದ ಬಡೋಚದ ೩ ಲಕ್ಷದ ಪ್ರಾಂತದ ಮೇಲಿನ ಹಕ್ಕನ್ನು ಇಂಗ್ಲಿಷರು ಬಿಟ್ಟುಕೊಡಬೇಕು.

೩. ಈಯುದ್ಧಕ್ಕಿಂತ ಮೊದಲು ಫತ್ತೆಸಿಂಗ ಗಾಯಕವಾಡನ ಕಡೆಗೆ ಇದ್ದಷ್ಟು ರಾಜ್ಯವು ಈಗಲೂ ಅವನ ಕಡೆಗೆ ಉಳಿಯಬೇಕು. ಆದರೆ ಪೇಶ್ವೆಯು ಕಳೆದ ೬ ವರ್ಷಗಳ ಖಂಡಣಿಯನ್ನು ಕೇಳಬಾರದು, ಮತ್ತು ಮುಂದೆ ಗಾಯಕವಾಡನು ಕಪ್ಪವನ್ನು ಕೊಡುವುದಲ್ಲದೆ ಮೊದಲಿನಂತೇ ಪೇಶ್ವೆಯು ಹೇಳಿದ ಕೆಲಸವನ್ನು ಮಾಡಬೇಕು.

೪. ಈಯೊಪ್ಪಂದದಿಂದ ೪ ತಿಂಗಳೊಳಗೆ ರಘುನಾಥರಾಯನು ಪೇಶ್ವೆಯ ಕಡೆಗೆ ಹೋಗಬೇಕು. ಅವನು ಹೋಗದಿದ್ದರೆ ಇಂಗ್ಲಿಷರು ಅವನಿಗೆ ತಮ್ಮ ರಾಜ್ಯದಲ್ಲಿ ಆಶ್ರಯಕೊಡಬಾರದು. ಅವನು ಸಿಂದೆಯನ ಆಸರಕ್ಕೆ ಹೋದರೆ ಪೇಶ್ವೆಯು ಅವನಿಗೆ ತಿಂಗಳಿಗೆ ೨೫೦೦೦ ರೂಪಾಯಿ ಕೊಡಬೇಕು. ಇದಲ್ಲದೆ ಯಾರಿಂದಲೂ ಅವನಿಗೆ ತ್ರಾಸವಾಗದಂತೆ ಏರ್ಪಾಡುಮಾಡಬೇಕು.

೫. ಪೇಶ್ವೆಯು ಹೈದರ ಅಲ್ಲಿಯಿಂದ ಅವನು ತೆಗೆದುಕೊಂಡ ಇಂಗ್ಲಿಷರ ಪ್ರಾಂತವನ್ನೂ ಆರ್ಕಾಟದ ನವಾಬನ ಪ್ರಾಂತವನ್ನೂ ತಿರುಗಿ ಕೊಡಿಸಬೇಕು.

೬. ಇಂಗ್ಲಿಷರೂ ಅವರ ಗೆಳೆಯರಾದ ಅರ್ಕಾಟ-ಅಯೋಧ್ಯೆಗಳ ನವಾಬರೂ, ಪೇಶ್ವೆಯೂ ಅವನ ಗೆಳೆಯರಾದ ಹೈದರ ಅಲ್ಲಿ ನಿಜಾಮ ಅಲ್ಲಿ ಭೋಸಲೆಯರೂ ಒಬ್ಬರು ಮತ್ತೊಬ್ಬರನ್ನು ನೋಯಿಸಬಾರದು.

೭. ಎರಡೂ ಪಕ್ಷದವರು ಈಯೊಪ್ಪಂದದ ಶರ್ತುಗಳನ್ನು ಪಾಲಿಸುತ್ತಾರೆಂಬ ಬಗ್ಗೆ ಮಹಾರಾಜ ಸುಬೇದಾರ ಮಾಧವರಾವ ಸಿಂದೆ ಬಹದ್ದೂರನು ಹೊಣೆಗಾರನಾಗಬೇಕು.

ಈಯೊಪ್ಪಂದದಿಂದ ರಘುನಾಥರಾಯನ ಆಟವು ಮುಗಿದಂತಾಯಿತು. ಆದ್ದರಿಂದ ಅವನು ನಿರುಪಾಯನಾಗಿ ಹೆಂಡತಿಮಕ್ಕ

ಳೊಡನೆ ಕೋಪರಗಾವದಲ್ಲಿ ಇರಲಾರಂಭಿಸಿದನು. ಆದರೆ ತಾನು ಸ್ವತಂತ್ರನಾಗಲಿಕ್ಕೆ ಮಾಡಿದ ಎಲ್ಲ ಪ್ರಯತ್ನಗಳು ವ್ಯರ್ಥವಾದವೆಂಬ ಹೃದ್ರೋಗದಿಂದ ನವಿದು ಅವನು ೧ ತಿಂಗಳಲ್ಲೇ ತೀರಿಕೊಂಡನು (ಶಕೆ ೧೭೦೫ ಮಾರ್ಗಶೀರ್ಷ ವದ್ಯ ೩). ಆಕಾಲಕ್ಕೆ ಆನಂದೀ ಬಾಯಿಯು ಬಸುರಿದ್ದಳು; ಮುಂದೆ ಆಗರ್ಭದಿಂದ **ಚಿಮಾಜಿ ಅಪ್ಪನು** ಹುಟ್ಟಿದನು.

ಈಕಾಲಕ್ಕೆ ನಾನಾನು ನಿರಂಕುಶನಾಗಿದ್ದನು. ಅವನ ವಿರೋಧಿಗಳಾದ ಸಖಾರಾಮ ಬಾಪು, ಚಿಂತೋ ವಿಟ್ಠಲ ಮುಂತಾದವರು ಪರಲೋಕವಾಸಿಗಳಾಗಿದ್ದರು, ಇಲ್ಲವೆ ಸೆರೆಮನೆಯಲ್ಲಿ ಕೊಳೆಯುತ್ತಿದ್ದರು. ಪೇಶ್ವೇನ ಮನೆಜಗಳದ ಮೂಲಕಾರಣವಾದ ರಘುನಾಥರಾಯನು ಪರಲೋಕವನ್ನೆಯ್ದಿದ್ದನು. ಚಿಕ್ಕ ಬಾಲಕನಾದ ಸವಾಯಿಮಾಧವರಾಯನೂ ಅವನ ತಾಯಿಯಾದ ಗಂಗಾಬಾಯಿಯೂ ನಾನಾನ ಅಂಕೆಯಲ್ಲೇ ಇದ್ದರು. ಇಂಗ್ಲಿಷರ ಯುದ್ಧವು ಮುಗಿದುದರಿಂದ ಪರಶತ್ರುಗಳ ಭಯವೇನೂ ಇದ್ದಿಲ್ಲ. ಈಯುದ್ಧದಲ್ಲಿ ಗಾಯಕವಾಡ-ಭೋಸಲೆಯುವರು ಪೇಶ್ವೇರ ಕಟ್ಟನ್ನು ಬಿಟ್ಟು, ಇಂಗ್ಲಿಷರ ಪಕ್ಷವನ್ನು ಸ್ವೀಕರಿಸಿದರು. ಶಿಂದೆನು ಪೇಶ್ವೇನಿಂದ ಸ್ವತಂತ್ರನೆಂಬದನ್ನು ಜಾಣರಾದ ಇಂಗ್ಲಿಷರು ಸಾಲ್ಬಾಯಿಯೊಪ್ಪಂದದ ಕಲಮಿನಲ್ಲೇ ಯುಕ್ತಿಯಿಂದ ಕಾಣಿಸಿದ್ದರು. ಬಲು ಇಕ್ಕಟ್ಟಿನ ಪ್ರಸಂಗದಲ್ಲಿ ನಾನಾನಿಗೆ ಅನುಕೂಲನಾಗಿ ಇಂಗ್ಲಿಷರನ್ನು ಹೆದರಿಸಿ, ಪೇಶ್ವೇರಿಗೆ ಅನುಕೂಲವಾದ ಒಪ್ಪಂದದ ಶರ್ತುಗಳಿಗೆ ಇಂಗ್ಲಿಷರನ್ನು ಒಡಂಬಡಿಸಲಿಕ್ಕೆ ಕಾರಣೀಭೂತನಾದ ಹೈದರಅಲ್ಲಿಯು ಸಾಲ್ಬಾಯಿಯೊಪ್ಪಂದಕ್ಕೆ ಎರಡೂ ಪಕ್ಷದವರು ರುಜುಹಾಕುವದಕ್ಕಿಂತ ಮೊದಲೇ **ಚಿತ್ತೂರ**ಲ್ಲಿ ತೀರಿಕೊಂಡಿದ್ದನು. ಆದ್ದರಿಂದ ದೇವರು ಒದಗಿಸಿಕೊಟ್ಟ ಈಶಾಂತತೆಯ ಕಾಲದಲ್ಲಿ ನಾನಾನು ತನ್ನ ಕಯ್ಯಲ್ಲಿ ಬಂದ ಪೇಶ್ವೇರ ರಾಜ್ಯವನ್ನು ಸ್ಥಿರಗೊಳಿಸಲಿಕ್ಕೆ ಏನಾದರು ಹಂಚಿಕೆ ಮಾಡಿದನೋ ಇಲ್ಲೋ, ಪ್ರಜೆಗಳ ಹಿತದ ಕೆಲಸಗಳನ್ನು ಮಾಡಿದನೋ ಇಲ್ಲೋ, ಪೇಶ್ವೇರ ಕಟ್ಟನಿಂದ ಹೊರಗೆ

ಹೋದ ಸರದಾರರನ್ನು ತಿರುಗಿ ಕಟ್ಟಿನೊಳಗೆ ಸೇರಿಸಿಕೊಳ್ಳಲಿಕ್ಕೆ ಏನಾದರು ಪ್ರಯತ್ನ ಮಾಡಿದನೋ ಇಲ್ಲೋ, ಮತ್ತು ತನ್ನ ಹೊತ್ತಿಗಾದ ದೇಶೀಯರಸರ ಉಪಕಾರವನ್ನು ತೀರಿಸಲಿಕ್ಕೆ ಏನಾದರೂ ಎತ್ತುಗಡೆಮಾಡಿದನೋ ಇಲ್ಲೋ ಎಂಬದನ್ನು ನೋಡಬೇಕಾಗಿದೆ.

ನಾನಾನು ತನಗೆ ಮುಖ್ಯಾಧಾರವಾದ ಚಿಕ್ಕ ಪೇಶ್ವೇನ ಮೇಲೆ ಜೀವಾಕೊಡುತ್ತಿದ್ದನು. ಸವಾಯಿಮಾಧವರಾಯನು ೩ ವರ್ಷದವನಿದ್ದಾಗ ಅವನ ತಾಯಿಯಾದ ಗಂಗಾಬಾಯಿಯು ತೀರಿಕೊಂಡಳು (೧೭೭೯ ಆಷಾಢಶುದ್ಧ ೮). ಮುಂದೆ ನಾನಾನು ಶಕೆ ೧೭೦೧ರಲ್ಲಿ ಚಿಕ್ಕ ಪೇಶ್ವೇನ ಮುಂಜಿಯನ್ನೂ ೧೭೦೪ರಲ್ಲಿ ಥತ್ತೆಮನೆತನದ ಹುಡುಗಿಯೊಡನೆ ಮದುವೆಯನ್ನೂ ಬಹುಸಮಾರಂಭದಿಂದ ಮಾಡಿಸಿದನು.

ಈಕಾಲಕ್ಕೆ ನಾನಾನು ಹಿಂದೆ ಆದ ಯುದ್ಧದಲ್ಲಿ ಮುರಿದು ಹೋದ ಪೇಶ್ವೇರ ಕಟ್ಟನ್ನು ಬಲಪಡಿಸಲಿಕ್ಕೆ ವಿಶ್ವಪ್ರಯತ್ನಮಾಡಿದ್ದರೆ, ಪೇಶ್ವೇನ ರಾಜ್ಯವು ಹೆಚ್ಚು ಸ್ಥಿರವಾಗುವ ಸಂಭವವಿತ್ತು. ಆಯುದ್ಧದಲ್ಲಿ ಮೇಲೆ ಬರೆದಂತೆ ಭೋಸಲೆಯು ಇಂಗ್ಲಿಷರಿಂದ ಲಂಚತೆಗೆದುಕೊಂಡು ತಟಸ್ಥನಾದನು. ಗಾಯಕವಾಡನಂತೂ ಇಂಗ್ಲಿಷರ ಪಕ್ಷಗಟ್ಟಿದನು; ಶಿಂದೆ ನಾನಾ ಇವರೊಳಗಾದರೂ ಪೂರ್ಣವಿಶ್ವಾಸವಿದ್ದಿಲ್ಲೆಂಬದು ಆಕಾಲದ ಅವರ ಪತ್ರವ್ಯವಹಾರದಿಂದಲೂ ನಡತೆಯಿಂದಲೂ ತಿಳಿಯುತ್ತದೆ. ಈಮೇರೆಗೆ ಪೇಶ್ವೇರ ಬಲವು ಕಟ್ಟುಹರಕು-ಪಂಜಾಗಿದ್ದುದನ್ನು ಸುಧಾರಿಸಿಕೊಳ್ಳಲಿಕ್ಕೆ ನಾನಾನು ಪ್ರಯತ್ನಮಾಡಿದ್ದರೆ ಒಳಿತಾಗುತ್ತಿತ್ತು. ಇಂಗ್ಲಿಷರು ನಿರುಪಾಯರಾಗಿ ಸಾಲ್ಬಾಯಿಯ ಒಪ್ಪಂದವನ್ನು ಮಾಡಿದರೆಂಬದೂ ಅವರು ಹೊತ್ತು ಸಿಕ್ಕಾಗ ಪೇಶ್ವೇರ ರಾಜ್ಯವನ್ನು ನುಂಗಲಿಕ್ಕೆ ಹೊಂಚುಹಾಕಿಕೊಂಡು ಕುಳಿತಿದ್ದರೆಂಬದೂ ಅವನಿಗೆ ಗೊತ್ತಿದ್ದ ಮಾತುಗಳೇ ಸರಿ. ಹೀಗಿದ್ದು ಅವನು ನಿಜಾಮ ಅಲ್ಲಿಯನ್ನು **ಯಾತಗೇರಿ**ಯೆಂಬಲ್ಲಿ ಕಂಡು (೧೭೦೬), ಇಂಗ್ಲಿಷರ ದ್ವೇಷಿಯೂ ತನಗೆ ಹೊತ್ತಿಗಾದ ಹೈದರ ಅಲ್ಲಿಯ ಮಗನೂ ಆದ ಟೀಪುಸುಲ್ತಾನನೊಡನೆ ಯುದ್ಧಹೂಡಬೇಕೆಂದು ನಿಶ್ಚಯಿಸಿದನು. ನಾನಾ-ಸು

ಲ್ತಾನರ ನಡುವಿದ್ದ ಅವಿಶ್ವಾಸವೂ ಸುಲ್ತಾನನ ಧರ್ಮಹಿಂಸೆಯೂ ಈಯುದ್ಧದ ಮುಖ್ಯಕಾರಣಗಳೆನ್ನಬಹುದು.

ಈವೊದಲು ಜಾಣರಾದ ಇಂಗ್ಲಿಷರಿಂದಾದರೂ ತುಸು ದಡ್ಡತನವಾಗಿತ್ತು. ಏಕಂದರೆ ಅವರು ಹೈದರ-ಅಲ್ಲಿ-ಟೀಪುಸುಲ್ತಾನರ ಹಾವಳಿಗೆ ಹೆದರಿ ಮರಾಟರೊಡನೆ ಒಪ್ಪಂದ ಮಾಡಿಕೊಂಡರು, ಮತ್ತು ಮರಾಟರ ಯುದ್ಧದಲ್ಲಿ ತೊಡಗಿದ ದಂಡು ಹೊತ್ತಿಗೆ ಬಂದು ಒದಗದ್ದರಿಂದ ಮದ್ರಾಸಸರಕಾರದವರು ಗಾಬರಿಯಾಗಿ ಸುಲ್ತಾನನೊಡನೆ ಮಂಗಳೂರಲ್ಲಿ ಒಪ್ಪಂದ ಮಾಡಿಕೊಂಡರು, ಆದ್ದರಿಂದ ಇಂಗ್ಲಿಷರು ತಾವು ಮಾಡಿದ್ದಕ್ಕೆ ಪಶ್ಚಾತ್ತಾಪಬಟ್ಟು ಸಂಧಿಸಿಕ್ಕರೆಯಾವದಾದರೊಂದು ಒಪ್ಪಂದ ಮುರಿಯಲಿಕ್ಕೆ ಹಾತೊರೆಯುತ್ತಿದ್ದರು. ಈಸಂಧಿಯನ್ನು ಮೈಸೂರಿನ ಹುಲಿಯೆಂದು ಕರೆಯಲ್ಪಡುತ್ತಿದ್ದ ಟೀಪುವು ತನ್ನ ಹುಂಬತನದಿಂದ ಬೇಗನೆ ತಂದು ಕೊಟ್ಟನು. ಅದು ಹೇಗಂದರೆ:—

ಮಂಗಳೂರಿನ ಒಪ್ಪಂದವಾದ ಕೂಡಲೆ ಟೀಪುಸುಲ್ತಾನನು ತನ್ನ ಮಾಂಡಲಿಕನೂ ನರಗುಂದದ ದೇಸಾಯಿಯೂ ಆದ ಕಲ್ಲಪ್ಪಯ್ಯನ ಮೇಲೆ ದಂಡೆತ್ತಿಹೋಗಿ, ಅವನಿಂದ ಹೆಚ್ಚು ಕಪ್ಪವನ್ನು ಬೇಡಿದನು. ಅದನ್ನು ಕೊಡಲಿಕ್ಕೆ ತ್ರಾಣವಿಲ್ಲದ್ದರಿಂದ ಅವನು ಪೇಶ್ವೇನ ಸಹಾಯವನ್ನು ಬೇಡಿದನು. ಆಗ ನಾನಾನು ಮೊದಲು ಸುಲ್ತಾನನಿಗೆ ಒಳ್ಳೆಯ ಮಾತಿನಿಂದ ಹೇಳಿನೋಡಿ, ಅದು ನಡೆಯದ್ದರಿಂದ ಪರಶುರಾಮಭಾವು ಪಟವರ್ಧನನೊಡನೆ ದೇಸಾಯಿಯ ಸಹಾಯಕ್ಕೆ ದಂಡನ್ನು ಕಳುಹಿದನು. ಆದರೆ ಸುಲ್ತಾನನು ಅದನ್ನು ಸೋಲಿಸಿದ್ದರಿಂದ, ನಾನಾನು ತುಕೋಜಿ ಹೋಳಕರನೊಡನೆ ದೊಡ್ಡ ದಂಡನ್ನು ಕಳುಹಿದನು. ಆಗ ಸುಲ್ತಾನನು ಹೆದರಿ, ಪೇಶ್ವೇನಿಗೆ ತಾನು ಕೊಡತಕ್ಕ ಕಪ್ಪವನ್ನು ೨೭ ದಿವಸಗಳೊಳಗೇ ಕೊಡಲೊಪ್ಪಿ, ಆದಂಡು ಹೋದ ಕೂಡಲೆ ನರಗುಂದವನ್ನು ಹಿಡಿದುಕೊಂಡು, ಕಲ್ಲಪ್ಪಯ್ಯನನ್ನು ಸೆರೆಹಿಡಿದು, ಅವನ ಚೆಲುವೆಯಾದ ಮಗಳನ್ನು ತನ್ನರಮನೆಯಲ್ಲಿರಿಸಿಕೊಂಡು, ಉಳಿದ ಅವನ ಕುಟುಂ

ಬದವರನ್ನು ಕೊಲ್ಲಿಸಿಬಿಟ್ಟನು. ಈವಿಶ್ವಾಸಘಾತಕತನವು ನಾನಾನ ದ್ವೇಷವನ್ನು ಹೆಚ್ಚಿಸಿತು.

ಈಸಮಯಕ್ಕೆ ನಾನಾನು ಇಂಗ್ಲಿಷರನ್ನು ಕೂಡಿಕೊಂಡು ಸುಲ್ತಾನನೊಡನೆ ಯುದ್ಧಮಾಡಬೇಕೆಂದು ಬಹಳ ಪ್ರಯತ್ನಮಾಡಿದನು; ಆದರೆ ಧೂರ್ತರಾದ ಇಂಗ್ಲಿಷರು ಅವನ ಮಾತಿಗೊಡಂಬಡಲಿಲ್ಲ. ಆದ್ದರಿಂದ ಅವನು ನಿಜಾಮುಅಲ್ಲಿ ಭೋಸಲೆ ಹೋಳಕರ ಇವರೆಲ್ಲರನ್ನು ಯಾತಗಿರಿಯೆಂಬಲ್ಲಿ ಒಟ್ಟುಗೂಡಿಸಿ, ಆದಂಡಿನೊಡನೆ ತಾನೂ ಹೊರಟನು. ಮೂರು ವಾರಗಳ ವರೆಗೆ ಮುತ್ತಿಗೆಯನ್ನು ತಾಳಿ **ಬಾದಾವಿ** ಕೋಟೆಯು ಪೇಶ್ವೇರ ಕಯ್ಸೇರಿತು.* ಬಳಿಕ ಕೂಡಿದ ದಂಡಿನ ಮುಖ್ಯದಳವಾಯಿಯಾದ **ಹರಿಪಂತ ಫಡಕೆಯು** ಸವಣೂರ ನವಾಬನನ್ನು ತನ್ನ ಕಡೆಗೆ ಮಾಡಿಕೊಂಡು, ಸಿರಹಟ್ಟಿ, ಗಜೇಂದ್ರಗಡ ಮುಂತಾದವುಗಳನ್ನು ಹಿಡಿದುಕೊಂಡನು. ಅಷ್ಟರಲ್ಲಿ ಇಂಗ್ಲಿಷರು ಸುಲ್ತಾನನೊಡನೆ ಯುದ್ಧಮಾಡುವ ಲಕ್ಷಣ ಕಂಡುದರಿಂದ ಸುಲ್ತಾನನು ೪೫ ಲಕ್ಷ ರೂಪಾಯಿಗಳನ್ನು ಕೊಡಲಿಕ್ಕೂ ಬಾದಾವಿ-ನರಗುಂದ-ಕಿತ್ತೂರುಗಳನ್ನು ಪೇಶ್ವೇನಿಗೆ ಬಿಡಲಿಕ್ಕೂ ಒಡಂಬಟ್ಟು, ಒಪ್ಪಂದಮಾಡಿಕೊಂಡನು (ಶಕೆ ೧೭೦೯ ಚೈತ್ರಮಾಸ.)

ಮೇಲೆ ಹೇಳಿದಂತೆ ಇಂಗ್ಲಿಷರು ಈಕಾಲಕ್ಕೆ ಸುಲ್ತಾನನೊಡನೆ ಯುದ್ಧಮಾಡಬೇಕೆಂದು ನಿಶ್ಚಯಿಸಿ, ಎಲ್ಲ ಕಡೆಯಿಂದ ಮದ್ರಾಸಕ್ಕೆ ದಂಡನ್ನು ಕಳುಹಲಾರಂಭಿಸಿದರು. ಅವರು ನಿಜಾಮನ ಸಹಾಯವನ್ನು ಕೇಳಲು, ಅವನು ಕೊಡಲೊಪ್ಪಿದನು.

---

* ಈಮುತ್ತಿಗೆಯು ನಡೆದಾಗ ನಾನಾನು ಒಂದು ದಿನ ರಾತ್ರಿ ವೇಷಬದಲಿಸಿಕೊಂಡು, ಪಾಳಯವನ್ನು ನೋಡುತ್ತಾ ನೋಡುತ್ತಾ ಪಟವರ್ಧನನ ಡೇರೆಗೆ ಬಂದನು. ಅಲ್ಲಿ ಎಲ್ಲ ಪ್ರಮುಖಸರದಾರರು ಚತುರಂಗವನ್ನಾಡುತ್ತ ಕುಳಿತಿದ್ದರು. ಆಗ ಪಟವರ್ಧನನು ನಾನಾನ ಗುರುತು ಹಿಡಿದುದರಿಂದ ಎಲ್ಲ ಸರದಾರರು ಹೆವರಿ, ಮರುದಿವಸ ವಿಶ್ವಪ್ರಯತ್ನಮಾಡಿ ಬಾದಾವಿಕೋಟೆಯನ್ನು ಹಿಡಿದುಕೊಂಡರಂತೆ. ಬಾದಾವಿಯು ಕಯ್ಸೇರಿದ ಬಳಿಕ ನಾನಾನು ಪುಣೆಗೆ ತಿರುಗಿಹೋದನು.

ಆದರೆ ನಾನಾನು ಈಕಟ್ಟನ್ನು ಸೇರಿದ್ದು ಸೋಜಿಗವಾದ ಮಾತೇ ಸರಿ. ಏಕಂದರೆ ಇಂಗ್ಲಿಷರು ಸುಲ್ತಾನನನ್ನು ಮುರಿಬಡಿದ ಕೂಡಲೆ ಉಳಿದವರಿಗೆ ಕಯ್ಹಚ್ಚುವರೆಂಬ ವಿಚಾರವು ಅವನ ಮನಸ್ಸಿನಲ್ಲಿ ಇದಕ್ಕೂ ಮೊದಲೇ ಬಂದಿತ್ತು.

ಈಮೈಸೂರಿನ ೨ನೆಯ ಯುದ್ಧವನ್ನು ಬೇರೆ ಕಡೆಯಲ್ಲಿ* ವಿವರಿಸಿರುವುದರಿಂದ ಇಲ್ಲಿ ಅದರ ಸಂಬಂಧದಿಂದ ಹೆಚ್ಚಿಗೆ ಬರೆಯುವದು ಅವಶ್ಯ ತೋರುವದಿಲ್ಲ. ಈಯುದ್ಧಕ್ಕಿಂತ ಮೊದಲು ನಾನಾ—ಇಂಗ್ಲಿಷರ ನಡುವೆ ಪುಣೆಯಲ್ಲಿ ಒಪ್ಪಂದವಾಯಿತು (ಶಕೆ ೧೭೧೨ ಜ್ಯೇಷ್ಠಮಾಸ). ಈಯೊಪ್ಪಂದದಂತೆ ನಾನಾನು ಪೇಶ್ವೇನ ದಂಡನ್ನು ಇಂಗ್ಲಿಷರೊಡನೆ ಶ್ರೀರಂಗಪಟ್ಟಣಕ್ಕೆ ಕಳುಹಿದನು. ಮರುವರುಷ **ಮಹಾದಾಜಿ ಶಿಂದೆಯು** ಮೋಗಲ್‌ಬಾದಶಹನನ್ನು ತನ್ನ ಅಂಕಿತನನ್ನು ಮಾಡಿಕೊಂಡು, ದಂಡಿನೊಡನೆ ಪುಣೆಗೆ ಬರುತ್ತಾನೆಂಬ ಸುದ್ದಿಯನ್ನು ಕೇಳಿ, ನಾನಾನು ಹೆದರಿ, ಶ್ರೀರಂಗಪಟ್ಟಣದಲ್ಲಿದ್ದ ಪೇಶ್ವೇನ ದಳವಾಯಿಯಾದ ಹರಿಪಂತ ಫಡಕೇನಿಗೆ ಬೇಗನೆ ಯುದ್ಧಮುಗಿಸಿ ಬರಲಿಕ್ಕೆ ಕಾಗದಬರೆದನು. ಈ ಹರಿಪಂತನ ಮಧ್ಯಸ್ಥಿಕೆಯಿಂದ ಸುಲ್ತಾನನಿಗೂ ಇಂಗ್ಲಿಷರಿಗೂ ಒಪ್ಪಂದವಾಯಿತು (ಶಕೆ ೧೭೧೩ ಮಾಘವದ್ಯ ೫). ಈಯೊಪ್ಪಂದದಿಂದ ಪೇಶ್ವೇನಿಗೆ ಕೃಷ್ಣಾ-ವರ್ಧಾನದಿಗಳ ನಡುವಿನ ಪ್ರದೇಶವೂ ೫೦ ಲಕ್ಷ ರೂಪಾಯಿಗಳೂ ದೊರಕಿದವು.

ನಾನಾನ ಅಪ್ಪಣೆಯಂತೆ ಹರಿಪಂತನು ಶಕೆ ೧೭೧೪ ಚೈತ್ರಮಾಸದಲ್ಲಿ ಪುಣೆಗೆ ಬಂದು ಮುಟ್ಟಿದನು; ಮಹಾದಾಜಿಶಿಂದೆಯು ಮುಂದೆ ೨ ತಿಂಗಳ ಮೇಲೆ ಅಂದರೆ ಜ್ಯೇಷ್ಠಮಾಸದಲ್ಲಿ ಪುಣೆಗೆ ಬಂದು ಸಂಗಮದ ಮೇಲೆ ಇಳಕೊಂಡನು. ಅವನು ಬರುವಾಗ ಮೋಗಲ್‌ಬಾದಶಹನಿಂದ **ಮಹಾರಾಜಾಧಿರಾಜನೆಂಬ** ಬಿರುದನ್ನೂ ವಸ್ತ್ರಗಳನ್ನೂ ಪೇಶ್ವೇನಿಗೆ ಕೊಡಲಿಕ್ಕೆ ತಂದಿದ್ದನು. ಆದ್ದರಿಂದ ಅವನು ಆಷಾಢಶುದ್ಧ ತ್ರಯೋದಶಿಯು ದಿವಸ ಈಬಿರು

* ಮುಂದೆ ಕೊಟ್ಟ ಟೀಪುಸುಲ್ತಾನನ ಚರಿತ್ರ ನೋಡಿರಿ.

ದನ್ನೂ ವಸ್ತ್ರಗಳನ್ನೂ ಬಹುಸಮಾರಂಭದಿಂದ ಪ್ರಾಯದ ಪೇಶ್ವೇನಿಗೆ ಅರ್ಪಿಸಿದನು.*

ಈಸಮಾರಂಭವಾದ ಬಳಿಕ ಮಹದಾಜಿಯು ತನ್ನ ರಾಜ್ಯಕ್ಕೆ ಹೋಗದೆ ಪುಣೆಯಲ್ಲೇ ನಿಂತುಕೊಂಡನು. ಅವನ ಮನಸ್ಸಿನಲ್ಲಿ ತನ್ನ ಉತ್ತರಹಿಂದುಸ್ಥಾನದ ದಂಡಯಾತ್ರೆಯ ವೆಚ್ಚವನ್ನು ಪೇಶ್ವೇನು ಕೊಡಬೇಕೆಂಬದಿತ್ತು. ಆದರೆ ನಾನಾನು ಈಮಾತಿಗೊಪ್ಪಲಿಲ್ಲ. ಆದಕಾರಣ ಮಹಾದಾಜಿಯು ಪೇಶ್ವೇನ ರಾಜಕಾರ್ಯವನ್ನು ನಾನಾನಿಂದ ಬಿಡಿಸಿ ತನ್ನ ಕಯ್ಯಲ್ಲೇ ತೆಗೆದುಕೊಳ್ಳಬೇಕೆಂಬ ಉದ್ದೇಶದಿಂದ ಸವಾಯಿಮಾಧವರಾಯನ ಒಲುಮೆಯನ್ನು ಸಂಪಾದಿಸಲಿಕ್ಕೆ ಎತ್ತುಗಡೆಮಾಡಲಾರಂಭಿಸಿದನಂತೆ. ಆದರೆ ಕೃತಜ್ಞನಾದ ಪೇಶ್ವೇನು ಅವನ ಬಿನ್ನಹವನ್ನು ಆಲಿಸಲಿಲ್ಲವಂತೆ. ಮುಂದೆ ತುಸು ದಿವಸದಲ್ಲೇ ಮಹಾದಾಜಿಯು ವನವಾಡಿಯೆಂಬಲ್ಲಿ ನವಜ್ವರದಿಂದ ಮಡಿದನು (ಶಕೆ ೧೭೧೫ ಮಾಘಶುದ್ಧ ೧೩).†

ನಮ್ಮ ಜನರಲ್ಲಿ ಪರಕೀಯರ ಭಯವು ಹೋದಕೂಡಲೆ ತಂತಮ್ಮೊಳಗೆ ಜಗಳಾಡಿ ಆತ್ಮಘಾತವನ್ನು ಮಾಡಿಕೊಳ್ಳುವ ದುರ್ಗುಣವು ಬಹುದಿವಸದಿಂದ ನೆಲೆಗೊಂಡಿರುತ್ತದಷ್ಟೇ. ಈಗುಣಕ್ಕನುಸರಿಸಿ ಇಂಗ್ಲಿಷ-ಸುಲ್ತಾನರೊಡನೆ ನಡೆದ ಯುದ್ಧಗಳು ಮುಗಿದ ಕೂಡಲೆ ಪೇಶ್ವೆ-ನಿಜಾಮಅಲ್ಲಿಗಳೊಳಗೆ ಯುದ್ಧವಾರಂಭವಾಯಿತು. ನಿಜಾಮಅಲ್ಲಿಯು ಪೇಶ್ವೇನಿಗೆ ಕೊಡಬೇಕಾದ ಹಿಂದಿನ ೧೦ ವರ್ಷಗಳ ಕಪ್ಪವು ಬರಲಿಲ್ಲೆಂತಲೂ ಒಂದು ದಿನ ಸವಾಯಿಮಾಧವರಾವ, ನಾನಾ ಇವರ ಸೋಗುಗಳು ನಾಟಕದಲ್ಲಿ ಬಂದವೆಂತಲೂ ಪೇಶ್ವೇನು ಸಿಟ್ಟಾದನು. ಪೇಶ್ವೇನು ನಿಜಾಮನ ರಾಜ್ಯಕ್ಕೆ ಸೇರಿದ

---

* ತಿಂದೇನ ಈಯಾಲೋಚನೆಗೆ ನಾನಾನು ಸಾತಾರೆಯ ಮಹಾರಾಜನಿಗೆ ಸಿಟ್ಟುಬರಬಹುದೆಂದು ಅಡ್ಡಿ ತೋರಿಸಿದನು. ಆದ್ದರಿಂದ ಮಹಾದಾಜಿಯು ಮಹಾರಾಜನ ಅಪ್ಪಣೆಯನ್ನು ತರಿಸಿ ಪೇಶ್ವೇನಿಗೆ ಬಿರುದನ್ನು ಅರ್ಪಿಸಿದನು.

† ಮುಂದೆ ಶಕೆ ೧೭೧೬ ಜ್ಯೇಷ್ಠಮಾಸದಲ್ಲಿ ಹರಿಪಂತಫಡಕೆಯು ಹೊಟ್ಟೆಸೂಲೆಯ ಬೇನೆಯಿಂದ ತೀರಿಕೊಂಡನು.

ವಿಜಾಪುರ-ಖಾನದೇಶಗಳನ್ನು ತೆಗೆದುಕೊಂಡನೆಂದು ನಿಜಾಮನು ಅಲ್ಲಿಯೂ ಮುನಿದನು. ಆದ್ದರಿಂದ ನಾನಾನು ಚಿಕ್ಕಪೇಶ್ವೇನ ಸಂಗಡ ಕರೆದುಕೊಂಡು, ಶಿಂದೇನ ಮುಖ್ಯ ದಳವಾಯಿಯಾದ **ಜಿವುಬಾದಾದಾ**, ಹೋಳಕರ, ಭೋಸಲೆ, ಗಾಯಕವಾಡ, ಪಟವರ್ಧನ, ರಾಸ್ತೆ, ಪ್ರತಿನಿಧಿ, ಪಾಟಣಕರ, ನಿಂಬಾಳಕರ, ಘೋರಪಡೆ, ಭೋಯಿಟೆ, ಘೋರಾತ, ಮುಂತಾದವರ ದಂಡುಗಳೊಡನೆ ನಿಜಾಮನ ರಾಜ್ಯವನ್ನು ಹೊಕ್ಕನು. ಪೇಶ್ವೇನ ದಂಡು ಒಟ್ಟು ಒಂದುವರೆ ಲಕ್ಷವಿತ್ತು. ಆರಂಭಕ್ಕೆ **ಪರಾಂಡೆಯ** ನೆರೆಯಲ್ಲಾದ ಕದನಗಳಲ್ಲಿ ಪೇಶ್ವೇರ ಮುಖ್ಯದಳವಾಯಿಯಾದ **ಪಟವರ್ಧನ**ನೂ ಹರಿಪಂತನ ಮಗನಾದ **ಬಾಬಾಫಡಕೆಯೂ** ಸೋತರೆಂಬ ಸುದ್ದಿಯನ್ನು ಕೇಳಿ, ನಾನಾನು ಹೆದರಿ, ಜಿವುಬಾದಾದಾನಿಗೆ ಕಾಗದ ಬರೆದನು. ಬಳಿಕ ಪೇಶ್ವೆಯ ದಂಡು ನಿಜಾಮನನ್ನು ಬೆನ್ನಟ್ಟಲು ಅವನು **ಖರಡೆಯ** ಕೋಟೆಯನ್ನು ಹೊಕ್ಕನು, ಮತ್ತು ಮರಾಟರು ಅದನ್ನು ಮೂರು ದಿವಸ ಮುತ್ತಿದ ಬಳಿಕ ಕೆಳಗೆ ಬರೆದ ಶರತುಗಳಂತೆ ಒಪ್ಪಂದಮಾಡಿಕೊಂಡನು.

೧. ನಿಜಾಮನು ಪರಾಂಡೆಯಿಂದ ತಾಪೀನದಿಯ ವರೆಗೆ ತನ್ನ ವಶದಲ್ಲಿದ್ದ ಎಲ್ಲ ಪ್ರದೇಶವನ್ನು (ದೌಲತ್ತಾಬಾದ ಸಹಿತ) ಪೇಶ್ವೇನಿಗೆ ಬಿಟ್ಟುಕೊಡಬೇಕು.

೨. ಯುದ್ಧದ ವೆಚ್ಚಕ್ಕಾಗಿಯೂ ಚೌಥ-ಸರದೇಶಮುಖಿಯ ಬಗ್ಗೆಯೂ ನಿಜಾಮನು ೩ ಕೋಟಿ ರೂಪಾಯಿ ಕೊಡಬೇಕು.

೩. ನಿಜಾಮನು ವರ್ಷಕ್ಕೆ ೩ ಲಕ್ಷ ೧೮ ಸಾವಿರ ರೂಪಾಯಿ ಉತ್ಪನ್ನವಾಗುವ ಪ್ರಾಂತವನ್ನೂ ೨೯ ಲಕ್ಷ ರೂಪಾಯಿಗಳನ್ನೂ ರಘೋಜಿ ಭೋಸಲೇನಿಗೆ ಕೊಡಬೇಕು.

ಈಯೊಪ್ಪಂದವಾದ ಬಳಿಕ ಸವಾಯಿ-ಮಾಧವರಾಯನು ಬಹಳ ದಿವಸ ಬಾಳಲಿಲ್ಲ. ಈಕಾಲಕ್ಕೆ ನಾನಾನು ರಘುನಾಥರಾಯನ ಹಿರಿಮಗನಾದ ಬಾಜಿರಾಯನನ್ನೂ ಅವನಿಬ್ಬರು ತಮ್ಮಂದಿರನ್ನೂ **ಶಿವನೇರಿಯ ಕೋಟೆಯಲ್ಲಿ** ಕಾವಲಲ್ಲಿರಿಸಿದ್ದನು. ಈಬಾಜಿ

ರಾಯನು ಚೆಲುವನೂ ಸವಿಮಾತಿನವನೂ ಆದ್ದರಿಂದ ರಘುನಾಥ ರಾಯನ ಪಕ್ಷದ ಜನರು ಅವನನ್ನು ಎಡೆಬಿಡದೆ ಹೊಗಳಲಾ ರಂಭಿಸಿದರು. ಈಹೊಗಳಿಕೆಯು ಪೇಶ್ವೇನ ಕಿವಿಗೆ ಬಾರಿಬಾರಿಗೆ ಬಿದ್ದುದರಿಂದ ಅವನ ಮನಸ್ಸಿನಲ್ಲಿ ಬಾಜಿರಾಯನನ್ನು ಸೆರೆಯಿಂದ ಬಿಡಿಸಿ, ತನ್ನ ಹತ್ತಿರ ಇಟ್ಟುಕೊಳ್ಳಬೇಕೆಂಬ ಉತ್ಕಟೇಚ್ಛೆಯು ಹುಟ್ಟಿತು. ಆದರೆ ನಾನಾನು ಈಯಾಲೋಚನೆಗೆ ಕಿವಿಗೊಡ ಲಿಲ್ಲ. ಈಸಂಗತಿಯಿಂದ ಪೇಶ್ವೇನ ಬುದ್ಧಿಯೇ ಕೆಟ್ಟಿತು. ಮುಂದೆ ದಸರೆಯ ದಿವಸ ಮೆರವಣಿಗೆಯು ಹೊರಟಾಗ, ಅವನು ಅಂಬಾರಿ ಯಿಂದ ಕೆಳಗೆ ಹಾರಿಕೊಂಡನು; ದೈವಯೋಗದಿಂದ ಹತ್ತಿರಿದ್ದ ಜನರು ಅವನನ್ನು ಹಿಡಿದುದರಿಂದ ಅವನಿಗೆ ಅಪಾಯವೇನೂ ಆಗ ಲಿಲ್ಲ. ಮುಂದೆ ಮೂರನೆಯ ದಿವಸ ಅಂದರೆ ಆಶ್ವಿನ ಶುದ್ಧ ದ್ವಾದಶೀ ಆದಿತ್ಯವಾರ ದಿವಸ ೯ ಗಂಟೆಗೆ ಅವನು ತನ್ನ ಹತ್ತಿರ ಒಬ್ಬರೂ ಇಲ್ಲದ್ದನ್ನು ನೋಡಿ ಉಪ್ಪರಿಗೆಯ ಮೇಲಿಂದ ಕೆಳಗೆ ಹಾರಿಕೊಂಡನು. ಕೆಳಗಿದ್ದ ಕಾರಂಜಿಯು ತೊಡೆಯಲ್ಲಿ ಸಿಕ್ಕು ಅವನ ತೊಡೆಯು ಮುರಿಯಿತು, ಮತ್ತು ಗೋಣು ಸೊಟ್ಟಾ ಯಿತು. ನಾನಾನು ಎಷ್ಟು ಉಪಚಾರ ಮಾಡಿಸಿದರೂ ನೆಟ್ಟಗಾ ಗಲಿಲ್ಲ; ಮುಂದೆ ಅವನು ಹುಣ್ಣಿವೆಯ ದಿವಸ ಸಂಜೆಗೆ ಪ್ರಾಣ ಬಿಟ್ಟನು (ಶಕೆ ೧೭೧೭).

ಈದುರ್ಮರಣದಿಂದ ನಾನಾನ ಕಯ್ಮುರಿದಂತಾಯಿತು; ಅವ ನ ಮುಖ್ಯಾಧಾರವು ಹೋಯಿತು. ಸವಾಯಿಮಾಧವರಾಯನೊ ಡನೆ ಅವನ ಬುದ್ಧಿಯೂ ಸಂಪತ್ತೂ ದೊಡ್ಡಿಸ್ತನವೂ ಹೋದವೆಂದ ರೂ ಅಡ್ಡಿಯಿಲ್ಲ. ಈಕಾಲಕ್ಕೆ ರಘುನಾಥರಾಯನ ಮಕ್ಕಳಾದ **ಬಾಜಿರಾವ, ಚಿಮಾಜಿಅಪ್ಪಾ** ಇವರಿಬ್ಬರ ಹೊರತು ಪೇಶ್ವೇನ ವಂ ಶದವರು ಮತ್ತೆಯಾರೂ ಉಳಿದಿದ್ದಿಲ್ಲ. ಇವರಿಬ್ಬರೂ ನಾನಾನ ಕಡುಹಗೆಗಳಾಗಿದ್ದರೆಂಬದಕ್ಕೆ ಸಂಶಯುವೇ ಇಲ್ಲ. ಆದ್ದರಿಂದ ನಾನಾನು ಸವಾಯಿ-ಮಾಧವರಾಯನ ಹೆಂಡತಿಯಾದ **ಯಶೋ ದಾಬಾಯಿ**ಗೆ ಒಬ್ಬ ಗೋತ್ರಜನನ್ನು ದತ್ತಕಕೊಟ್ಟು ಆದತ್ತಕ

ಮಗನಿಗೆ ಪೇಶ್ವೇನ ವಸ್ತ್ರಗಳನ್ನು ಕೊಡಿಸಿ, ತಾನು ಮೊದಲಿನಂತೆ ರಾಜಕಾರ್ಯವನ್ನು ನಡಿಸಬೇಕೆಂದು ಆಲೋಚಿಸಿ, ಪುಣೆಯಲ್ಲೇ ಇದ್ದ ಹೋಳಕರನನ್ನೂ ಪರಶುರಾಮ-ಭಾವು ಪಟವರ್ಧನನನ್ನೂ ತನ್ನ ಮತಕ್ಕೊಲಿಸಿಕೊಂಡು, ಶಿಂದೆ-ಭೋಸಲೇರಿಗೆ ಈಸಂಬಂಧ ದಿಂದ ವಿಚಾರಮಾಡಲಿಕ್ಕೆ ಬೇಗನೆ ಹೊರಟು ಬರಬೇಕೆಂದು ಕಾಗದ-ಬರೆದನು. ಕೂಡಲೆ ಶಿಂದೆಯು ಅಲ್ಪವಯಸ್ಕನಾದ ಕಾರಣ, ಅವನ ರಾಜ್ಯಪಾಲಕರಾದ **ಜಿವುಬಾದಾದಾ ಬಕ್ಷಿಯೂ ಬಾಳೋಬಾ ತಾತ್ಯಾ ಪಾಗನೀಸನೂ** ಭೋಸಲೆಯೂ ಪುಣೆಗೆ ಬಂದರು (ಕಾರ್ತಿಕಮಾಸ). ಇವರೊಳಗೆ ಬಾಳೋಬನ ಹೊರತು ಉಳಿದವರೆಲ್ಲರೂ ನಾನಾನ ಆಲೋಚನೆಗೆ ಒಪ್ಪಿಕೊಂಡರು; ಮುಂದೆ ಬಾಳೋಬನಾದರೂ ಹೋಳಕರನ ಹೇಳಿಕೆಯಿಂದ ಅನುಮತಿಕೊಟ್ಟನು. ಬಳಿಕ ಎಲ್ಲ ಸರದಾರರು ಈಯರ್ಥದ ಪತ್ರವನ್ನು ಯಶೋದಾಬಾಯಿಗೆ ಬರೆದು ತಂತಮ್ಮ ನಾಡುಗಳಿಗೆ ಹೊರಟುಹೋದರು.

ಈಯೆಲ್ಲ ಸುದ್ದಿಯು ಶಿವನೇರಿಯಲ್ಲಿದ್ದ ಬಾಜಿರಾಯನಿಗೆ ತಿಳಿಯಲು, ಅವನು ಬಾಳೋಬನೊಡನೆ ಪತ್ರವ್ಯವಹಾರನಡಿಸಿ, ಶಿಂದೇನು ತನ್ನನ್ನು ಪಟ್ಟದ ಮೇಲೆ ಕೂಡ್ರಿಸಬೇಕೆಂತಲೂ ತಾನು ಅದಕ್ಕಾಗಿ ದಂಡಿನ ವೆಚ್ಚವನ್ನೂ ೪ ಲಕ್ಷದ ಉಂಬಳಿಯನ್ನೂ ಕೊಡಬೇಕೆಂತಲೂ ಗೊತ್ತುಮಾಡಿಕೊಂಡನು. ಈಸುದ್ದಿಯು ಕೂಡಲೆ ನಾನಾನಿಗೆ ತಿಳಿಯಿತು. ಆಗಲವನು ಹೆದರಿ ಬಾಜಿರಾಯನನ್ನು ಪಟ್ಟದ ಮೇಲೆ ಕೂಡ್ರಿಸಬೇಕೆಂದು ನಿಶ್ಚಯಿಸಿ, ಮೊದಲಿನ ಆಲೋಚನೆಯನ್ನು ಬಿಟ್ಟು, ಬಾಜಿರಾಯನನ್ನೂ ತಾಸಗಾವಿಯಿಂದ ಪಟವರ್ಧನನನ್ನೂ ಕರಿಸಿಕೊಂಡು, ಬಾಜಿರಾಯನಿಂದ ತನ್ನನ್ನೇ ಕಡೆತನಕ ಮುಖ್ಯಮಂತ್ರಿಯನ್ನು ಮಾಡಿಕೊಳ್ಳಬೇಕೆಂದು ವಚನತೆಗೆದುಕೊಂಡು, ಅವನನ್ನು ಪುಣೆಗೆ ಕರಿಸಿದನು. ಈವರ್ತಮಾನವು ತಿಳಿದ ಕೂಡಲೆ ಬಾಳೋಬನು ಸಿಟ್ಟಿಗೆದ್ದು, ನಾನಾ-ಬಾಜಿರಾವ ಇವರಿಬ್ಬರನ್ನು ದಂಡಿಸುವ ಉದ್ದೇಶದಿಂದ ದೊಡ್ಡ ದಂಡಿನೊಡನೆ ಹೊರಟು ಪುಣೆಯ ಹತ್ತರವಿದ್ದ **ಕವಡಿಯೆಂಬ ಊರಲ್ಲಿ** ಪಾಳಯ

ಹಾಕಿದನು. ಈಸುದ್ದಿಯನ್ನು ಕೇಳಿ ಅಳ್ಳೆದೆಯ ನಾನಾನು ಪಟ ವರ್ಧನನ ಧೈರ್ಯದ ಮಾತುಗಳಿಗೆ ಕಿವಿಗೊಡದೆ ಫಾಲ್ಗುಣ ಶುದ್ಧ ಚತುರ್ದಶೀ ದಿವಸ ರಾತ್ರಿ ಸಾತಾರೆಗೆ ಓಡಿಹೋಗಿ, ಅಲ್ಲಿದ್ದ ಮಹಾರಾಜನಿಗೆ ಬೇಡಿಕೊಂಡದ್ದೇನಂದರೆ:—"ಮಹಾರಾಜರೇ ಈಪ್ರಸಂಗದಲ್ಲಿ ತಾವು ಟೊಂಕಕಟ್ಟಿ ದಂಡು ಕೂಡಿಸಿ ಶಿಂದೇನನ್ನು ಪುಣೆಯಿಂದೋಡಿಸಿ, ಯಶೋದಾಬಾಯಿಯ ದತ್ತಕಪುತ್ರನಿಗೆ ಪೇಶ್ವೇನ ವಸ್ತ್ರಗಳನ್ನು ಕೊಟ್ಟರೆ ತಮ್ಮ ಕೀರ್ತಿಯು ದಿಗಂತರದಲ್ಲಿ ಹಬ್ಬುವದು. ತಾವು ಹೀಗೆ ಮಾಡಲಿಕ್ಕೊಡಂಬಟ್ಟರೆ ತಮಗೆ ವೆಚ್ಚಕ್ಕಾಗಿ ಒಂದು ಕೋಟಿ ರೂಪಾಯಿಗಳನ್ನು ಈಕ್ಷಣವೇ ತಮ್ಮ ಮುಂದೆ ಎಣಿಸಿಕೊಡಲಿಕ್ಕೆ ಸಿದ್ಧನಿದ್ದೇನೆ". ಆದರೆ ಪೇಶ್ವೇನ ವಂಶದವರು ಇರುತಿರಲಿಕ್ಕೇ ಎರಡನೆಯವನನ್ನು ದತ್ತಕತೆಗೆದುಕೊಳ್ಳುವುದು ಮಹಾರಾಜನಿಗೆ ಸರಿದೋರದ್ದರಿಂದ, ನಾನಾನು ಭಗ್ನಮನೋರಥನಾಗಿ ಮುಂದೆ ತನ್ನ ಹಾಡು ಏನಾಗುತ್ತದೋ ಎಂದು ಉಮ್ಮಳಿಸುತ್ತ ಕಾಲಕಳೆಯಲಾರಂಭಿಸಿದನು.

ಅತ್ತ ಬಾಳೋಬನು ದಂಡಿನೊಡನೆ ಪುಣೆಗೆ ಬಂದು ತನ್ನನ್ನು ವಂಚಿಸಿದ ಬಾಜಿರಾಯನನ್ನು ಕಾವಲಲ್ಲಿರಿಸಿ, ನಾನಾನ ನಂಬಿಗಸ್ಥರಾದ **ಪರಶುರಾಮ-ಭಾವು ಪಟವರ್ಧನನ್ನೂ ಬಹಿರೋಪಂತ ಮೇಂಥಳೇನನ್ನೂ** ತನ್ನ ಕಡೆಗೆ ಮಾಡಿಕೊಂಡು, ಚಿಮಾಜಿ ಅಪ್ಪನನ್ನು ಯಶೋದಾಬಾಯಿಯ ದತ್ತಕಮಗನನ್ನು ಮಾಡಿ, ಅವನಿಗೆ ನಾನಾನ ವಿದ್ಯಮಾನವಾಗಿ ಪೇಶ್ವೇನ ವಸ್ತ್ರಗಳನ್ನು ತರಿಸಿಕೊಟ್ಟನು. ಬಳಿಕ ಬಾಳೋಬನು ಆಲೋಚನೆಯನ್ನು ಕೇಳುವ ನೆವದಿಂದ ನಾನಾನನ್ನು ಹಿಡಿಯ ಬೇಕೆಂದು ನಿಶ್ಚಯಿಸಿ ಬಹಿರೋಪಂತ ಮೇಂಥಳೆ, ವಿಸಾಜಿಪಂತ ವಾಡವೇಕರ ಎಂಬಿಬ್ಬರನ್ನು ದಂಡಿನೊಡನೆ ಸಾತಾರೆಗೆ ಕಳುಹಿದನು. ಅವರು ನಾನಾನನ್ನು ಕಂಡು ಮಾತಾಡುತ್ತ ಕುಳಿತಿರುವಾಗ ವಾಡವೇಕರನು ತನ್ನ ಕಿವಿಯ ಮೇಲೆ ಜನಿವಾರವನ್ನು ಹಾಕಿಕೊಂಡು ಸನ್ನೆ ಮಾಡಲು, ನಾನಾನು 'ಈಗ ಬಂದೆ', ಎಂದು ಹೇಳಿ ಒಳಗೆ ಹೋಗಿ ಹಿತ್ತಲುಬಾಗಿಲಿಂದ

ವಾಯಿಗೆ ಓಡಿಹೋದನು. ಪಟವರ್ಧನನ ಮಗನು ಅಲ್ಲಿಗೆ ಹಿಡಿಯಲಿಕ್ಕೆ ಬರಲು ಅವನು ಪ್ರತಾಪಗಡಕ್ಕೆ ಓಡಿಹೋದನು (೧೭೯೫).

ಈಕಾಲಕ್ಕೆ ನಾನಾನೂ ಬಾಜಿರಾಯನೂ ಸಮದುಃಖಿಗಳಾಗಿದ್ದರು. ನಾನಾನ ಮಂತ್ರಿಪದವು ಹೋಗಿತ್ತು, ಮತ್ತು ಬಾಜಿರಾಯನ ಗಾದಿ ತಪ್ಪಿತ್ತು. ಇಷ್ಟೇ ಅಲ್ಲ, ಆದರೆ ಇಬ್ಬರೂ ಸೆರೆಯಾಳಾಗಿ ತಂತಮ್ಮ ಉಳಿದ ಆಯುಷ್ಯವನ್ನು ಕಳೆಯುವ ಪ್ರಸಂಗವೊದಗಿತ್ತು. ಆದ್ದರಿಂದ ಅವರಿಬ್ಬರು ತಂತಮ್ಮ ದ್ವೇಷವನ್ನು ಮರೆತು, ಒಟ್ಟುಗೂಡಿ ಬಾಳೋಬಾ-ಪರಶುರಾಮಭಾವುಗಳ ಪಾರಪತ್ಯ ಮಾಡಲಿಕ್ಕೆ ಒಳಸಂಚು ನಡಿಸಿದರು. ನಾನಾನು ಬಾಜಿರಾಯನಿಗೆ ಕೆಲಹಣವನ್ನು ಕಳುಹಿಕೊಟ್ಟನು. ಆದರೆ ಆ-ಅವಿಚಾರಿಯಾದ ಬಾಜಿರಾಯನು ಮುಚ್ಚು ಮರೆಮಾಡದೆ, ದಂಡುಕೂಡಿಸಲಾರಂಭಿಸಿದ್ದರಿಂದ ಬಾಳೋಬಾ-ಪಟವರ್ಧನರಿಗೆ ಸಂಶಯ ಬಂದು, ನಾನಾನಿಗೆ ಅನುಕೂಲವಾದ ತಮ್ಮ ಕಯ್ಕೆಳಗಿನ ಎಲ್ಲ ಜನರನ್ನು ಕೆಲಸದಿಂದ ದೂರ ಮಾಡಿದ್ದಲ್ಲದೆ ಬಾಜಿರಾಯನನ್ನು ಸರ್ಜೆರಾವ ಘಾಟಗೆ ಎಂಬ ಸರದಾರನ ವಶದಲ್ಲಿ ಕೊಟ್ಟು, ಅವನನ್ನು ಉತ್ತರ ಹಿಂದುಸ್ಥಾನಕ್ಕೆ ಕಳುಹಿದರು.

ಆದರೆ ದೈವಯೋಗದಿಂದ ಈ-ಘಾಟಗೆಯು ನಾನಾನಿಗೆ ಅನುಕೂಲವಾಗಿದ್ದನು; ಮತ್ತು ಅವನ ಕಯ್ಯಲ್ಲೇ ಈಕಾಲಕ್ಕೆ ದೌಲತ್ರಾವ ಶಿಂದೆ ಇದ್ದನೆಂದು ಹೇಳಬಹುದು; ಏಕಂದರೆ, ಅವನಿಗೆ ಬಲು ಚೆಲುವೆಯಾದ ಒಬ್ಬ ಮಗಳಿದ್ದಳು, ಮತ್ತು ಶಿಂದೇನ ಮನಸ್ಸಿನಲ್ಲಿ ಆಕೆಯನ್ನು ಮದುವೆ ಮಾಡಿಕೊಳ್ಳುವದಿತ್ತು. ಆದ್ದರಿಂದ ನಾನಾನು ಅವನ ಮಧ್ಯಸ್ಥಿಕೆಯಿಂದ ೧೦ ಲಕ್ಷದ ಉಂಬಳಿಯನ್ನೂ ಅಹಮ್ಮದನಗರದ ಕೋಟೆಯನ್ನೂ ಪಟವರ್ಧನನ ಜಹಗೀರನ್ನೂ ಕೊಡುವ ಶರ್ತಿನ ಮೇಲೆ ಶಿಂದೇನನ್ನು ಒಡಕೊಂಡಿದ್ದನು. ಬಾಜಿರಾಯನಾದರೂ ಅವನಿಗೆ ಶಿಂದೇನ ದಿವಾಣಗಿರಿಯನ್ನೂ ಕಾಗಲ್ ಗ್ರಾಮುವನ್ನೂ ಕೊಡಲಿಕ್ಕೊಡಂಬಟ್ಟು, ಅವನನ್ನು ತನ್ನ ಕಡೆಗೆ ಮಾಡಿಕೊಂಡಿದ್ದನು.

ಇಷ್ಟರಿಂದಲೇ ನಾನಾನ ಪ್ರಯತ್ನವು ಮುಗಿಯಲಿಲ್ಲ. ಅವನು ತುಕೋಜಿರಾವ ಹೋಳಕರನಿಂದ ಸಹಾಯ-ಮಾಡುತ್ತೇನೆಂದು ವಚನತೆಗೆದುಕೊಂಡನು; ಮತ್ತು ಖರ್ಡೆಯ ದಂಡಯಾತ್ರೆಯಲ್ಲಿ ಪೇಶ್ವೇನು ಹಿಡಿದುಕೊಂಡ ಎಲ್ಲ ಪ್ರಾಂತವನ್ನೂ ಹಿಂದಿನ ಕಪ್ಪವನ್ನೂ ಬಿಟ್ಟುಕೊಡುವ ಶರ್ತಿನಿಂದ ನಿಜಾಮುನ ಸಹಾಯವನ್ನು ದೊರಕಿಸಿದನು. ಇದಲ್ಲದೆ ಅವನು ೧೫ ಲಕ್ಷ ರೂಪಾಯಿ ರೋಖು ಕೊಟ್ಟು ಭೋಸಲೆಯುನ ದಂಡನ್ನು ತರಿಸಿದನು, ಮತ್ತು ಕೊಲ್ಲಾಪುರದವರನ್ನು ಪಟವರ್ಧನನ ಮೇಲೆ ಎಬ್ಬಿಸಿ ಕೂಡ್ರಿಸಿದನು.

ಈಯೆಲ್ಲ ಘಟಾಟೋಪವು ಶಕೆ ೧೭೧೯ರ ಮಳೆಗಾಲದಲ್ಲಿ ಆಯಿತು ಮುಂದೆ ಆಶ್ವಿನ ಮಾಸದ ಆರಂಭದಲ್ಲಿ ನಾನಾನು ರಚಿಸಿದ ಈ ಭಯಂಕರವಾದ ವ್ಯೂಹವನ್ನರಿಯದ ಬಾಳೋಬನು ಅವನನ್ನು ಹಿಡಿಯಲಿಕ್ಕೆ ಸಾಲ್ವೆಯ ಘಟ್ಟಕ್ಕೆ ದಂಡನ್ನು ಕಳುಹಿದನು. ಈಸಂಧಿಯಲ್ಲಿ ದೌಲತ್ತರಾವ ಶಿಂದೇನು ಬಾಳೋಬನನ್ನು ಹಿಡಿದು ಕಾವಲಿನಲ್ಲಿರಿಸಿದನು, ಮತ್ತು ನಾನಾನ ಅನುಯಾಯಿಯಾದ **ನಾರೋಪಂತ ಚಕ್ರದೇವನು** ಶಿವನೇರಿಗೆ ಓಡಿಹೋದ ಪರಶುರಾಮಭಾವು-ಚಿಮಾಜಿಅಪ್ಪರನ್ನು ಸೆರೆಹಿಡಿದು, ಅವರ ಪಕ್ಷದವರಾದ ೪೫ ಮಂದಿ ಬ್ರಾಹ್ಮಣರನ್ನು ಸೆರೆಯಲ್ಲಿಟ್ಟನು.

ಈಸುದ್ದಿಯನ್ನುಕೇಳಿ, ನಾನಾನು ಮುಹಡದಿಂದಲೂ ಬಾಜಿರಾಯನು ತನ್ನ ಪಾಳಯದಿಂದಲೂ ಪುಣೆಗೆ ಹೊರಟರು. ಮುಂದೆ ನಾನಾನು ಕಾರ್ತಿಕವದ್ಯ ೧೧ ದಿವಸ ರಾಜ್ಯಕಾರ್ಯವನ್ನು ಮಾಡಲಾರಂಭಿಸಿದನು. ಬಾಜಿರಾಯನಿಗೆ ಮಾರ್ಗಶೀರ್ಷ ಶುದ್ಧ ೫ ದಿವಸ ಪೇಶ್ವೇನ ವಸ್ತ್ರಗಳು ದೊರೆದವು. ಬಳಿಕ ಚಿಮಾಜಿ-ಅಪ್ಪನ ದತ್ತಕವು ಅಶಾಸ್ತ್ರವೆಂದು ನಿರ್ಣಯವಾದ್ದರಿಂದ ಆದತ್ತವಿಧಾನವನ್ನು ಮಾಡಿಸಿದ ಎಲ್ಲ ಬ್ರಾಹ್ಮಣರು ಗಡೆದಾಟಿಸಲ್ಪಟ್ಟರು. ಆದರೆ ಮುಂದೆ ೩|೪ ತಿಂಗಳಲ್ಲೇ ಬಾಜಿರಾಯನ ಕಯ್ಕೆಳಗೆ ಕೆಲಸ ಮಾಡುವುದರಿಂದ ತನಗೆ ಕೀರ್ತಿ ಬರಲಿಕ್ಕಿಲ್ಲೆಂದು ಮನಗಂಡು, ನಾನಾನು ಕಾಶಿಗೆ ಹೋಗಲಿಕ್ಕೆ ಅವನ ಅಪ್ಪಣೆಯನ್ನು ಕೇಳಿದನು.

ಆದರೆ ಆವಿಶ್ವಾಸಘಾತಕಿಯಾದ ಬಾಜೀರಾಯನು ಆಗ್ರಹಮಾಡಿ ಅವನನ್ನು ಇಟ್ಟುಕೊಂಡು ಒಳಗಿಂದೊಳಗೇ ನಾನಾಶಿಂದೆಯರ ನಡುವೆ ದ್ವೇಷಹುಟ್ಟಿಸಲಿಕ್ಕೆ ಪ್ರಯತ್ನನಡಿಸಿದನು.

ಬಾಜಿರಾಯನು ಪೇಶ್ವೆಯಾಗುವದಕ್ಕಿಂತ ಮೊದಲು ರಘೋಜಿ ಭೋಸಲೇನಿಗೆ ೧೦ ಲಕ್ಷ ರೂಪಾಯಿಗಳನ್ನೂ ಮಂದಬೆಪ್ರಾಂತ ವನ್ನೂ ಕೊಡಲೊಪ್ಪಿದ್ದನು; ಆದರೆ ಅವನ ಬಳಿಯಲ್ಲಿ ಹಣವಿಲ್ಲ ದ್ದರಿಂದ ನಾನಾನು ೧೦ ಲಕ್ಷ ರೂಪಾಯಿಗಳನ್ನು ತನ್ನ ಕಯ್ಯಿಂದಲೆ ಕೊಟ್ಟು, ಮಂದಬೆಪ್ರಾಂತದ ಬಗ್ಗೆ ಪೇಶ್ವೇನಿಂದ ಕಾಗದ ಬರಿಸಿ ಕೊಟ್ಟನು. ಆದರೆ ಪೇಶ್ವೇನು ನಿಜಾಮನಿಗೆ ಕೊಡತಕ್ಕ ಪ್ರಾಂತ ವನ್ನು ಮಾತ್ರ ಕೊಡಲಿಲ್ಲ.

ಹಿಂದೆ ಹೇಳಿದಂತೆ ಬಾಜಿರಾಯನು ಶಿಂದೇನ ಮಾವನಾದ ಸರ್ಜೆರಾವ ಘಾಟಗೇನಿಗೆ ೨ ಕೋಟಿ ರೂಪಾಯಿಗಳನ್ನೂ ಶಿಂದೇ ನ ದಿವಾಣಗಿರಿಯನ್ನೂ ಕಾಗಲ್‌ಗ್ರಾಮವನ್ನೂ ಕೊಡಲೊಡಂ ಬಟ್ಟಿದ್ದನು. ಈಗೀದುಷ್ಟನಾದ ಬಾಜಿರಾಯನು ನಾನಾನ ಕಯ್ಯಲ್ಲಿ ಅಧಿಕಾರವಿರುವ ವರೆಗೆ ಅವನು ದಿವಾಣಗಿರಿಯನ್ನು ಕೊಡಗೊಡು ವದಿಲ್ಲೆಂತಲೂ ನಾನಾನನ್ನು ಸೆರೆಹಿಡಿಯಬೇಕೆಂತಲೂ ಘಾಟಗೇ ನಿಗೆ ಸೂಚಿಸಿದನು. ಆಗಲವನು ತನ್ನ ಕಯ್ಯಲ್ಲಿ ಸೂತ್ರಗೊಂಬೆ ಯಂತೆ ಕುಣಿಯುತ್ತಿದ್ದ ತನ್ನ ಅಳಿಯನಾದ ದೌಲತ್ತರಾವ ಶಿಂದೇ ನಿಗೆ ನಾನಾನನ್ನು ಹಿಡಿಯಲಿಕ್ಕೆ ಹಂಚಿಕೆ ಹೇಳಿಕೊಟ್ಟನು; ಅದರಂತೆ ದೌಲತ್ತರಾಯನು ನಾನಾನೊಡನೆ ಸ್ನೇಹಬೆಳಿಸಿ, ೨ । ೩ ತಿಂಗಳುಗಳ ವರೆಗೆ ಅವನ ಪೂರ್ಣವಿಶ್ವಾಸಿಕನಂತೆ ನಡೆದುಕೊಂ ಡು, ಮುಂದೆ ಪೌಷ ಶುದ್ಧ ೧೩ ದಿವಸ ಸಾಯಂಕಾಲಕ್ಕೆ ಅವನನ್ನು ತನ್ನ ಪಾಳಯಕ್ಕೆ ಊಟಕ್ಕೆ ಕರೆದನು. ಇದಕ್ಕೂ ೨ । ೩ ದಿವಸ ಮೊದಲೇ ಶಿಂದೇನ ಘಾತಕವಿಚಾರವು ನಾನಾನಿಗೆ ಕರ್ಣಪರಂ ಪರೆಯಿಂದ ತಿಳಿದಿತ್ತು, ಮತ್ತು ಅವನಿಗೆ ವಿಶ್ವಾಸವಿದ್ದ ಶಂಕರಜೋ ಯ್ಸಿಯೆಂಬವನಾದರೂ ಅವನಿಗೆ ಕಾರಾಗೃಹವಾಸವಾಗುವದೆಂದು ಭವಿಷ್ಯ-ಹೇಳಿದ್ದನು. ಆದರೂ ನಾನಾನು ಶಿಂದೇನ ಊಳಿಗದ

ಲ್ಲಿದ್ದ ಕರ್ನಲ್ ಮಿಚೆಲ್ ಫೆಲೋಸನೆಂಬ ಇಂಗ್ಲಿಷ ಗೃಹಸ್ಥನು ಕೊಟ್ಟ ಅಭಯವಚನವನ್ನು ನಂಬಿ, ಶಿಂದೇನ ಪಾಳಯಕ್ಕೆ ಹೊರಟನು. ಅವನು ಶಿಂದೇನಿದ್ದ ಹಾನವಡಿಗೆ ಹೋದಕೂಡಲೆ, ಶಿಂದೇನ ಜನರು ನಾನಾನ ಜನರನ್ನು ಕೆಣಕಲು, ಆಗದ್ದಲದಲ್ಲಿ ಕರ್ನಲ್‌ಫೆಲೋಸನು ನಾನಾನನ್ನು ಸೆರೆಹಿಡಿದನು.* ಅದೇ ಸಮಯಕ್ಕೆ ಪೇಶ್ವೇನು ನಾನಾನ ಅನುಯಾಯಿಗಳಾದ ಬಾಬಾರಾವ ಫಡಕೆ, ನಾರೋಪಂತ ಚಕ್ರದೇವ, ಗೋವಿಂದರಾವ ಪಿಂಗಳೆ ಮುಂತಾದ ಪ್ರಮುಖಗೃಹಸ್ಥರನ್ನು ಕರಿಸಿ ಅವರನ್ನು ಸೆರೆಯಲ್ಲಿಟ್ಟನು.

ಈಮೇರೆಗೆ ಹಳೆ ಉದ್ಯೋಗಸ್ಥರನ್ನೆಲ್ಲ ಸೆರೆಯಲ್ಲಿಟ್ಟು, ಪೇಶ್ವೇನು ತನ್ನ ದತ್ತಕ ತಮ್ಮನಾದ ಅಮೃತರಾವ, ಗೋವಿಂದರಾವ ಕಾಳೆ, ಶಿವರಾಮ ನಾರಾಯಣ ಥತ್ತೆ ಮುಂತಾದವರನ್ನು ದೊಡ್ಡದೊಡ್ಡ ಉದ್ಯೋಗಸ್ಥರನ್ನು ಮಾಡಿ, ಬಾಳಾಜಿಪಂತ ಪಟವರ್ಧನನೆಂಬವನನ್ನು ದಳವಾಯಿಯಾಗಿ ನಿಯಮಿಸಿ, ಫಡನವೀಸಿಯ ಕೆಲಸವನ್ನು ತಾನೇ ಸ್ವತಃ ನೋಡಲಾರಂಭಿಸಿದನು. ಬೇಕಾದವರು ರಾಜ್ಯಕಾರ್ಯವನ್ನು ಸರಸಾಗಿ ನಡಿಸಬಹುದೆಂದು ಈತಿಳಿಗೇಡಿಯ ತಿಳವಳಿಕೆ ಇದ್ದಂತೆ ತೋರುತ್ತದೆ. ಈಯವಿಚಾರದ ಪರಿಣಾಮವು ತುಸುದಿವಸದಲ್ಲೇ ಅವನ ಅನುಭವಕ್ಕೆ ಬಂತು. ಅದು ಹೇಗಂದರೆ, ದ್ರವ್ಯಲೋಭಿಯಾದ ಘಾಟಗೆಯು ಪುಣೆಯಲ್ಲಿದ್ದ ಪ್ರಮುಖ ಗೃಹಸ್ಥರನ್ನು ಹಿಡಿಸಿ, ಹೊಡಿಸಿ, ಬಡಿಸಿ, ಅವರಿಂದ ಹಣವನ್ನು ಹರಕೊಳ್ಳಲಾರಂಭಿಸಿದನು. ಆದ್ದರಿಂದ ಪೇಶ್ವೇನಿಗೆ ಪಶ್ಚಾತ್ತಾಪ ಹುಟ್ಟಿ ಘಾಟಗೆಯ ಉದ್ದುರುಟುತನವನ್ನು ನಿಲ್ಲಿಸಲಿಕ್ಕೆ ಬೇರೆ ಕುಯುಕ್ತಿಗಳನ್ನು ಮಾಡಲಾರಂಭಿಸಿದನು.

ನಾನಾನು ಶಿಂದೇನ ಪಾಳಯದಲ್ಲಿ ಸೆರೆಯಾಳಾಗಿದ್ದನೆಂದು ಹಿಂದೆ ಬರೆದಿರುತ್ತೇವಷ್ಟೇ. ಅವನು ಅಲ್ಲಿಯಾದರೂ ಸುಮ್ಮನೆ ಕೂಡ್ರಲಿಲ್ಲ. ಅವನು ದರಬಾರದಲ್ಲಿ ತನ್ನ ನಂಬಿಗಸ್ಥರಾಗಿದ್ದ ಚಕ್ರದೇವ

* ಈಮೊದಲೇ ಅಂದರೆ ಭಾದ್ರಪದ ಶುದ್ಧ ೬ ದಿವಸ ತುಕೋಜ ಹೋಳಕರನು ಸತ್ತನು. ನಾನಾನಿಗೆ ಅವನ ಆಶ್ರಯವು ಬಹಳವಾಗಿತ್ತು.

ಪಿಂಗಳೆಯುರನ್ನು ಪೇಶ್ವೆ-ಶಿಂದೆಯುರ ನಡುವೆ ಜಗಳಹುಟ್ಟಿಸಲಿಕ್ಕೆ ಹಚ್ಚಿ ದನು, ಮತ್ತು ತಾನು ಮಹಾದಾಜಿ ಶಿಂದೇನ ೩ ಮಂದಿ ಹೆಂಡಂ ದಿರನ್ನು ದೌಲತ್ತರಾವ ಶಿಂದೇನ ವಿರುದ್ಧವಾಗಿ ಎಬ್ಬಿಸಿ ಕೂಡ್ರಿಸಿ ದನು. ದೌಲತ್ತರಾಯುನು ತಾನು ಪಟ್ಟವೇರುವಾಗ ಈಮೂವರಿ ಗೂ ಉಂಬಳಿ-ಹಳ್ಳಿಗಳನ್ನು ಕೊಡುತ್ತೇನೆಂದು ಮಾತುಕೊಟ್ಟಿದ್ದನು; ಆದರೆ ಅವನು ಇನ್ನೂವರೆಗೆ ಹಾಗೆ ಮಾಡಿದ್ದಿಲ್ಲ. ಆದ್ದರಿಂದ ಅವರು ಈಗ ಹಟಹಿಡಿದು ತಮಗೆ ಉಂಬಳಿಹಳ್ಳಿಗಳನ್ನು ಕೊಟ್ಟ ಹೊರತು ಅನ್ನನೀರು ತೆಗೆದುಕೊಳ್ಳುವದಿಲ್ಲೆಂದು ಕುಳಿತರು. ಆಗ ದುಷ್ಟ ನಾದ ಘಾಟಗೆಯು ಅವರನ್ನು ಬೆತ್ತದಿಂದ ಹೊಡೆಯಲಾರಂಭಿಸಲು, ಶಿಂದೇನ ಎಷ್ಟೋ ಮಂದಿ ಸರದಾರರು ಆಹೆಂಗಸರಿಗೆ ಅನುಕೂ ಲವಾಗಿ ಅವನನ್ನೇ ಹಿಡಿಯುಲಿಕ್ಕೆತ್ತುಗಡೆಮಾಡಲು, ಅವನು ಪಾಳ ಯದಿಂದೋಡಿಹೋದನು. ಬಳಿಕ ಆಮೂವರು ಹೆಂಗಸರು ಪೇ ಶ್ವೇನ ತಮ್ಮನಾದ ಅಮೃತರಾಯುನ ಬೆನ್ನುಬಿದ್ದರು. ಬಳಿಕ ಘಾಟ ಗೆಯು ತಿರುಗಿ ಶಿಂದೇನ ಪಾಳಯುಕ್ಕೆ ಬಂದು ಮೊಹರಮ್ಮದ ದಿವ ಸ ವಿಶ್ವಾಸಘಾತಕತನದಿಂದ ಅಮೃತರಾಯುನ ಪಾಳಯುದ ಮೇಲೆ ಬಿದ್ದು ಎಷ್ಟೋ ಪ್ರಾಣಹಿಂಸೆಯುನ್ನು ಮಾಡಿದನು!! ಆಗದ್ದಲದಲ್ಲಿ ಮಹಾದಾಜಿ ಶಿಂದೇನ ಹೆಂಡಂದಿರು ತಪ್ಪಿಸಿಕೊಂಡು ಕೊಲ್ಲಾಪುರಕ್ಕೆ ಓಡಿಹೋದರು.

ತನ್ನ ತಮ್ಮನನ್ನೇ ಕೆಣಕಿದ್ದನ್ನು ನೋಡಿ ಪೇಶ್ವೇನು ಎಚ್ಚತ್ತ ನು. ಆಗ ಮಾತ್ರ ಶಿಂದೇನು ತನ್ನ ಕಯ್ಕೆಳಗಿನವನೆಂಬ ಅವನ ಭ್ರಮೆಯು ದೂರಾಯಿತು. ಆದ್ದರಿಂದ ಅವನು ಹೆದರಿ ಶಿಂದೇನ ಪಾರಪತ್ಯ ಮಾಡುವ ಉದ್ದೇಶದಿಂದ ತನ್ನ ದಳವಾಯಿಯಾದ ಚಕ್ರದೇವನಿಗೆ ಯುದ್ಧಸನ್ನಾಹ ಮಾಡಲಿಕ್ಕೆ ಅಪ್ಪಣೆಕೊಟ್ಟನು, ಹೋಳಕರನಿಗೆ ದಂಡಿನೊಡನೆ ಹೊರಟು ಪುಣೆಗೆ ಬರಲಿಕ್ಕೆ ಪತ್ರ ಕಳಿಸಿದನು, ಮತ್ತು ಬೇದರ ಪ್ರಾಂತದ ಚೌಥವನ್ನೂ ೮ ಲಕ್ಷದ ಪ್ರಾಂತವನ್ನೂ ಕೊಡಲಿಕ್ಕೊಡಂಬಟ್ಟು ನಿಜಾಮನ ಸಹಾಯುವನ್ನು ದೊರಕಿಸಿದನು.

ಈಸಿದ್ಧತೆಯನ್ನು ನೋಡಿ ದೌಲತ್ತರಾಯನು ಹೆದರಿದನು. ಕೊಲ್ಲಾಪುರಕ್ಕೆ ಹೋದ ಮಹಾದಾಜಿಯ ಹೆಂಡಂದಿರು ದಂಡು ತೆಗೆದುಕೊಂಡು ಪುಣೆಯ ಸನೆಯಕ್ಕೆ ಈಸಮಯದಲ್ಲಿ ಬಂದರು. ಆದ್ದರಿಂದ ಅವನು ನಿರುಪಾಯನಾಗಿ ನಾನಾನ ಸಹಾಯದಿಂದ ಈಗಂಡಾಂತರದೊಳಗಿಂದ ಪಾರಾಗ ಬೇಕೆಂದೆಣಿಸಿ, ಅವನನ್ನು ಅಹಮ್ಮದನಗರದಿಂದ ಕರಿಸಿ, ಅವನಿಂದ ೧೦ ಲಕ್ಷ ರೂಪಾಯಿ ತೆಗೆದುಕೊಂಡು, ಅವನನ್ನು ಬಂಧನದಿಂದ ಮುಕ್ತಮಾಡಿದನು. ನಾನಾನು ಕೂಡಲೆ ನಿಜಾಮನಿಗೆ ಪತ್ರಬರೆದು ಅವನು ಪೇಶ್ವೇನಿಗೆ ನೆರವಾಗದಂತೆ ವ್ಯವಸ್ಥೆಮಾಡಿದನು.

ನಾನಾನು ಬಿಡುಗಡೆಯಾದ್ದನ್ನು ಕೇಳಿ ಬಾಜಿರಾಯನು ಶಿಂದೇನ ಪಾರಪತ್ಯ ಮಾಡುವ ವಿಚಾರವನ್ನು ಬಿಟ್ಟು, ನಾನಾ-ಶಿಂದೇರೊಡನೆ ಸ್ನೇಹದ ಮಾತುಗಳನ್ನು ನಡಿಸಿದನು; ಮತ್ತು ಜಪ್ತಿ ಮಾಡಿದ ನಾನಾನ ಜಹಗೀರು-ವಾಡೆಗಳನ್ನು ಬಿಟ್ಟುಕೊಟ್ಟನು. ಬಳಿಕ ಸುಮುಹೂರ್ತವನ್ನು ನೋಡಿ, ನಾನಾನು ತನ್ನ ವಾಡೆಗೆ ಬಂದು ಅಲ್ಲಿ ಇರಲಾರಂಭಿಸಿದನು (ಮಾರ್ಗಶೀರ್ಷಶುದ್ಧ ೧೫). ಈಕಾಲಕ್ಕೆ ೨ ನಾಲಿಗೆಯವನಾದ ಬಾಜಿರಾಯನು ನಾನಾನಿಗೆ ರಾಜ್ಯಕಾರ್ಯವನ್ನು ಕಯ್ಕೊಳ್ಳಬೇಕೆಂದು ಆಗ್ರಹ-ಮಾಡುತ್ತಿದ್ದನು, ಮತ್ತು ಒಳಗಿಂದೊಳಗೇ ಅವನ ಅಧಿಕಾರವನ್ನು ಬೆಳೆಯಗೊಡಬಾರದೆಂಬ ಉದ್ದೇಶದಿಂದ ಶಿಂದೇನಿಗೆ ಪುಣೆಯಲ್ಲೇ ಇರಬೇಕೆಂದು ಬೇಡಿಕೊಳ್ಳುತ್ತಿದ್ದನು!! ಮುಂದೆ ಅವನ ಮಾತು ಕೇಳದೆ ಶಿಂದೇನು ತನ್ನ ರಾಜ್ಯಕ್ಕೆ ತಿರುಗಿ ಹೋಗುವ ನಿಶ್ಚಯವನ್ನು ಮಾಡಿದ ಕೂಡಲೆ, ಅವನು ಒಂದು ದಿನ ರಾತ್ರಿ ವೇಷಬದಲಿಸಿಕೊಂಡು ನಾನಾನ ಮನೆಗೆ ಬಂದು ಅವನ ಕಾಲ್ಗೆರಗಿ, ರಾಜ್ಯಭಾರವನ್ನು ಕಯ್ಕೊಳ್ಳಬೇಕೆಂದು ಅವನನ್ನು ಅಂಗಲಾಚಿ ಬೇಡಿಕೊಂಡನು. ಆಗ ನಾನಾನು ಕನಿಕರದಿಂದಲೊ ಪೇಶ್ವಾಯಿಯ ಅಭಿಮಾನದಿಂದಲೊ ರಾಜಕಾರ್ಯವನ್ನು ನಡಿಸಲಾರಂಭಿಸಿದನು. ಆದರೂ ಅವನ ಮನಸ್ಸಿನಲ್ಲಿ ಪೇಶ್ವೇನು ವಿಶ್ವಾಸಘಾತಕತನವನ್ನು ಮಾಡಬಹುದೆಂಬ ಸಂಶಯವು ಪೂರ್ಣವಾಗಿತ್ತು.

ಈಕಾಲಕ್ಕೆ ಮಾರ್ಕ್ವೀಸ ವೆಲಸ್ಲೆಯು ಈದೇಶದ ಸರ್ವಾಧಿಪತಿಯಾಗಿದ್ದನು. ಅವನು ಯುಕ್ತಿಯಿಂದ ನಿಜಾಮನನ್ನು ಸಹಾಯಸೇನಾಪದ್ಧತಿ (ಸಬ್ಸಿಡಿಯರಿಸಿಸ್ಟಿಮ್)ಗೆ ಒಡಂಬಡಿಸಿ, ಪೇಶ್ವೇನನ್ನು ಒಡಂಬಡಿಸಲಿಕ್ಕೆ ಯತ್ನನಡಿಸಿದನು. ಅದಕ್ಕೆ ನಾನಾನು ಒಡಂಬಡದೆ ಪೇಶ್ವೇನಿಂದ ಅದರಂತೆ ಒಂದು ಕಾಗದ ಬರಿಸಿದನು. ಮುಂದೆ ಇಂಗ್ಲಿಷರು ಟೀಪುವಿನೊಡನೆ ಕಡೆಯ ಯುದ್ಧವನ್ನು ಹೂಡಿದಾಗ ಅವರು ಮೊದಲಿನ ಒಪ್ಪಂದದಂತೆ ದಂಡಿನ ಸಹಾಯ ಮಾಡಲಿಕ್ಕೆ ಪೇಶ್ವೇನನ್ನು ಕೇಳಿದರು. ಆಗ ಪಟವರ್ಧನ, ರಾಸ್ತೆ, ವಿಂಚೂರಕರ, ಗೋಖಲೆ ಮುಂತಾದ ಸರದಾರರ ದಂಡನ್ನು ಒಟ್ಟುಗೂಡಿಸಿ, ಪರಶುರಾಮಭಾವು ಪಟವರ್ಧನನನ್ನು ಅದರ ಮೇಲೆ ಮುಖ್ಯದಳವಾಯಿಯನ್ನು ನಿಯಮಿಸಿ ಇಂಗ್ಲಿಷರ ನೆರವಿಗೆ ಕಳುಹಬೇಕೆಂಬ ನಾನಾನ ಆಲೋಚನೆಗೆ ಬಾಜಿರಾಯನು ಒಪ್ಪಿಕೊಂಡಂತೆ ಹೊರಗೆ ತೋರಿಸಿ, ಒಳಗಿಂದೊಳಗೇ ಟೀಪುಸುಲ್ತಾನನಿಗೆ ಸಹಾಯಮಾಡಬೇಕೆಂದು ಶಿಂದೇನೊಡನೆ ಆಲೋಚಿಸಿದನು!!

ಆದರೆ ತುಸುದಿವಸದಲ್ಲೇ ಇಂಗ್ಲಿಷರು ನಿಜಾಮನ ಸಹಾಯದಿಂದ ಟೀಪುವಿನ ರಾಜ್ಯವನ್ನು ಹಿಡಿದುಕೊಂಡರು ಮತ್ತು ಟೀಪುವು ರಣಭೂಮಿಯಲ್ಲಿ ಸತ್ತನು (ಶಕೆ ೧೭೨೧ ಚೈತ್ರವದ್ಯ ೩೦). ಆಗ ಸರ್ವಾಧಿಪತಿಯು ಕೆಲವು ಶರ್ತುಗಳಿಗೆ ಪೇಶ್ವೇನು ಒಡಂಬಟ್ಟರೆ ಮಾತ್ರ ಅವನಿಗೆ ೧೦ ಲಕ್ಷದ ರಾಜ್ಯವನ್ನು ಕೊಡುವೆನೆಂದು ಪತ್ರ ಬರೆದನು. ಆಶರ್ತುಗಳಾವವೆಂದರೆ:—

೧. ಪೇಶ್ವೇನು ಇಂಗ್ಲಿಷರ ಸಹಾಯಕ್ಕೆ ದಂಡು ಕಳುಹದೆ ಟೀಪುವಿನ ವಕೀಲನನ್ನು ತನ್ನ ರಾಜಧಾನಿಯಲ್ಲಿ ಇಟ್ಟುಕೊಂಡುದರಿಂದ ಅವನಿಗೆ ಮೈಸೂರ ರಾಜ್ಯದ ಭಾಗವನ್ನು ಕೇಳಲಿಕ್ಕೆ ಹಕ್ಕು ಇಲ್ಲ.

೨. ಪೇಶ್ವೇನು ಮೈಸೂರರಾಜ್ಯದ ಮೇಲಿದ್ದ ತನ್ನ ಚೌಥದ ಹಕ್ಕನ್ನು ಬಿಟ್ಟುಕೊಡಬೇಕು, ನಿಜಾಮಅಲ್ಲಿಯಂತೆ ಇಂಗ್ಲಿಷರ ೬೦೦೦ ದಂಡನ್ನು ತನ್ನ ರಾಜ್ಯದಲ್ಲಿಟ್ಟುಕೊಳ್ಳಬೇಕು, ಮತ್ತು ನಿಜಾ

ಮನೊಡನೆ ಬಂದ ತನ್ನ ಜಗಳಗಳನ್ನು ಇಂಗ್ಲಿಷರ ವಿದ್ಯಮಾನ ತೀರಿಸಿಕೊಳ್ಳಬೇಕು.

೩. ಪೇಶ್ವೇನು ಸುರತಪಟ್ಟಣದ ಉತ್ಪನ್ನದಲ್ಲಿದ್ದ ತನ್ನ ಪಾಲನ್ನು ಬಿಟ್ಟುಕೊಟ್ಟು, ಅದರ ಬದಲು ಬೇರೆ ಪ್ರಾಂತವನ್ನು ತೆಗೆದುಕೊಳ್ಳಬೇಕು.

೪. ಪರಚಕ್ರ ಬಂದರೆ ನಿಜಾಮು ಪೇಶ್ವೆ ಭೋಸಲೆ ಇವರು ಇಂಗ್ಲಿಷರಿಗೆ ನೆರವಾಗಬೇಕು.

೫. ಪೇಶ್ವೇನು ಪ್ರೆಂಚರಿಗೆ ತನ್ನ ರಾಜ್ಯದಲ್ಲಿ ಆಶ್ರಯ ಕೊಡಕೂಡದು.

ಈಪತ್ರಕ್ಕೆ ನಾನಾನು ಉತ್ತರ ಬರೆದುದೇನಂದರೆ:—

೧. ಒಳಜಗಳದ ಮೂಲಕವಾಗಿ ಪೇಶ್ವೇಸಿಗೆ ದಂಡುಕಳುಹಲಿಕ್ಕೆ ಅನುಕೂಲವಾಗಲಿಲ್ಲ; ಮತ್ತು ಯುದ್ಧಕಾಲದಲ್ಲಿಯಾದರೂ ವಕೀಲನನ್ನು ಇಟ್ಟುಕೊಳ್ಳುವುದು ಈದೇಶದ ಸಾಂಪ್ರದಾಯವಿದೆ.

೨. ಮೈಸೂರದ ಚೌಥದ ಬದಲು ೧೦ ಲಕ್ಷದ ಪ್ರಾಂತವನ್ನು ತೆಗೆದುಕೊಳ್ಳಲಿಕ್ಕೆ ಅಡ್ಡಿಯಿಲ್ಲ; ಆದರೆ ಸುರತದ ಪಾಲನ್ನು ಬಿಡಲಿಕ್ಕಾಗುವದಿಲ್ಲ.

೩. ಇಂಗ್ಲಿಷರ ೨ ಪಟಾಲಮುಗಳನ್ನು ಪೇಶ್ವೇನ ರಾಜ್ಯದಲ್ಲಿ ಇಟ್ಟುಕೊಳ್ಳುವೆವು. ಆದರೆ ಆಪಟಾಲಮುಗಳನ್ನು ಜಂಜೀರಾ ಸಂಸ್ಥಾನವನ್ನು ಹಿಡಿದುಕೊಳ್ಳಲಿಕ್ಕೂ ಮಾಂಡಲಿಕರಾಜರನ್ನು ದಂಡಿಸಲಿಕ್ಕೂ ಉಪಯೋಗಿಸುವೆವು.

೪. ಫ್ರೆಂಚರು ಈದೇಶಕ್ಕೆ ದಂಡೆತ್ತಿಬಂದರೆ ಪೇಶ್ವೇನು ಇಂಗ್ಲಿಷರಿಗೆ ನೆರವಾಗುವನು; ಆದರೆ ಫ್ರೆಂಚರಿಗೆ ತನ್ನ ದಂಡಿನಲ್ಲಿ ಉದ್ಯೋಗಕೊಡುವ ತನ್ನ ಸ್ವಾತಂತ್ರ್ಯವನ್ನು ಅವನು ಬಿಡಲಾರನು.

೫. ಭೋಸಲೆಯು ಪೇಶ್ವೇನ ಮಾಂಡಲಿಕನಾದ್ದರಿಂದ ಅವನ ಹೆಸರು ಈಯೊಪ್ಪಂದದಲ್ಲಿ ಬರಕೂಡದು; ಮತ್ತು ನಿಜಾಮುನ ಸಂಬಂಧದ ಜಗಳಗಳಲ್ಲಿ ಇಂಗ್ಲಿಷರ ಮಧ್ಯಸ್ಥಿಕೆಗೆ ಪೇಶ್ವೇನು ಒಡಂಬಡಲಾರನು.

ಇದು ನಾನಾನ ರಾಜಕೀಯ ಸಂಬಂಧಕಡೆಯ ಮಹತ್ವದ ಪತ್ರವಾದ್ದರಿಂದ ಇದನ್ನು ವಿಸ್ತಾರವಾಗಿ ಬರೆದಿದ್ದೇವೆ. ಇದರಲ್ಲಿ ಅವನು ಪೇಶ್ವಾಯಿಗೆ ಪ್ರತಿಕೂಲವಾದ ಎಷ್ಟೋ ಮಾತುಗಳನ್ನು ನಿರಾಕರಿಸಿ, ವಾರ್ನಿಂಗಟನ್ ದೊರೆಯ ಸಹಾಯ-ಸೇನಾಪದ್ಧತಿಗೆ ಒಡಂಬಡಲಿಲ್ಲ; ಭೋಸಲೇನನ್ನು ಸ್ವತಂತ್ರಮಾಡುವ ಪ್ರಯತ್ನಕ್ಕೆ ಇಂಬುಗೊಡಲಿಲ್ಲ; ಮತ್ತು ಸುರತದಲ್ಲಿಯೂ ನಿಜಾಮನ ರಾಜ್ಯದಲ್ಲಿಯೂ ಇದ್ದ ತನ್ನ ಹಕ್ಕುಗಳನ್ನು ಬಿಟ್ಟುಕೊಡಲಿಲ್ಲ. ಆದರೆ ಮುಂದೆ ೨೦ ವರ್ಷಗಳೊಳಗೆ ಈಹಕ್ಕುಗಳೇಕೆ ಶಿವಾಜಿಯಿಂದ ದೊರಕಿಸಲ್ಪಟ್ಟ ಎಲ್ಲ ರಾಜ್ಯವು ಇಂಗ್ಲಿಷರ ಕಯ್ಸೇರಬಹುದೆಂಬ ವಿಚಾರವು ಆಕಾಲಕ್ಕೆ ನಾನಾನ ಕನಸುಮನಸುಗಳಲ್ಲಿಯಾದರೂ ಬಂದಿರಲಿಕ್ಕಿಲ್ಲವಲ್ಲ!!

ಈಕಾಲಕ್ಕೆ ಸಾತಾರೆಯ ಮಹಾರಾಜನ ತಮ್ಮನಾದ ಚತುರಶೃಂಗನು ಕಾವಲಿನಿಂದ ತಪ್ಪಿಸಿಕೊಂಡು ಓಡಿಹೋಗಿ, ದಂಡುಕೂಡಿಸಿ, ರಾಸ್ತೆ-ಪ್ರತಿನಿಧಿಗಳ ದಂಡುಗಳನ್ನು ಎಷ್ಟೋ ಕಡೆಯಲ್ಲಿ ಸೋಲಿಸಿದನು. ಮಹಾದಾಜಿಶಿಂದೇನ ಹೆಂಡಂದಿರ ಪಕ್ಷಹಿಡಿದ ಕೊಲ್ಹಾಪುರದ ಅರಸನು ಧೊಂಡೋಪಂತಗೋಖಲೇನನ್ನು ಬಾರಿಬಾರಿಗೆ ಸೋಲಿಸಿ ಕರ್ನಾಟಕವನ್ನು ಸುಲಿದು ಹಾಳುಮಾಡಿ, ತಾಸಗಾವಿಯನ್ನು ಹಿಡಿದುಕೊಂಡು, ಅಲ್ಲಿದ್ದ ಪಟವರ್ಧನನ ಅರಮನೆಯನ್ನು ಸುಟ್ಟುಬಿಟ್ಟನು. ಈಹಾವಳಿಯನ್ನು ಕೇಳಿ ನಾನಾನು ದಸರೆಯಾದ ಕೂಡಲೆ ಪುಣೆಯಿಂದ ದಂಡುಕಳುಹುವೆನೆಂದು ಪಟವರ್ಧನನಿಗೆ ಬರೆದು ತಿಳಿಸಿದನು. ಆದರೆ ಪರಶುರಾಮಭಾವು ಪಟವರ್ಧನನು ಸಿಟ್ಟಿನಿಂದಲೊ ಉಲುಕೋಚಿತನದಿಂದಲೊ ಹೆಮ್ಮೆಯಿಂದಲೊ ಪುಣೆಯಿಂದ ಬರುವ ದಂಡಿನ ಹಾದಿ ನೋಡದೆ ಕೊಲ್ಹಾಪುರದ ಅರಸನಿಗೆ ಇದುರಾಗಿ ಪಟಣಕುಡಿಯೆಂಬಲ್ಲಿ ಸೋತು ಸತ್ತನು (ಭಾದ್ರಪದ ಶಕೆ ೧೭೨೧).

ಈಯನರ್ಥದ ಸುದ್ದಿಯನ್ನು ಕೇಳಿ ನಾನಾನು ನೊಂದುಕೊಂಡನು. ಅವನು ಪಟವರ್ಧನ-ಮನೆತನದಲ್ಲಿ ಹುಟ್ಟಿದ ಜಗಳ

ವನ್ನು ನೊಂದಿಸಲಿಕ್ಕೆ ಯತ್ನಮಾಡಿ ಕೊಲ್ಲಾಪುರದ ಅರಸನ ಪಾರ ಪತ್ಯ ಮಾಡಲಿಕ್ಕೆ **ಗಣಪತರಾವ ಪಾನಸೆ** ಎಂಬ ದೇಶಸ್ಥ ಸರದಾ ರನೊಡನೆ ದಂಡನ್ನು ಕಳುಹಿದನು. ಆದರೆ ಈದಂಡಿನವರು ಕೊ ಲ್ಲಾಪುರದ ಅರಸನನ್ನು ಹಣ್ಣುಮಾಡುವದರೊಳಗೇ ನಾನಾನ ಅಂ ತವಾಯಿತು. ಮಾಘವದ್ಯದಲ್ಲಿ ಅವನಿಗೆ ಜ್ವರ ಬಂದವು; ಆಜ್ವರವು ದಿನದಿನಕ್ಕೆ ಹೆಚ್ಚಾಗಿ ಫಾಲ್ಗುಣವದ್ಯ ತೃತೀಯಾ ಗುರುವಾರ ದಿವ ಸ ನಡುವಿರುಳಿನಲ್ಲಿ ಅವನು ಪ್ರಾಣಬಿಟ್ಟನು (ಶಕೆ ೧೭೨೧).

ನಾನಾನು ಸತ್ತಾಗ ಅವನ ಹೆಂಡಂದಿರಾದ **ಬಗಾಬಾಯಿ ಜೀವುಬಾಯಿ** ಎಂಬವರಿಬ್ಬರು ಸಿದ್ಧ**ಟೋಂಕ**ವೆಂಬಲ್ಲಿ ದೇವತಾ ಸೇವೆಗೋಸ್ಕರ ನಿಂತಿದ್ದರು. ಅವರು ನಾನಾನ ಸಾವಿನ ಸುದ್ದಿ ಯನ್ನು ಕೇಳಿದ ಕೂಡಲೆ ಪುಣೆಗೆ ಬಂದರು. ಅವರೊಳಗೆ ಬಗಾ ಬಾಯಿಯೆಂಬವಳು ನಾನಾನು ಸತ್ತ ೧೫ನೆಯ ದಿವಸವೇ ಪ್ರಾಣ ಬಿಟ್ಟಳು. ಜೀವುಬಾಯಿಯು ಆಗ ೯ ವರ್ಷದ ಬಾಲೆಯಾಗಿದ್ದಳು. ಈಕೆಯನ್ನು ಶಕೆ ೧೭೨೪ರ ವರೆಗೆ ಬಾಜಿರಾಯನು ತನ್ನ ಶನಿವಾರ ವಾಡೆಯೆಂಬರಮನೆಯಲ್ಲಿ ಇಟ್ಟುಕೊಂಡಿದ್ದನು. ಆವರ್ಷ ಹೋ ಳಕರನು ಪೇಶ್ವೇನನ್ನು ಪುಣೆಯಿಂದ ಓಡಿಸಲು, ಆಕೆಯು ಲೋಹ ಗಡಕ್ಕೆ ಹೋದಳು. ಮುಂದೆ ಆರ್ಥರ ವೆಲಸ್ಲೆಯ ಮಧ್ಯಸ್ಥಿಕೆ ಯಿಂದ ಪೇಶ್ವೇನು ಆಕೆಗೆ ತಿಂಗಳಿಗೆ ೧೦೦೦ ರೂಪಾಯಿ ಜೀವ ನಾಂಶವನ್ನು ಕೊಡಲೊಪ್ಪಿದನು. ಮುಂದೆ ಪೇಶ್ವೇನು ತನ್ನ ರಾಜ್ಯ ವನ್ನು ಇಂಗ್ಲಿಷರಿಗೊಪ್ಪಿಸಿ ಬ್ರಹ್ಮಾವರ್ತಕ್ಕೆ ಹೋಗುವ ವರೆಗೆ ಆಕೆ ಯು **ಪನವೇಲ**ವೆಂಬಲ್ಲೇ ಇದ್ದಳು. ಶಕೆ ೧೭೪೧ರಲ್ಲಿ **ಮೌಂಟ ಸ್ಟುವರ್ಟ ಎಲ್ಫಿನ್‌ಸ್ಟನ್** ದೊರೆಯು ಆಕೆಗೆ ಮೊದಲು ನಾನಾ ನಿಗೆ ನಡೆಯುತ್ತಿದ್ದ **ಮೇಣವೇಲ-ಬೇಲಬಾಗ** ಸಂಸ್ಥಾನಗಳನ್ನು ಬಿಟ್ಟುಕೊಟ್ಟನು. ಶಕೆ ೧೭೪೯ರಲ್ಲಿ ಜೀವುಬಾಯಿಗೆ ದತ್ತಕತೆಗೆ ದುಕೊಳ್ಳಲಿಕ್ಕೆ ಅಪ್ಪಣೆ ದೊರೆಯಲಿಲ್ಲ. ಮುಂದೆ ಶಕೆ ೧೭೭೫ರಲ್ಲಿ ಜೀವುಬಾಯಿಯು ತೀರಿಕೊಂಡುದರಿಂದ ಆಕೆಯ ಎರಡೂ ಸಂಸ್ಥಾ ನಗಳನ್ನು ಇಂಗ್ಲಿಷರು ತೆಗೆದುಕೊಂಡರು. ಬಳಿಕ ಮುಂಬಯಿಯಧಿ

ಪತಿಯಾದ ಬಾರ್ಟಲ್ ಫ್ರಿಯರ ದೊರೆಯು ಉದಾರಮನಸಿನಿಂದ ಮೇಣವೇಲಗ್ರಾಮವನ್ನು ನಾನಾನ ವಂಶಕನಾದ ಮಾಧವರಾವ ಬಲ್ಲಾಳನೆಂಬವನಿಗೆ ವಂಶಪರಂಪರ ಉಂಬಳಿಯಾಗಿ ಬಿಟ್ಟುಕೊಟ್ಟನು.

ನಾನಾಫಡನವೀಸನು ಸ್ವಭಾವದಿಂದ ಪುಕ್ಕನಾಗಿದ್ದನು. ಅವನಲ್ಲಿ ಕಲಿತನವು ಎಳ್ಳಷ್ಟಾದರೂ ಇದ್ದಿಲ್ಲ. ಫ್ರೆಂಚದಳವಾಯಿಯಾದ ಡ್ಯೂಪ್ಲೆಯಂತೆ, ಗುಂಡಿನ ಸಪ್ಪಳ ಕೇಳಿದ ಕೂಡಲೆ ಅವನ ಬುದ್ಧಿಯು ಮಸಣಿಸುತ್ತಿತ್ತು. ರಾಜತಂತ್ರಗಳಲ್ಲಿಯೂ ಜನರ ಸ್ವಭಾವ ಪರೀಕ್ಷಣದಲ್ಲಿಯೂ ಅವನು ಮೇಲೆ ಹೇಳಿದ ಫ್ರೆಂಚದಳವಾಯಿಯನ್ನು ಕೆಲಮಟ್ಟಿಗೆ ಹೋಲುತ್ತಿದ್ದನೆನ್ನಬಹುದು. ಅವನು ದೀರ್ಘೋದ್ಯೋಗಿಯೂ ನಿಯಮಿತನೂ ಮಿತಭಾಷಿಯೂ ಆಗಿದ್ದನು. ಅವನಿಗೆ ಒಣಚೇಷ್ಟೆಯೂ ಹಾಳುಹರಟೆಯೂ ಸೇರುತ್ತಿದ್ದಿಲ್ಲ. ಅವನಲ್ಲಿ ಕಲ್ಪನಾಶಕ್ತಿಯು ವಿಶೇಷವಾಗಿತ್ತು. ಅವನು ಹೆಚ್ಚು ಕಲಿತವನಾಗದಿದ್ದರೂ ಬಹುಶ್ರುತನಾಗಿದ್ದನು. ಅವನು ದೇವರು ಬ್ರಾಹ್ಮಣರಲ್ಲಿ ವಿಶ್ವಾಸವುಳ್ಳವನಾದರೂ ವಿಷಯವಾಸನೆಗೆ ಒಳಗಾಗಿದ್ದನು. ಅವನಿಗೆ ಫಲಜ್ಯೋತಿಷದಲ್ಲಿ ಪೂರ್ಣವಿಶ್ವಾಸವಿತ್ತು. ಅವನು ಕೆಲಮಟ್ಟಿಗೆ ಪರೋಪಕಾರಗುಣವುಳ್ಳವನಾದರೂ* ದ್ರವ್ಯಸಂಗ್ರಹಕ್ಕೆ ಮೆಚ್ಚಿದ್ದನು. ಆದ್ದರಿಂದ ಆಕಾಲದ ಜನರು ಅವನಿಗೆ ನವಕೋಟಿನಾರಾಯಣನೆನ್ನುತ್ತಿದ್ದರು.† ಆದರೆ ಅವನು ತನ್ನ ಹಣವನ್ನೆಲ್ಲ ತನ್ನ ಹತ್ತರ ಇಟ್ಟುಕೊಳ್ಳದೆ ಬೇರೆ ಬೇರೆ ಭಾಗದಲ್ಲಿದ್ದ

---

* ನಾನಾನು ಬೇಲಬಾಗದಲ್ಲಿ ವಿಷ್ಣುದೇವಾಲಯ, ತನ್ನ ಉಂಬಳಿ ಊರಾದ ವೇಳಾಸದಲ್ಲಿ ಕಾಳಭೈರವನ ಗುಡಿ, ಅವಡಸವೆಂಬಲ್ಲಿ ಈಶ್ವರನ ಗುಡಿ, ಮೇಣವಲದಲ್ಲಿ ಅಮೃತೇಶ್ವರನ ಗುಡಿ, ಲಕ್ಷ್ಮಿವಾಸುದೇವರ ಗುಡಿ ಮುಂತಾದ ಗುಡಿಗಳನ್ನೂ ಕೆಲವು ಪೂಲುಗಳನ್ನೂ ಕಟ್ಟಿಸಿದನು.

† ನಾನಾನಿಗೆ ವರ್ಷಕ್ಕೆ ಸುಮಾರು ೫ ಲಕ್ಷ ರೂಪಾಯಿಯ ಉತ್ಪನ್ನವಿತ್ತು, ಮತ್ತು ವೆಚ್ಚಹೋಗಿ ೧೨ ಲಕ್ಷ ಉಳಿಯುತ್ತಿತ್ತೆಂದು ತೋರುತ್ತದೆ. ಆ ರೆ ರಾಜಕಾರ್ಯದಲ್ಲಿ ಅವನಿಗೆ ಬಹಳ ಹಣ ಕಾಣಿಕೆಯಾಗಿ ಬರುತ್ತಿತ್ತು. ಹೈದರಅಲ್ಲಿಯೇ ಒಂದು ಒಪ್ಪಂದದಲ್ಲಿ ೧ ಲಕ್ಷ ಹ[illegible]ನ್ನು ಕೊಟ್ಟನಂತೆ.

ತನ್ನ ನಂಬಿಗಸ್ಥರಾದ ಸಾವುಕಾರರ ಬಳಿಯಲ್ಲಿಟ್ಟಿದ್ದನು. ಆದ್ದರಿಂದ ಅವನನ್ನು ಸೆರೆ ಹಿಡಿದಾಗ ಅಥವಾ ಅವನು ಸತ್ತ ಬಳಿಕ ಶಿಂದೇ-ಪೇಶ್ವೇರಿಗೆ ಅವನ ಮನೆಯಲ್ಲಿ ಒಂದು ಕಾಸಾದರೂ ಗೊರೆಯಲಿಲ್ಲ. ಅವನಿಗೆ ಒಟ್ಟು ೯ ಮಂದಿ ಹೆಂಡಂದಿರಾದರು. ಅವರೊಳಗೆ ೭ ಮಂದಿ ಅವನು ಇರುವಾಗಲೆ ತೀರಿಕೊಂಡರು. ಈಯೇಳು ಜನರಲ್ಲಿ ೩ ಮಂದಿ ಮಾತ್ರ ಹಡೆದರು, ಮತ್ತು ಆಕೂಸುಗಳು ಚಿಕ್ಕಂದಿನಲ್ಲೇ ಸತ್ತವು. ಆದ್ದರಿಂದ ನಾನಾನಿಗೆ ಗೃಹಸೌಖ್ಯವು ಏನೂ ಇದ್ದಿಲ್ಲೆನ್ನಬಹುದು. ವಿಷಯವಾಸನೆಯೆಂಬ ದುರ್ಗುಣದ ಹೊರತು ನಾನಾನಲ್ಲಿ ಪರೋತ್ಕರ್ಷದ ಅಸಹನತೆಯೆಂಬ ದುರ್ಗುಣವಿತ್ತೆಂದು ಸರಂಜಾಮಿಯೆಂಬವರು "ಶಿಂದೇ ಮನೆತನದ ಇತಿಹಾಸ" ಎಂಬ ತಮ್ಮ ಗ್ರಂಥದಲ್ಲಿ ಬರೆಯುತ್ತಾರೆ. ಆದರೆ ಈದುರ್ಗುಣವು ಅವನಲ್ಲಿದ್ದಿಲ್ಲವೆಂದು ಬೇರೆ ಕೆಲಗ್ರಂಥಕಾರರು ಪ್ರತಿಪಾದಿಸುತ್ತಾರೆ. ಅದು ಹೇಗೇ ಇರಲಿ, ಅವನು ಈಭರತಖಂಡದಲ್ಲಿ ಹಿಂದೆ ಆಗಿ ಹೋದ ರಾಜಕಾರ್ಯಧುರಂಧರರಲ್ಲಿ ಒಬ್ಬನಾಗಿದ್ದನೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ.

# ೩ನೆಯ ಪ್ರಕರಣ,

## ಮೈಸೂರು-ಪಂಜಾಬಗಳ ಕಲಿಗಳು.




### ೧. ಹೈದರಅಲ್ಲಿ.

ನಮ್ಮ ಮಾತೃಭೂಮಿಯಾದ ಈಕರ್ನಾಟಕ ದೇಶದಲ್ಲಿ ಮೊಗಲರ ಸಾಮ್ರಾಜ್ಯವು ಎಂದೂ ಪೂರ್ಣವಾಗಿ ನೆಲೆಗೊಳ್ಳಲಿಲ್ಲ. ೧೬ನೆಯ ಶತಕದ ಕೊನೆಯಲ್ಲಿ ವಿಜಯನಗರದ ಬಲಾಢ್ಯವಾದ ರಾಜ್ಯವು ನಮ್ಮ ದುರ್ದೈವದಿಂದ ಹಾಳಾಗಲು ನಮ್ಮ ಈನಾಡಿನಲ್ಲಿ

ಆದಿಲ್‌ಶಾಹಿಯ ರಾಜ್ಯವು ಪ್ರಬಲವಾಯಿತು. ಮುಂದಿನ ಶತಕ ದಲ್ಲಿ ಅವರಂಗಜೇಬ ಬಾದಶಹನ ಅವಿವೇಕಸ್ವಾರ್ಥವೂ ಶಿವಾಜಿಯ ಪುಂಡತನದ ಹಾವಳಿಯೂ ಆದಿಲ್‌ಶಾಹಿಯನ್ನು ಹಾಳುಗೆಡವಿ, ಉ ತ್ತರ-ಪಶ್ಚಿಮ-ಕರ್ನಾಟಕಗಳಲ್ಲಿ ಅಸ್ವಸ್ಥತೆಯನ್ನುಂಟುಮಾಡಿದಾಗ ದಕ್ಷಿಣಕರ್ನಾಟಕದಲ್ಲಿ ಬೆಳೆಯುತ್ತಿದ್ದ ಮೈಸೂರ ಅರಸರು ಪುಂಡ ಪಾಳಯಗಾರರ ಹಾವಳಿಯನ್ನು ಮುರಿದು, ಪ್ರಜಾನುರಂಜಕರಾಗಿ ರಾಜ್ಯವನ್ನಾಳುತ್ತಿದ್ದರು. ಮುಂದಿನ ಶತಕದಲ್ಲಿ ಅಂದರೆ ೧೮ನೆಯ ಶತಕದಲ್ಲಿ ಮೈಸೂರ ರಾಜ್ಯದಲ್ಲಿ ರಾಜಕ್ರಾಂತಿಯು ಆಗಿ ರಾಜಸೂ ತ್ರವು ಅರಸುಮನೆತನದವರ ಕಯ್ಯನ್ನು ಬಿಟ್ಟು, ನಿರಕ್ಷರಕುಕ್ಷಿ ಯಾದ ಒಬ್ಬ ಮುಸಲ್ಮಾನ ಸಾಹಸಿಕನ ಕಯ್ಸೇರಿತು. ಆಸಾಹಸಿ ಕನೇ ಈಚರಿತ್ರನಾಯಕನಾದ **ಹೈದರಅಲ್ಲಿಯು.**

ಆವನಾದರೊಬ್ಬ ಮನುಷ್ಯನು ತನ್ನ ಬುದ್ಧಿಪರಾಕ್ರಮ-ಸಾಹ ಸಗಳಿಂದ ಅರಸನಾದ ಕೂಡಲೆ ಅವನು ರಾಜವಂಶದವನೆಂದು ಸಿದ್ಧಮಾಡಲಿಕ್ಕೆ ಎಷ್ಟೋ ಮಂದಿ ಪಂಡಿತರು ಮೇಲಾಡುತ್ತಾರೆಂ ಬದು ಇತಿಹಾಸ-ಪ್ರಸಿದ್ಧವಾದ ಮಾತೇ ಸರಿ. ಶಿವಾಜಿಯು ತನ್ನ ಪುಂಡತನದಿಂದ ಕೆಲನಾಡನ್ನು ದೊರಕಿಸಿದ ಕೂಡಲೆ ಗಾಗಾಭಟ್ಟ ನೆಂಬ ಪಂಡಿತನು ಅವನು ಕ್ಷತ್ರಿಯ ಕುಲದವನೆಂದು ನಿರ್ಣಯಿಸಿ, ಅವನ ಮುಂಜಿ ಮುಂತಾದ ಸಂಸ್ಕಾರಗಳನ್ನು ಮಾಡಿಸಲಿಲ್ಲವೇ? ಅದೇಕೆ, ಕೋರ್ಸಿಕಾದಲ್ಲಿದ್ದ ಒಬ್ಬ ಬಡ ವಕೀಲನ ಮಗನಾದ ನೆಪೋಲಿಯನ್ ಬೊನಾಪಾರ್ಟನು ಫ್ರಾನ್ಸದೇಶದ ಬಾದಶಹನಾದ ಕೂಡಲೆ, ಅವನಿಗೆ ಹೆಣ್ಣುಕೊಡುವ ಉದ್ದೇಶದಿಂದ ಆಸ್ಟ್ರಿಯದ ಬಾದಶಹನು ಎಷ್ಟೋ ಮಂದಿ ಜೋಯಿಸರನ್ನು ಕೂಡಿಸಿ, ಅವನು ರಾಜವಂಶದವನೆಂದು ಗೊತ್ತುಮಾಡಿ, ಅವನೊಡನೆ ಶರೀರಸಂಬಂ ಧವನ್ನು ಮಾಡಲಿಲ್ಲವೇ? ಅದೇ ಪ್ರಕಾರ ಹೈದರಅಲ್ಲಿಯು ಮೈಸೂ ರಿನ ಅರಸನಾದ ಕೂಡಲೆ ಅವನು, ಮೊಗಲರು ಈಖಂಡಕ್ಕೆ ಬರು ವದಕ್ಕಿಂತ ಮೊದಲು ಇಲ್ಲಿ ರಾಜ್ಯವಾಳಿದ ಲೋಡಿ ಮನೆತನದ ಮುಖ್ಯಸ್ಥನಾದ **ಭಾಯಿಲೋಳ**ನೆಂಬವನ ವಂಶದವನೆಂದು ಆ

ಕಾಲದ ಮುಸಲ್ಮಾನಪಂಡಿತರು ಕ್ಲಿಷ್ಟಯಿಸಿದರು. ಅವರು ಹೇಳು ವದೇನಂದರೆ:—

೧೭ನೆಯ ಶತಕದ ಆರಂಭದಲ್ಲಿ **ಮಹಮ್ಮದ ಭಾಯಿಲೋಳ** ನೆಂಬೊಬ್ಬ ಬಡ ಮುಸಲ್ಮಾನನು ತಾನಿದ್ದ ಪಂಜಾಬಪ್ರಾಂತವನ್ನು ಬಿಟ್ಟು, ಕಲ್ಬುರ್ಗಾ ಜಿಲ್ಲೆಯಲ್ಲಿದ್ದ **ಆಳಂದ**ವೆಂಬೂರಿಗೆ ಹೊಟ್ಟೆ ಹೊರಕೊಳ್ಳುವ ಉದ್ದೇಶದಿಂದ ಬಂದು, ಅಲ್ಲಿ ಇರಲಾರಂಭಿಸಿದನು. ಅವನಿಗೆ **ಮಹಮ್ಮದ ಅಲ್ಲಿ, ಮಹಮ್ಮದವಾಲಿ** ಎಂಬಿಬ್ಬರು ಗಂಡುಮಕ್ಕಳಾದರು. ಅವರು ದೊಡ್ಡವರಾದ ಬಳಿಕ ಭಾಯಿಲೋಳನು ಮಡಿದನು. ಮುಂದೆ ಕೆಲದಿವಸಗಳ ಮೇಲೆ ಅವನ ಹಿರಿಮಗನಾದ ಅಲ್ಲಿಯು ಆಳಂದವನ್ನು ಬಿಟ್ಟು, ತನ್ನ ತಮ್ಮನಾದ ವಾಲಿಯೊಡನೆ ಮೈಸೂರ ರಾಜ್ಯದಲ್ಲಿದ್ದ ಕೋಲಾರಕ್ಕೆ ಹೋಗಿ, ಅಲ್ಲಿಯೊಬ್ಬ ಬಡಸಿಪಾಯಿಯಾದನು. ಮುಂದೆ ಅಲ್ಲಿಯು ಬಹಳ ದಿವಸ ಬಾಳಲಿಲ್ಲ. ಅವನು ೧೬೭೮ರಲ್ಲಿ ಸತ್ತಕೂಡಲೆ ಅವನ ತಮ್ಮನಾದ ವಾಲಿಯು ತನ್ನ ಅತ್ತಿಗೆಯನ್ನೂ ಆಕೆಯ ನಾಲ್ಕು ಮಂದಿ ಗಂಡುಮಕ್ಕಳನ್ನೂ ಮನೆಬಿಟ್ಟು ಹೊರಗೆ ಹಾಕಿದನು. ಆಗಲಾ ನಿರಾಶ್ರಿತಳಾದ ಅಬಲೆಯು ತನ್ನ ನಾಲ್ಕು ಮಂದಿ ಗಂಡುಮಕ್ಕಳೊಡನೆ ಊರಬಿಟ್ಟು ಬಹುಪ್ರಯಾಸದಿಂದ ಹೊಟ್ಟೆ ಹೊರಕೊಳ್ಳಲಾರಂಭಿಸಿದಳು. ಆಕೆಯ ನಾಲ್ಕುಮಂದಿ ಗಂಡುಮಕ್ಕಳೊಳಗೆ ಎಲ್ಲಕ್ಕೂ ಚಿಕ್ಕವನಾದ **ಫತ್ತೆ ಮಹಮ್ಮದನು** ಬಲು-ಗಟ್ಟಿಗನಾದ್ದರಿಂದ, ಗಂಜೀಕೋಟೆ, ಸೀರಾ, ಆರ್ಕಾಟ ಮುಂತಾದ ಸ್ಥಳಗಳಲ್ಲಿ ಕಲಿತನವನ್ನು ತೋರಿಸಿ ಹೆಸರಾಗಿ, ಕಟ್ಟಕಡೆಗೆ ಮೈಸೂರಿನ ದಂಡಿನಲ್ಲಿ ಫೌಜದಾರಿಯನ್ನೂ **ಬುದ್ದಿಕೋಟ**ವೆಂಬೂರಿನ ಜಹಗೀರಿಯನ್ನೂ ದೊರಕಿಸಿದನು. ಅವನಿಗೆ ಮೂರುಮಂದಿ ಹೆಂಡಂದಿರಿದ್ದರು. ಅವರೊಳಗೆ ಕಿರಿಯವಳಾದ ಹೆಂಡತಿಯು* ಹೊಟ್ಟೆಯಲ್ಲಿ **ಶಹಾಬಾಜ** (ಅಥವಾ ಇಸ್ಮಾಯಿಲ್), **ಹೈದರ** (ಹುಲಿ) ಎಂಬಿಬ್ಬರು ಗಂಡುಮಕ್ಕಳು ಹುಟ್ಟಿದರು. ಈಹೈದರನೇ

*ಈಕೆಯು ನವಾಯಿತ ಕುಲದವಳಾಗಿದ್ದಳೆಂದು ತಿಳಿಯುತ್ತದೆ.

ಮುಂದೆ ಹೆಸರಾದ ಹೈದರ ಅಲ್ಲಿಯು. ಇವನ ಜನ್ಮವು ೧೭೨೨ರಲ್ಲಿ ಆಯಿತು.

ನಮ್ಮ ಪೂರ್ವಜರಲ್ಲಿ ಐತಿಹಾಸಿಕ ಜ್ಞಾನದ ಸಂಬಂಧದಿಂದ ಹೆಚ್ಚು ಪ್ರೀತಿಯಿಲ್ಲುದರಿಂದಲೋ ಇತಿಹಾಸವು ತೀರ ಹೊಸ ಶಾಸ್ತ್ರವಾದ್ದರಿಂದಲೋ ನಮ್ಮೊಳಗೆ ಆಗಿ ಹೋದ ದೊಡ್ಡ ಜನರ ಬಾಲ್ಯದ ಸಂಬಂಧದಿಂದ ವಿಶೇಷವೇನೂ ಗೊತ್ತಾಗುವದಿಲ್ಲ. ಅದ ರೊಳಗೆ ಹೈದರ ಅಲ್ಲಿಯಂತಹ ಬಡವನ ಚಿಕ್ಕತನದ ಬಗ್ಗೆ ಏನೂ ತಿಳಿಯುವ ಸಂಭವವಿಲ್ಲೆನ್ನ ಬಹುದು. ಆದ್ದರಿಂದ ಗೊತ್ತಾದ ತುಸು ಸಂಗತಿಗಳನ್ನು ಮಾತ್ರ ಇಲ್ಲಿ ಕೊಡುವೆವು.

ಫತ್ತೆಮಹಮ್ಮದನು ಮೈಸೂರಿನಲ್ಲಿದ್ದನೆಂದು ಹಿಂದೆ ಬರೆದಿರು ತ್ತೇವಷ್ಟೇ. ಮುಂದೆ ಅವನು ಏನೋ ಒಂದು ಕಾರಣದಿಂದ ಆವೂರನ್ನು ಬಿಟ್ಟು, ಸೀರಾ ಯೆಂಬಲ್ಲಿದ್ದ ಮೊಗಲರ ದಂಡಿನೊ ಳಗೆ ಊಳಿಗಕ್ಕೆ ನಿಂತನು. ತರುವಾಯ ಆರ್ಕಾಟದ ನವಾಬನು ಸೀರಾಕ್ಕೆ ದಂಡೆತ್ತಿ ಬರಲು, ಆಕಾಲಕ್ಕಾದ ಕಾಳಗದಲ್ಲಿ ಫತ್ತೆ ಮುಹಮ್ಮದನೂ ಮೊಗಲರ ದಳವಾಯಿಯೂ ಮಡಿದರು. ಆದ್ದ ರಿಂದ ನಿರಾಶ್ರಿತಳಾದ ಹೈದರ ಅಲ್ಲಿಯ ತಾಯಿಯು ತನ್ನ ಇದ್ದ ಸೊತ್ತನ್ನೆಲ್ಲ ಸುಲಿಗೆಯಲ್ಲಿ ಕಳೆದುಕೊಂಡು, ತೊಳಲಿ, ಬಳಲಿ, ತನ್ನ ಮಕ್ಕಳೊಡನೆ ಬೆಂಗಳೂರಿಗೆ ಬಂದು ಮುಟ್ಟಿದಳು. ಹೈದರ ಅಲ್ಲಿ ಯ ಅಣ್ಣನಾದ ಶಹಾಬಾಜನು ದೊಡ್ಡವನಿದ್ದ ಕಾರಣ ಅವನಿಗೆ ಮೈಸೂರ ದಂಡಿನಲ್ಲಿಯೊಂದು ಚಿಕ್ಕ ಕೆಲಸವು ದೊರೆಯಿತು. ಮುಂದೆ ಕೆಲವು ವರ್ಷಗಳಾದ ಬಳಿಕ ಶಹಾಬಾಜನು ದೇವನಹಳ್ಳಿ ಯನ್ನು ಮುತ್ತಲಿಕ್ಕೆ ಹೋಗಲು, ಹೈದರನು ಅವನೊಡನೆ ಹೋ ದನು. ಆಗ ಹೈದರನು ಅನಿಯಮಿತನೂ ಕ್ಷುದ್ರದೃಷ್ಟಿಯೂ ನಿರ ಕ್ಷರಕುಕ್ಷಿಯೂ ಆಗಿದ್ದನೆಂದು ತಿಳಿಯುತ್ತದೆ. ಆದರೂ ದೇವನ ಹಳ್ಳಿಯ ಮುತ್ತಿಗೆಯಲ್ಲಿ ಅವನು ತೋರಿಸಿದ ಗುರಿಗಾರಿಕೆಯೂ ಸಾಹಸವೂ ಉತ್ಸಾಹವೂ ಅವನು ಮುಂದೆ ಹೊಂದಿದ ಘನತೆಗೆ ಮುಖ್ಯ ಕಾರಣಗಳಾದವೆನ್ನಬಹುದು. ಏಕಂದರೆ ಅವನ ಎದೆ

ಗಾರಿಕೆ ದಿಟ್ಟತನಗಳ ಸುದ್ದಿಯನ್ನು ಕೇಳಿ, ಆಕಾಲಕ್ಕೆ ಮೈಸೂರಿನ ಮುಖ್ಯ ಪ್ರಧಾನಿಯಾದ **ನಂಜರಾಜನು** ಮೈಸೂರ ದಂಡಿನಲ್ಲಿ ಅವನಿಗೆ ನಾಯಕನ ಕೆಲಸವನ್ನು ಕೊಟ್ಟನು (೧೭೪೯).

ಈಸಮಯಕ್ಕೆ ಹೈದರನಿಗೊಂದು ಉತ್ತಮ ಸಂಧಿಯು ದೊರೆಯಿತು. ಅದು ಹೇಗೆಂದರೆ: ಹೈದರಾಬಾದಿನ ಮೊದಲನೆಯ ನಿಜಾಮನಾದ **ಮೀರ ಕಮರುದ್ದೀನನು** (ನಿಜಾಮುಲ್ಮುಲುಖನು) ೩೫ ವರ್ಷ ರಾಜ್ಯವಾಳಿ, ೧೭೪೮ರಲ್ಲಿ ಸತ್ತನು. ಅವನಿಗೆ ೬ಮಂದಿ ಗಂಡು ಮಕ್ಕಳಿದ್ದರೂ ಅವನು ತಾನು ಸಾಯುವ ಕಾಲಕ್ಕೆ ತನ್ನ ಮಗಳ ಮಗನಾದ **ಮುಜಾಫರಜಂಗ** (ಹಿದಾಯತ್ತ ಮೊಹಿಯುದ್ದೀನನ ಮುಜಫರಜಂಗ)ನು ತನ್ನ ತರುವಾಯ ಪಟ್ಟವೇರ ಬೇಕೆಂದು ಮೃತ್ಯುಪತ್ರವನ್ನು ಬರೆದಿಟ್ಟಿದ್ದನು. ನಿಜಾಮುಲ್ಮುಲುಖನು ಮಡಿದಾಗ ಅವನ ಹಿರಿಮಗನಾದ **ಮೀರಗಾಸುದ್ದೀನನು** ದಿಲ್ಲಿಯ ದರಬಾರದಲ್ಲಿದ್ದನು. ಆದ್ದರಿಂದ ನಿಜಾಮುಲ್ಮುಲುಖನ ೨ನೆಯ ಮಗನಾದ ಮೀರಮಹಮ್ಮದ **ನಾಸಿರಜಂಗನು** ತನ್ನ ತಂದೆಯ ಮೃತ್ಯುಪತ್ರವನ್ನು ಲೆಕ್ಕಿಸದೆಯೂ ತನ್ನ ಅಣ್ಣನ ಹಕ್ಕನ್ನು ಮನ್ನಿಸದೆಯೂ ಪಟ್ಟವನ್ನು ಹಿಡಿದುಕೊಂಡನು. ಆದಕಾರಣ ಅವನಿಗೂ ಮುಜಾಫರಜಂಗನಿಗೂ ಪಟ್ಟದ ಸಂಬಂಧದಿಂದ ಯುದ್ಧವಾರಂಭವಾಯಿತು. ಕೂಡಲೆ ಹೊಸನಿಜಾಮನು ತನ್ನ ಮಾಂಡಲಿಕರಾದ ಆರ್ಕಾಟದ ನವಾಬನಿಗೂ ಮೈಸೂರಿನ ಅರಸನಿಗೂ ತನ್ನ ಸಹಾಯಕ್ಕೋಸ್ಕರ ದಂಡು ಕಳುಹಲಿಕ್ಕೆ ಬರೆದನು. ಈ ದಂಡಿನಲ್ಲೇ ನಮ್ಮ ಹೈದರನಾಯಕನಿದ್ದನು.

ಈಯುದ್ಧದ ವಿವರವನ್ನು ಇಲ್ಲಿ ಬರೆಯುವದು ಅಪ್ರಾಸಂಗಿಕವೇ ಸರಿ. ಆದ್ದರಿಂದ ನಮ್ಮ ಚರಿತ್ರನಾಯಕನ ಸಂಬಂಧವಿದ್ದಷ್ಟು ಸಂಗತಿಗಳನ್ನು ಮಾತ್ರ ನಾವು ಇಲ್ಲಿ ಬರೆಯುವೆವು. ಈಯುದ್ಧದ ಆರಂಭದಲ್ಲಿ ಫ್ರೆಂಚರ ದಂಡಿನವರು ಬಂಡುಮಾಡಿದ್ದರಿಂದ ನಾಸಿರಜಂಗನಿಗೆ ಗೆಲವು ಬಂತು. ಬಳಿಕ ಅತಿಸಾಹಸಿಯಾದ ಡ್ಯೂಪ್ಲೆಯು ಕೆಲ ಮುಸಲ್ಮಾನ ನವಾಬರನ್ನು ತನ್ನ ಕಡೆಗೆ ಮಾಡಿ

ಕೊಂಡು, ಗಿಂಜಿ ಕೋಟೆಯನ್ನು ಹಿಡಿದುಕೊಂಡು, ಮತ್ತೆ ಯುದ್ಧವನ್ನಾರಂಭಿಸಿದನು. ಈಯುದ್ಧವು ನಡೆದಾಗ ಕಡಪೆಯ ನವಾಬನು ನಾಸಿರಜಂಗನನ್ನು ವಿಶ್ವಾಸಘಾತದಿಂದ ಕೊಂದ ಕಾರಣ ಮುಜಾಫರಜಂಗನು ನಿಜಾಮನಾದನು, ದಕ್ಷಿಣದಲ್ಲಿ ಫ್ರೆಂಚರ ವರ್ಚಸ್ಸು ಬೆಳೆಯಿತು, ಮತ್ತು ಹೈದರನಿಗೆ ನಾಸಿರಜಂಗನ ಎಲ್ಲ ಸಂಪತ್ತನ್ನು ಸುಲಿದುಕೊಳ್ಳಲಿಕ್ಕೆ ಅನುವು ದೊರೆಯಿತು. ಆಗಲವನು ತನ್ನ ಸಂಪತ್ತಿನೊಡನೆ ಮೈಸೂರಿಗೆ ತಿರುಗಿ ಹೋಗುವದಕ್ಕಿಂತ ಮೊದಲು ಫ್ರೆಂಚರ ಮುಖ್ಯ ಪಟ್ಟಣವಾದ ಪುದುಚೇರಿಗೆ* ಹೋಗಿ, ಅಲ್ಲಿ ಫ್ರೆಂಚರ ಯುದ್ಧಶಿಕ್ಷಣವನ್ನು ನೋಡಿ ಚಕಿತನಾದನು.

ಮುಂದೆ ತುಸುದಿವಸದಲ್ಲೇ ಹೈದರನಿಗೆ ಮತ್ತೆ ದಂಡಿನೊಡನೆ ಹೋಗುವ ಪ್ರಸಂಗ ಬಂತು. ಇಂಗ್ಲಿಷರ ಆಶ್ರಿತನೂ ಹೆಸರಿಗೆ ಮಾತ್ರ ಆರ್ಕಾಟದ ನವಾಬನೂ ಆದ ಮಹಮ್ಮದ ಅಲ್ಲಿಯು ತನಗೆ ಸಹಾಯಮಾಡಲಿಕ್ಕೆ ದಂಡು ಕಳುಹಿದರೆ ತ್ರಿಚಿನಾಪಳ್ಳಿಯನ್ನು ಕೊಡುವೆನೆಂದು ವಚನಕೊಟ್ಟುದರಿಂದ, ಮೈಸೂರಿನ ಅರಸನು ಅವನಿಗೆ ನೆರವಾಗಲಿಕ್ಕೊಂದು ದಂಡು ಕಳುಹಿದನು. ಆದಂಡಿನಲ್ಲಿ ಹೈದರ ಅಲ್ಲಿಯು ರಾಹುತರ ನಾಯಕನಾಗಿದ್ದನು. ಆಬಡಿದಾಟದಲ್ಲಿ ಹೈದರನು ಇಂಗ್ಲಿಷರ ಕೆಲವು ತೋಪುಗಳನ್ನು ಹಿಡಿದುಕೊಂಡು, ಹೆಚ್ಚು ಮಂದಿ ಬೇಡರನ್ನು ತನ್ನ ದಂಡಿನಲ್ಲಿಟ್ಟುಕೊಂಡನು†. ಅವನು ಆದಂಡಯಾತ್ರೆಯಿಂದ ತಿರುಗಿ ಬಂದಕೂಡಲೆ ಮೈಸೂರ ಅರಸನಾದ ಚಿಕ್ಕಕೃಷ್ಣರಾಜನು ಅವನಿಗೆ ದಿಂಡಿಗಲ್ಲಿನ ಫೌಜದಾರಿಯನ್ನು ಕೊಟ್ಟನು (೧೭೫೫). ಆದ್ದರಿಂದ ಹೈದರನು ದಿಂಡಿ

---

* ಪುದುಚೇರಿಯನ್ನು ಮಾರ್ಟಿನ್ನನೆಂಬ ಒಬ್ಬ ಫ್ರೆಂಚ ಸಾಹಸಿಕನು ೧೬೭೪ರಲ್ಲಿ ಕಟ್ಟಿಸಿದನು. ಈಸಂಸ್ಥಾನದ ಕ್ಷೇತ್ರಫಲವು ೧೧೨ ಚಚ್ಚೌಕು ಮೈಲು. ಇದರಲ್ಲಿ ೧೪೧ ಹಳ್ಳಿಗಳಿರುತ್ತವೆ.

† ಇದೇ ಸಮಯಕ್ಕೆ ಹೈದರನು ಖಂಡೆರಾಯನೆಂಬೊಬ್ಬ ಬ್ರಾಹ್ಮಣನನ್ನು ತನ್ನ ರಾಯಸದವನಾಗಿಟ್ಟುಕೊಂಡನು.

ಗಲ್ಲಿಗೆ ಹೋಗಿ, ಅಲ್ಲಿಯೊಬ್ಬ ಫ್ರೆಂಚ ಕಯ್ಗಾರಿಕೆಯುವನ ಸಹಾಯು ದಿಂದ ತೋಫುಖಾನೆಯನ್ನಿಟ್ಟು, ತನ್ನ ದಂಡಿನವರ ಸಂಖ್ಯೆಯನ್ನು ಬೆಳಿಸಿದನು.

ಅಷ್ಟರಲ್ಲಿ ಹೈದರನಿಗೆ ಮತ್ತೊಂದು ಸಂಧಿಯು ದೊರೆಯಿತು. ಮೈಸೂರ ದಂಡು ಮಹಮ್ಮದ ಅಲ್ಲಿಗೆ ನೆರವಾಗಲಿಕ್ಕೆ ಹೋದ ಸುದ್ದಿಯನ್ನು ಕೇಳಿ, ಫ್ರೆಂಚರಿಂದ ಪ್ರೇರಿತನಾದ ನಿಜಾಮನು ಶ್ರೀರಂಗಪಟ್ಟಣಕ್ಕೆ ದಂಡೆತ್ತಿ ಬಂದನು. ಆಗ ಮೈಸೂರಿನ ಮುಖ್ಯ ಪ್ರಧಾನಿಯಾದ ನಂಜರಾಜನು ಹೇಗಾದರೂ ಮಾಡಿ ಹಣಕೊಡಿಸಿ, ನಿಜಾಮನಿಗೆ ಕಪ್ಪುಗಾಣಿಕೆಯನ್ನು ಕೊಟ್ಟು, ಅವನನ್ನು ಸಮಾಧಾನ ಮಾಡಿ ತಿರುಗಿ ಕಳುಹಿದನು. ಆದರೆ ಇಷ್ಟರಿಂದಲೇ ಮೈಸೂರ ರಾಜ್ಯದ ತಾಪತ್ರಯವು ತೀರಲಿಲ್ಲ. ಏಕಂದರೆ ಮುಂದೆ ಎರಡು ಮೂರು ತಿಂಗಳಲ್ಲೇ ಒನೆಯ ಪೇಶ್ವೇನಾದ ನಾನಾಸಾಹೇಬನು ಮೈಸೂರ ರಾಜಧಾನಿಯ ಮೇಲೆ ದಂಡೆತ್ತಿ ಬಂದನು. ಆಗಲಂತೂ ಮೈಸೂರ ರಾಜ್ಯದ ಅರಂಬಳಿಯನ್ನು ಬಣ್ಣಿಸಲಳವಲ್ಲ; ಅರಮನೆಯಲ್ಲಿರುವ ಬೆಳ್ಳಿಬಂಗಾರದ ಪಾತ್ರೆಗಳನ್ನೂ ಮುತ್ತುರತನದ ಒಡವೆಗಳನ್ನೂ ಪೇಶ್ವೇನಿಗೆ ಕೊಟ್ಟರೂ ಅವನು ಬೇಡಿದ ಹಣದ ಷಷ್ಠಾಂಶವಾಗಲಿಲ್ಲ. ಆದ್ದರಿಂದ ಚಿಕ್ಕಕೃಷ್ಣರಾಜನು ನಿರುಪಾಯನಾಗಿ ತನ್ನ ರಾಜ್ಯದ ಕೆಲವು ಪ್ರದೇಶಗಳನ್ನು ತಾನು ಕೊಡಲೊಪ್ಪಿದ ೨೭ ಲಕ್ಷ ರೂಪಾಯಿಗಳಿಗೆ ಪೇಶ್ವೇನಿಗೆ ಅಡವು ಕೊಟ್ಟನು (೧೭೫೭).

ಬಡತನಕ್ಕೂ ಒಳಜಗಳಕ್ಕೂ ನಿಕಟಸಂಬಂಧವಿರುತ್ತದೆಂಬ ಮಾತು ಅನುಭವಸಿದ್ಧವಾದ ಸಂಗತಿಯೆಂದು ಎಲ್ಲರಿಗೂ ಗೊತ್ತುಂಟು. ನಿಜಾಮನೂ ಪೇಶ್ವೇನೂ ಮೈಸೂರ ರಾಜ್ಯದ ಬಂಡಾರವನ್ನೆಲ್ಲ ಬರಿದು ಮಾಡಿದ ಕೂಡಲೆ, ಮೈಸೂರ ಮಂತ್ರಿಯಾದ ನಂಜರಾಜನಿಗೂ ಅವನ ತಮ್ಮನಾದ ದೇವರಾಜನಿಗೂ ಜಗಳ ಬಂತು; ದಂಡಿನಲ್ಲಿ ಬಂಡಿನ ಲಕ್ಷಣವು ತೋರಲಾರಂಭಿಸಿತು; ಮತ್ತು ರಾಜ್ಯದ ಕಾರ್ಯಭಾರವೆಲ್ಲ ಕಟ್ಟಾಯಿತು. ಆದ್ದರಿಂದ ಚಿಕ್ಕ ಕೃಷ್ಣರಾಜನು ಹೈದರ ಅಲ್ಲಿಯನ್ನು ವ್ಯವಸ್ಥೆ ಮಾಡುವ ಉದ್ದೇಶದಿಂದ ತನ್ನ ರಾಜ

ಧಾನಿಗೆ ಕರಿಸಿಕೊಂಡನು. ಇದು ಹೈದರನಿಗೆ ಮತ್ತೊಂದು ಉತ್ತಮ ಸಂಧಿಯಾಯಿತು. ಇಷ್ಟು ದಿವಸ ಅವನು ರಾಜಧಾನಿಯಿಂದ ದೂರಾಗಿದ್ದನು. ಇನ್ನು ಮುಂದೆ ರಾಜಧಾನಿಯಲ್ಲೇ ಇದ್ದು, ಮೆಲ್ಲಮೆಲ್ಲಗೆ ರಾಜಾಧಿಕಾರವನ್ನು ಆಕ್ರಮಿಸಲಿಕ್ಕೆ ಅನುಕೂಲವಾಯಿತು.

ಹೈದರನು ಮೈಸೂರಿಗೆ ಬಂದಕೂಡಲೆ ಪಡೆಗಾರರ ಹಿಂದಿನ ಸಂಬಳವನ್ನು ತನ್ನ ಕಯ್ಯಿಂದ ಕೊಟ್ಟು, ಅಸಂತುಷ್ಟರಾದ ಸುಮಾರು ೪,೦೦೦ ದಂಡಾಳುಗಳನ್ನು ಕೆಲಸದಿಂದ ತೆಗೆದುಹಾಕಿ, ದಂಡಿನಲ್ಲೆಲ್ಲ ಶಾಂತತೆಯನ್ನುಂಟುಮಾಡಿದನು; ಅವನು ಪೇಶ್ವೇನ ದಂಡು ಮೈಸೂರ ರಾಜ್ಯವನ್ನು ಬಿಟ್ಟು ಹೋದ ಬಳಿಕ ಅವನಿಗೆ ಕೊಡಲೊಪ್ಪಿದ ಪ್ರದೇಶಗಳನ್ನು ಕೊಡದ್ದರಿಂದ, ಪೇಶ್ವೇನು ಸಿಟ್ಟಿಗೆದ್ದು, **ಗೋಪಾಳರಾವಹರಿ**ಯೆಂಬ ದಳವಾಯಿಯನ್ನು ದಂಡಿನೊಡನೆ ಮೈಸೂರಿಗೆ ಕಳಿಸಿಕೊಟ್ಟನು (೧೭೫೪). ಆಗ ಗೋಪಾಳರಾಯನು ಪೇಶ್ವೇನಿಗೆ ಕೊಡತಕ್ಕ ಪ್ರಾಂತವನ್ನು ತನ್ನ ವಶ ಮಾಡಿಕೊಂಡು, **ಚನ್ನಪಟ್ಟಣ**ವನ್ನು ಹಿಡಿದುಕೊಂಡು, ಬೆಂಗಳೂರನ್ನು ಮುತ್ತಿದನು. ಈಸುದ್ದಿಯನ್ನು ಕೇಳಿ, ಹೈದರನು ತನ್ನ ಪ್ರೀತಿಯ ನಾಯಕನಾದ **ಲತೀಫಅಲ್ಲಿಬೇಗ**ನೆಂಬವನನ್ನು ಅಲ್ಲಿಗೆ ಕಳುಹಿ, ಚನ್ನಪಟ್ಟಣವನ್ನು ತಿರುಗಿ ಹಿಡಿದುಕೊಂಡನು. ಆದ್ದರಿಂದ ಗೋಪಾಳರಾಯನು ಹೆದರಿ, ಬೆಂಗಳೂರಿನ ಮುತ್ತಿಗೆಯನ್ನೆಬ್ಬಿಸಿ, ೩೨ ಲಕ್ಷ ರೂಪಾಯಿಗಳನ್ನು ಕೊಟ್ಟರೆ ನಾನು ತಿರುಗಿ ಹೋಗುವೆನೆಂದು ಒಡಂಬಟ್ಟನು. ಕೂಡಲೆ ಹೈದರನು ೧೬ ಲಕ್ಷ ರೂಪಾಯಿಗಳನ್ನು ಕೊಟ್ಟು ಉಳಿದ ಹಣಕ್ಕೆ ತಾನೇ ಹೊಣೆಯಾಗಿ, ಪೇಶ್ವೇನಿಗೆ ಮೊದಲು ಕೊಡಲೊಪ್ಪಿದ ಪ್ರಾಂತದ ಆಡಳತವನ್ನು ತನ್ನ ಕಯ್ಯಲ್ಲೇ ತೆಗೆದುಕೊಂಡನು.

ನಿಜಾಮು-ಪೇಶ್ವೇರ ದಾಳಿಗಳಿಂದ ಮೈಸೂರ ಅರಸನು ನಿರ್ವಿಣ್ಣನಾದುದಲ್ಲದೆ, ಹೈದರನು ಪ್ರಬಲನಾಗಿ, ಪಾಳಯಗಾರನ ಯೋಗ್ಯತೆಗೆ ಬಂದನು. ಅವನು ಗೋಪಾಳರಾಯನನ್ನು ಹಣ್ಣುಮಾಡಿ ತಿರುಗಿ ಕಳುಹಿ, ಶ್ರೀರಂಗಪಟ್ಟಣಕ್ಕೆ ಬಂದಕೂಡಲೆ ಚಿಕ್ಕ ಕೃಷ್ಣರಾಯನು ಅವನಿಗೆ **ಫತ್ತೆ ಹೈದರ ಬಹದೂರ**ನೆಂಬ ಬಿರುದನ್ನು ಕೊ

ಟ್ಟನು. ಮುಂದೆ ಅವನು ಹೇಗೆ ರಾಜ್ಯದ ಮುಖ್ಯಾಧಿಕಾರವನ್ನು ದೊರಕಿಸಿದನೆಂಬದನ್ನು ಇನ್ನು ಮುಂದೆ ವಿವರಿಸುವೆವು.

ಮಂತ್ರಿಗಳ ಕಯ್ಯಲ್ಲಿ ಸಿಕ್ಕ ಅರಸರ ಬುದ್ಧಿಯೇ ಮಸಣಿಸುತ್ತದೆ. ಅವರಿಗೆ ತಮ್ಮ ಮಿತ್ರರಾರು ಶತ್ರುಗಳಾರು ಎಂಬ ತಿಳುವಳಿಕೆಯೇ ಇರುವದಿಲ್ಲ. ಶಿಕ್ಷಣದ ಕೊರತೆಯಿಂದಲೋ ಪಾರತಂತ್ರ್ಯದ ಮೂಲಕವಾಗಿಯೋ ಅವರು ತಮ್ಮ ಪ್ರಬಲ ಮಂತ್ರಿಗಳ ವಿರುದ್ಧವಾಗಿ ಸಂಚುಮಾಡಿ, ಆತ್ಮಘಾತವನ್ನು ಮಾಡಿಕೊಳ್ಳುತ್ತಾರೆ. ಮೋಗಲ್‌ಬಾದಶಹನಾದ ಫರುಕ್‌ಶಿಯುರನು ತನ್ನ ಬಲಿಷ್ಠ ಪ್ರಧಾನರಾದ ಸಯ್ಯದರ ವಿರುದ್ಧವಾಗಿ ಒಳಸಂಚುಮಾಡಿ, ಅಫಗಾಣಿಸ್ಥಾನದ ಅರಸನಾದ ನಾದಿರಶಹನಿಗೂ ಮರಾಟರಿಗೂ ತನ್ನ ರಾಜ್ಯವನ್ನು ಹರಿದು ಹಂಚಿಕೊಂಡು ಹಾಳುಮಾಡಲಿಕ್ಕೆ ಆಸ್ಪದಕೊಟ್ಟನು. ಅದರಂತೆಯೇ ಕಡೆಯ ಪೇಶ್ವೇನಾದ ೨ನೆಯ ಬಾಜಿರಾಯನು ಒಮ್ಮೆ ತನ್ನ ಮುಖ್ಯ ಮಂತ್ರಿಯಾದ ನಾನಾಫಡನವೀಸನ ವಿರುದ್ಧವಾಗಿಯೂ ಮತ್ತೊಮ್ಮೆ ತನ್ನ ಸರದಾರರಾದ ಶಿಂದೆಹೋಳಕರರ ವಿರುದ್ಧವಾಗಿಯೂ ಒಳಸಂಚು ನಡಿಸಿ, ತನ್ನ ರಾಜ್ಯವನ್ನು ಹಾಳುಮಾಡಿಕೊಂಡನು. ಅದೇ ಮೇರೆಗೆ ಚಿಕ್ಕಕೃಷ್ಣರಾಯನು ಹೈದರ ಅಲ್ಲಿಯನ್ನು ಬೆಳಿಸಿ, ತನ್ನ ಮುಖ್ಯ ಮಂತ್ರಿಯಾದ ನಂಜರಾಜನನ್ನು ಮೂಲಿಗೊತ್ತಿ, ತನ್ನ ಪಾರತಂತ್ರ್ಯವು ಕಡಮೆಯಾಗದ್ದನ್ನು ನೋಡಿ, ಪಶ್ಚಾತ್ತಾಪಬಟ್ಟು, ಆಗ ಪ್ರಬಲನಾದ ಹೈದರನ ವಿರುದ್ಧವಾಗಿ ಒಳಸಂಚುಮಾಡಲಾರಂಭಿಸಿದನು. ಅವನು ಹೈದರನ ರಾಯಸದವನಾದ ಖಂಡೆರಾಯನನ್ನು ಒಡಕೊಂಡು, ಪೇಶ್ವೇನ ದಂಡಿನ ಸಹಾಯವನ್ನು ಬೇಡಿದನು, ಮತ್ತು ಈ ಮಸಲತ್ತನ್ನು ಹೈದರನಿಗೆ ತಿಳಿಯಗೊಡಲಿಲ್ಲ. ಹೈದರನ ಎಲ್ಲ ದಂಡು ಗಟ್ಟದ ಕೆಳಗೆ ಹೋಗಿದ್ದ ಸಂಧಿಯನ್ನು ನೋಡಿ, ಖಂಡೆರಾಯನು ಹೈದರನನ್ನು ಶ್ರೀರಂಗಪಟ್ಟಣದಲ್ಲಿ ಮುತ್ತಿದನು. ಆಗ ಹೈದರನು ಪಟ್ಟ ದುಃಖವನ್ನು ಬಣ್ಣಿಸಲಳವಲ್ಲ; ಕೆಲವು ನಂಬಿಗಸ್ಥರೊಡನೆ ಜೀವವುಳಿಸಿಕೊಂಡು ಓಡಿ ಹೋಗಬೇಕಾದರೆ ಅವನಿಗೆ ಸಾಕುಬೇಕಾಯಿತು.

ಆಗಿನ ಅವನ ಸ್ಥಿತಿಯನ್ನು ಒಂಟಿಗನಾಗಿ ಸಾದವಾನದಿಂದ ಓಡಿ ಹೋದ ಬಾಬರನ ಸ್ಥಿತಿಗೆ ಮಾತ್ರ ಹೋಲಿಸಬಹುದು.* ಆ ಪ್ರಸಂಗದಲ್ಲಿ ಅವನು ಕುದುರೆಯ ಮೇಲೆ ಕುಳಿತುಕೊಂಡು ಒಂದೇ ಸವನೆ ೨೪ ತಾಸುಗಳಲ್ಲಿ ೯೮ ಮೈಲು ಹೋಗಿ, ಸುರಕ್ಷಿತವಾಗಿ ಬೆಂಗಳೂರನ್ನು ಮುಟ್ಟಿದನು (೧೭೭೧).

ಈಸಮಯದಲ್ಲಿ ಹೈದರನ ಎಲ್ಲ ಆಶೆಯು **ವಿಸಾಜಿಪಂತ**ನೆಂಬ ಪೇಶ್ವೇನ ದಳವಾಯಿಯೊಡನೆ ಆರ್ಕಾಟದಲ್ಲಿ ಕಾದುತ್ತಿದ್ದ ತನ್ನ ದಂಡಿನ ಮೇಲೇ ಅವಲಂಬಿಸಿತ್ತು. ಆದರೆ ಈ ದಂಡು ತೆರವಾಗುವ ಬಗೆ ಹೇಗೆ? ಆರ್ಕಾಟದಿಂದ ದಂಡನ್ನು ತರಿಸಿಕೊಂಡಿದ್ದರೆ **ವಿಸಾಜಿಯು** ಬೆನ್ನಟ್ಟಿ ಬರುತ್ತಿದ್ದನು. ಮತ್ತು ಒಂದು ಕಡೆ ಕೆರೆ. ಒಂದು ಕಡೆ ಬಾವಿ ಹೀಗೆ ಆಗುವ ಸಂಭವವಿತ್ತು. ಇದಲ್ಲದೆ ಖಂಡೆರಾಯನ ಬಿನ್ನಹವನ್ನು ಕೇಳಿ, ಪೇಶ್ವೇಸು ಹೈದರನ ವಿರುದ್ಧವಾಗಿ ಮತ್ತೊಂದು ದಂಡನ್ನು ಕಳುಹಿದ್ದರಂತೂ ಅವನ 'ಇತಿಶ್ರೀ' ಆಗಿ ಹೋಗುತ್ತಿತ್ತು. ಈ ದೊಡ್ಡ ಕುತ್ತಿನಿಂದ ಪಾರಾಗುವ ಸಂಭವವು ಅವನಿಗೇನೂ ಕಾಣಲಿಲ್ಲ ಮತ್ತು ಆಕಾಲದ ಬುದ್ಧಿವಂತರೂ ರಾಜಕಾರ್ಯಧುರಂಧರರೂ ಹೈದರನ ಕಾಲವು ಒದಗಿ ಬಂತೆಂದು ನಿಶ್ಚಯವಾಗಿ ಹೇಳಲಾರಂಭಿಸಿದರು.

ಆದರೆ ದೈವದ ಗತಿಯು ಅಗಮ್ಯವಾಗಿರುತ್ತದೆ. ಕಾಲಕ್ರಮವು ಮನುಷ್ಯನ ಅಲ್ಪಜ್ಞಾನಕ್ಕೆ ಅಗೋಚರವಾಗಿರುತ್ತದೆ. ಒಂದು ಕ್ಷಣದಲ್ಲಿ ಕಡ್ಡಿಹೋಗಿ ಗುಡ್ಡವಾಗಬಹುದು ಮತ್ತು ಗುಡ್ಡಹೋಗಿ ಕಡ್ಡಿಯಾಗಬಹುದು. ಇದರಿಂದ ದೈವವನ್ನು ನಂಬಬೇಕೆಂದು ನಮ್ಮ ಅಭಿಪ್ರಾಯವಲ್ಲ. ಆದರೆ ಕೆಲವು ಕಾರ್ಯಗಳಿಗೆ ಅನೇಕ ಕಾರಣಗಳಿದ್ದು, ಅವುಗಳೊಳಗೆ ಒಂದೆರಡನ್ನು ನಾವು ಅಜ್ಞಾನದಿಂದಾಗಲಿ, ಮೈಯ್ಸೊಕ್ಕಿನಿಂದಾಗಲಿ, ಸ್ವಾರ್ಥದಿಂದಾಗಲಿ, ಮರೆತುಬಿಟ್ಟು ಅನುಮಾನ ಮಾಡಿದರೆ, ನಮ್ಮ ಆಕಾರ್ಯಗಳು ಕಯ್ಗೂಡುವವೆಂಬ ಅನುಮಾನವು ತಪ್ಪಿ ಹೋಗುತ್ತದೆಂಬದೇ ನಮ್ಮ ಅಭಿಪ್ರಾಯ

---

* ಮೋಗಲ್ ಬಾದಶಾಹಿ ಪೂರ್ವಾರ್ಧ ಪುಟ ೧೪ ನೋಡಿರಿ.

ವು. ಈ ಸಾಮಾನ್ಯ ನೇಮಕ್ಕನುಸರಿಸಿ, ಆಕಾಲದ ಪ್ರಾಜ್ಞರು ಪೇಶ್ವೇ ರಾಜ್ಯದ ಸ್ಥಿತಿಯನ್ನು ಲಕ್ಷ್ಯದಲ್ಲೇ ತರಲಿಲ್ಲ, ಅಥವಾ ಪೇಶ್ವೇನಿಗೆ ಆಕಾಲಕ್ಕೆ ದೊಡ್ಡ ವಿಪತ್ತು ಬರಬಹುದೆಂದೆಣಿಸಲಿಲ್ಲ. ಆದರೆ ಈಸಮಯದಲ್ಲಿ ಪೇಶ್ವೇನ ದೊಡ್ಡ ದಂಡು ಅಹಮ್ಮದಶಹಾ ಅಬ್ದಾಲಿಯೊಡನೆ ಕಾದಲಿಕ್ಕನುವಾಗಿತ್ತು. ಖಂಡೇರಾಯನು ಪುಣೆಯಿಂದ ತನಗೆ ನೆರವಾಗಲಿಕ್ಕೆ ಒಂದು ದಂಡು ಈಹೊತ್ತು ನಾಳೆ ಬರಬಹುದೆಂದು ನಿರೀಕ್ಷಿಸುತ್ತ ಕುಳಿತಿರುವಾಗಲೂ ಹೈದರನು ಈಗೇನೋ ಇನ್ನೊಂದು ಗಳಿಗೆ ಹೊತ್ತಿಗೇನೋ ಎಂದು ಉಮ್ಮಳಿಸುತ್ತಿರುವಾಗಲೂ ಹೆಸರಾದ ಪಾಣಿಪತ ಕಾಳಗದಲ್ಲಿ ಅಬ್ದಾಲಿಯು ಪೇಶ್ವೇನ ದಂಡನ್ನು ಚೂರು ಚೂರು ಮಾಡಿಬಿಟ್ಟನೆಂತಲೂ ಆದ್ದರಿಂದ ಪೇಶ್ವೇನು ಆರ್ಕಾಟದಲ್ಲಿದ್ದ ವಿಸಾಜಪಂತನಿಗೆ ತನ್ನ ದಂಡನ್ನು ತೆಗೆದುಕೊಂಡು ಆದಷ್ಟು ಬೇಗನೆ ಪುಣೆಗೆ ಬರಬೇಕೆಂದು ಒಂಟೆಸ್ವಾರನನ್ನು ಕಳುಹಿದನೆಂತಲೂ ಸುದ್ದಿಯು ಬಂತು!! ಆಗ ಖಂಡೇರಾಯನ ದುಃಖವನ್ನೂ ಹೈದರನ ಉಬ್ಬನ್ನೂ ಬಣ್ಣಿಸಲಳವಲ್ಲ. ಕೂಡಲೆ ಹೈದರನು ವಿಸಾಜಿಪಂತನಿಗೆ ೩ ಲಕ್ಷ ರೂಪಾಯಿ ಕೊಟ್ಟು ಅವನನ್ನು ಸಮಾಧಾನಮಾಡಿ ಕಳುಹಿ, ತನ್ನ ತೆರವಾದ ದಂಡಿನೊಡನೆ ಶ್ರೀರಂಗಪಟ್ಟಣದ ಹಾದಿ ಹಿಡಿದನು. ಆ ಸುದ್ದಿಯನ್ನು ಕೇಳಿ, ಖಂಡೇರಾಯನಾದರೂ ತನ್ನ ದಂಡನ್ನು ಅಣಿಮಾಡಿಕೊಂಡು, ಅವನಿಗಿದುರಾಗಲಿಕ್ಕೆ ಬಂದನು. ಎರಡೂ ದಂಡುಗಳ ನಡುವೆ ಶ್ರೀರಂಗಪಟ್ಟಣದಿಂದ ೨೭ ಮೈಲಿನ ಮೇಲಿರುವ ನಂಜನಗುಡ್ಡದಲ್ಲಿ ಕಾಳಗವಾಯಿತು, ಮತ್ತು ದುರ್ದೈವದಿಂದ ಹೈದರನಿಗೆ ಸೋಲು ಬಂತು.

ಹೈದರನು ಗಟ್ಟಿಗನಾದ ಕಾರಣ ಈ ಸೋಲಿನಿಂದ ಎದೆಗುಂದಲಿಲ್ಲ. ಶಕ್ತಿಯಿಂದ ಖಂಡೇರಾಯನನ್ನು ಗೆಲ್ಲಲಿಕ್ಕೆ ಆಗದ ಕಾರಣ ಯುಕ್ತಿಯಿಂದ ಅವನನ್ನು ಹಣಿಯ ಬೇಕೆಂದು ನಿಶ್ಚಯಿಸಿ, ಅವನು ಮೈಸೂರ ಮಂತ್ರಿಯಾದ ನಂಜರಾಜನಿಗೆ ಶರಣುಹೋದನು. ಹೈದರನ ಕೃತ್ರಿಮ-ದೈನ್ಯಕ್ಕೂ ತೋರಿಕೆಯ ಮಾತುಗಳಿಗೂ ಮರು

ಳಾಗಿ, ಸಂಜರಾಜನು ಅವನನ್ನು ಮೈಸೂರ ದಳವಾಯಿಯನ್ನು ಮಾಡಿದನು. ಹೈದರನು ಈಯಧಿಕಾರದಿಂದ ಹೆಚ್ಚು ಬಲಗೊಂಡು ಶ್ರೀರಂಗಪಟ್ಟಣದಲ್ಲಿದ್ದ ಮೈಸೂರ ದಂಡನ್ನು ಕೂಡಲಿಕ್ಕೆತ್ತುಗಡೆ ಮಾಡಿದನು. ಆದರೆ ಖಂಡೇರಾಯನ ದಕ್ಷತೆಯು ಆಪ್ರಯತ್ನವನ್ನು ವ್ಯರ್ಥಮಾಡಿತು. ಬಳಿಕ ಶಕ್ತಿಯುಕ್ತಿಗಳಿಂದ ಸಾಧ್ಯವಾಗದ ಕೆಲಸವನ್ನು ಹೈದರನು ಕುಯುಕ್ತಿಯಿಂದ ಕಯ್ಗೂಡಿಸಿಕೊಂಡನು!! ಅವನು ಖಂಡೇರಾಯನ ದಂಡಿನ ನಾಯಕರಿಗೆ ನಂಜರಾಜನ ಹೆಸರಿನ ಸುಳ್ಳು ಕಾಗದಗಳನ್ನು ಬರಿಸಿ, ಅವು ಖಂಡೇರಾಯನ ಕಯ್ಗೆ ಹೋಗುವಂತೆ ವ್ಯವಸ್ಥೆ ಮಾಡಿದನು. ಆ ಕಾಗದಗಳಲ್ಲಿ ದಂಡಿನ ನಾಯಕರು ಮೊದಲು ಒಪ್ಪಿಕೊಂಡಂತೆ ಖಂಡೇರಾಯನನ್ನು ಹೈದರನ ಸ್ವಾಧೀನ ಮಾಡಬೇಕೆಂದು ಬರೆದಿತ್ತು. ಆವೊಕ್ಕಣೆಯನ್ನು ನೋಡಿ ಖಂಡೇರಾಯನು ಹೆದರಿ, ತನ್ನ ದಂಡಿನವರು ಸಂಚುಮಾಡಿದ್ದು ನಿಜವೆಂದೆಣಿಸಿ, ಗತಿಗಾಣದೆ ಪಾಳಯಬಿಟ್ಟು ಓಡಿಹೋದನು. ಆವೊತ್ತಿನಿಂದ ಹೈದರನ ದೆಸೆಯು ತಿರುಗಿತೆನ್ನಬಹುದು. ಕೂಡಲೆ ಅವನು ಖಂಡೇರಾಯನ ದಂಡಿನ ಮೇಲೆ ಬಿದ್ದು ಅದನ್ನು ಓಡಿಸಿ ಶ್ರೀರಂಗಪಟ್ಟಣಕ್ಕೆ ಹೋಗಿ, ಅರಸನಿಗೆ ವರ್ಷಾಸನವನ್ನು ಗೊತ್ತುಮಾಡಿಕೊಟ್ಟು, ಎಲ್ಲ ರಾಜ್ಯಾಧಿಕಾರವನ್ನು ತನ್ನ ಕಯ್ಯಲ್ಲಿ ತೆಗೆದುಕೊಂಡು, ಖಂಡೇರಾಯನನ್ನು ಹಿಡಿದು ಒಂದು ಪಂಜರದಲ್ಲಿ ಸಾಯುವವರೆಗೆ ಹಾಕಿಟ್ಟನು.*

ಇನ್ನು ಮುಂದೆ ಹೈದರನ ಚರಿತ್ರವೇ ಮೈಸೂರ ಇತಿಹಾಸವೆನ್ನಬಹುದು. ಅವನು ಹೊಸ ಅಧಿಕಾರಿಗಳನ್ನು ನಿಯಮಿಸಿ ರಾಜ್ಯದಾಡಳತದ ವ್ಯವಸ್ಥೆಯನ್ನು ಮಾಡಿ, ರಾಜ್ಯವನ್ನು ಬೆಳಿಸುವ ಆಲೋಚನೆಯನ್ನು ಮಾಡಲಾರಂಭಿಸಿದನು. ಈಕಾಲಕ್ಕೆ ಅವನಿ

---

* ಖಂಡೇರಾಯನು ಸೆರೆಸಿಕ್ಕ ಬಳಿಕ, ಮೈಸೂರ ಅರಸನ ತಾಯಿಯು ಅವನು ಬ್ರಾಹ್ಮಣನಾದ್ದರಿಂದ ಅವನನ್ನು ಕಾಪಾಡಬೇಕೆಂದು ಹೇಳಲು, ಹೈದರನು "ನಾನು ಖಂಡೇರಾಯನನ್ನು ಗಿಳಿಯಂತೆ ಸಾಕುವೆನು" ಎಂದು ಮಾತುಕೊಟ್ಟುದರಿಂದ ಅವನನ್ನು ಪಂಜರದೊಳಗೆ ಹಾಕಿಟ್ಟನಂತೆ.

ಗೊಂದು ಸಂಧಿಯು ದೊರೆಯಿತು. ಆದವಾನಿಯ ಸಂಸ್ಥಾನಿಕನೂ ನಿಜಾಮುನ ಒಡಹುಟ್ಟಿದವನೂ ಆದ ಬಸಾಲತಜಂಗನು ಪೇಶ್ವೇನ ವಶದಲ್ಲಿದ್ದ ಸೀರಾಕೋಟೆಯನ್ನು ತೆಗೆದುಕೊಳ್ಳಲಿಕ್ಕೆತ್ತು ಗಡೆಮಾಡಿ, ಅದು ವ್ಯರ್ಥವಾದ್ದನ್ನು ನೋಡಿ, ಆಸೀರಾದ ನವಾಬಗಿರಿಯನ್ನು ಹೈದರನಿಗೆ 3 ಲಕ್ಷ ರೂಪಾಯಿಗೆ ಮಾರಿಬಿಟ್ಟನು!! ಕೂಡಲೆ ಹೈದರನು ಆಕೋಟೆಯನ್ನು ಮುತ್ತಿ, ಅದನ್ನೂ ಅದರೊಡನೆ ಪೇಶ್ವೇನ ಹಗೆತನವನ್ನೂ ಗಳಿಸಿದನು. ಬಳಿಕ ಅವನು **ಚಿಕ್ಕಬಳ್ಳಾಪುರ, ರಾಯದುರ್ಗ, ಹರಪನಹಳ್ಳಿ** ಮುಂತಾದ ಸ್ಥಳಗಳ ನಾಯಕರನ್ನು ಗೆದ್ದು, **ಚಿತ್ರಗಲ್ದುರ್ಗ**ವನ್ನು ವಶಮಾಡಿಕೊಂಡನು. ಅವನು ಅಲ್ಲಿರುವಾಗಲೇ ಒಬ್ಬ ಲಿಂಗಾಯತ ಗೃಹಸ್ಥನು ಬಂದು ತಾನು ಬಿದನೂ(ರೂ?)ರ ಅರಸನ ದತ್ತಕ ಮಗನೆಂತಲೂ ತನ್ನ ದತ್ತಕತಾಯಿಯಾದ **ವೀರಮ್ಮಾಜಿ**ಯು ತನ್ನನ್ನು ಕೊಲ್ಲಲು ಪ್ರಯತ್ನಮಾಡಿದ್ದರಿಂದ, ತಾನು ತಪ್ಪಿಸಿಕೊಂಡು ಓಡಿ ಬಂದೆನೆಂತಲೂ ತನ್ನನ್ನು ಬಿದನೂರ ಗಾದೆಯ ಮೇಲೆ ಕೂಡ್ರಿಸ ಬೇಕೆಂತಲೂ ಬೇಡಿಕೊಂಡನು. ಆಗ ತೂಕಡಿಸುವವನಿಗೆ ಹಾಸಿಗೆ ಹಾಕಿಕೊಟ್ಟಂತಾಯಿತು. ಕೂಡಲೆ ಹೈದರನು ಅವನ ಮಾತಿನ ನಿಜತ್ವವನ್ನು ಪರೀಕ್ಷಿಸದೆ, ಬಿದನೂರ* ಮೇಲೆ ದಂಡೆತ್ತಿ, ಹೋಗಿ, **ವೀರಮ್ಮಾಜಿಯು** ಕಳುಹಿಕೊಟ್ಟ ಕಪ್ಪಗಾಣಿಕೆಯನ್ನು ಸ್ವೀಕರಿಸದೆ, ಅನಾಯಾಸವಾಗಿ ಆಹಳೆರಾಜಧಾನಿಯನ್ನು ಹಿಡಿದುಕೊಂಡು, ವೀರಮ್ಮಾಜಿಯನ್ನೂ ಆಕೆಯ ದತ್ತಕಮಗನನ್ನೂ ಮದಿ

---

*ಬಿದನೂರು ಮೈಸೂರ ಸಂಸ್ಥಾನದೊಳಗಿನ ಸಿವಮೊಗ್ಗ ಜಲ್ಲೆಯಲ್ಲಿ ಒಂದು ತಾಲೂಕಿನ ಸ್ಥಳವಾಗಿರುತ್ತದೆ. ೧೬೪೦ರಲ್ಲಿ ಕೆಲದಿ ಮನೆತನದ ಲಿಂಗಾಯತ ಅರಸರು ಇಕ್ಕೇರಿಯನ್ನು ಬಿಟ್ಟು, ಅದನ್ನು ತಮ್ಮ ರಾಜಧಾನಿಯನ್ನು ಮಾಡಿಕೊಂಡರು. ಸಿವಪ್ಪನಾಯಕನೆಂಬವನ ಆಳಿಕೆಯಲ್ಲಿ ಆ ಪಟ್ಟಣವು ಬೆಳೆದುದರಿಂದ ಅದಕ್ಕೆ ನಗರವೆಂಬ ಹೆಸರು ಬಿತ್ತು. ಈಗಲಾದರೂ ಅದಕ್ಕೆ ನಗರವೆನ್ನುತ್ತಾರೆ. ಸಿವಪ್ಪನಾಯಕನು ಆಳುವಾಗ ಈ ನಗರಸಂಸ್ಥಾನದ ವಿಸ್ತಾರವು ೧೦,೦೦೦ ಚಚ್ಚೌಕು ಮೈಲಾಗಿತ್ತು, ಮತ್ತು ಎರಡೂ ಕಾನಡಾ ಜಲ್ಲೆಗಳು ಅದಕ್ಕೆ ಸೇರಿದ್ದವು.

ಗೇರಿಯಲ್ಲಿ ಸೆರೆಯಿಟ್ಟು, ಅರಮನೆಯಲ್ಲಿ ಸಿಕ್ಕ, ೧೨೦,೦೦೦,೦೦೦ ರೂಪಾಯಿಗಳನ್ನು ತೆಗೆದುಕೊಂಡು, ಬಿದನೂರಿಗೆ ಹೈದರನಗರ ವೆಂಬ ಹೆಸರನ್ನಿತ್ತು, ತನ್ನ ರಾಜಧಾನಿಗೆ ತಿರುಗಿಹೋದನು.

ಹೈದರನು ಪೇಶ್ವೇನ ವಶದಲ್ಲಿದ್ದ ಸೀರಾದ ನವಾಬಗಿರಿಯನ್ನು ದೊರಕಿಸಿದನೆಂದು ಹಿಂದೆ ಹೇಳಿರುತ್ತೇವಷ್ಟೇ. ಈ ಸುದ್ದಿಯು ಪುಣೆಗೆ ಹೋದ ಕೂಡಲೆ ಆಕಾಲದಲ್ಲಿ ಪೇಶ್ವೇನಾದ ಮಾಧವರಾಯನು ಸಿಟ್ಟಿಗೆದ್ದು, ಹೈದರನನ್ನು ದಂಡಿಸುವ ಉದ್ದೇಶದಿಂದ ದೊಡ್ಡ ದಂಡಿನೊಡನೆ ಮೈಸೂರಿಗೆ ಹೊರಟನು. ಆ ಸುದ್ದಿಯನ್ನು ಕೇಳಿ ಹೈದರನು ಸವಣೂರಿನ ನವಾಬನನ್ನು ತನ್ನ ಕಡೆಗೆ ಮಾಡಿಕೊಳ್ಳಲಿಕ್ಕೆ ವಿಶ್ವಪ್ರಯತ್ನ ಮಾಡಿದನು. ಆದರೆ ಆ ಪ್ರಯತ್ನವೆಲ್ಲ ನಿಷ್ಫಲವಾಯಿತು. ಆದ್ದರಿಂದ ಅವನು ಕನಲ್ದು ಸವಣೂರ ಮೇಲೆ ದಂಡೆತ್ತಿ ಹೋಗಿ, ಆ ನಾಡನ್ನು ಸುಲಿದು ಸುಟ್ಟು ಹಾಳುಮಾಡಿ, ಧಾರವಾಡದ ಕೋಟೆಯನ್ನು ಹಿಡಿದುಕೊಂಡನು. ಅಷ್ಟರಲ್ಲಿ ಪೇಶ್ವೇನ ದಂಡಿನ ಸಣ್ಣ ಭಾಗದೊಡನೆ ಪಟವರ್ಧನ ಗೋಪಾಳರಾಯನು ಅಲ್ಲಿಗೆ ಬರಲು ಹೈದರನು ಅವನನ್ನು ಸೋಲಿಸಿದನು. ಹೈದರನು ಈ ಗೆಲವಿನ ಹಿಗ್ಗಿನಲ್ಲಿರುವಾಗ, ಪೇಶ್ವೇನ ಎಲ್ಲ ದಂಡು ಬಂದು ರಟ್ಟೆಹಳ್ಳಿಯೆಂಬಲ್ಲಿ ಅವನನ್ನು ಪೂರ್ಣವಾಗಿ ಸೋಲಿಸಿತು. ಆಗ ಹೈದರನು ನಿರುಪಾಯನಾಗಿ, ತುಸು ಮಂದಿ ರಾಹುತರೊಡನೆ ಬಿದನೂರಿಗೆ ಹೋಗಿ, ಅಲ್ಲಿದ್ದ ತನ್ನ ಹೆಂಡರು ಮಕ್ಕಳನ್ನು ಶ್ರೀರಂಗಪಟ್ಟಣಕ್ಕೆ ಕಳುಹಿದನು. ಅಷ್ಟರಲ್ಲಿ ಮಾಧವರಾಯನು ತುಂಗಭದ್ರೆಯನ್ನು ದಾಟಿ ಅವನನ್ನು ಬೆನ್ನಟ್ಟಿ ಬಂದುದರಿಂದ, ಉಪಾಯಾಂತರವನ್ನು ಕಾಣದೆ ಹೈದರನು ಅವನಿಗೆ ಶರಣುಹೋಗಿ, ಕೆಳಗೆ ಬರೆದ ಶರ್ತುಗಳಂತೆ ಒಪ್ಪಂದಮಾಡಿಕೊಂಡನು (೧೭೬೪).

೧. ಮೊದಲು ಗುತ್ತಿಮುರಾರಿರಾಯನ ವಶದಲ್ಲಿದ್ದ ಎಲ್ಲ ಪ್ರಾಂತವನ್ನು ಹೈದರನು ಮುರಾರಿರಾಯನಿಗೆ ಬಿಟ್ಟುಕೊಡಬೇಕು.

೨. ಹೈದರನು ಸವಣೂರ ಪ್ರಾಂತವನ್ನು ಬಿಟ್ಟುಕೊಡಬೇಕು.

೩. ಯುದ್ಧದ ವೆಚ್ಚಕ್ಕಾಗಿ ಹೈದರನು ೩೨ ಲಕ್ಷ ರೂಪಾಯಿ ಗಳನ್ನು ಕೊಡಬೇಕು.

೪. ಸೀರಾದ ಕೋಟೆಯೂ ಪಾಳೆಯಗಾರರಿಂದ ತೆಗೆದು ಕೊಂಡ ಪ್ರದೇಶಗಳೂ ಹೈದರನ ವಶದಲ್ಲೇ ಇರಬೇಕು.

ಈಯೊಪ್ಪಂದದಿಂದ ಹೈದರನು ಹೆರೆಯುಚ್ಚಿದ ಹಾವಿನಂತಾಗಿ, ನಿಜಾಮ-ಪೇಶ್ವೇರ ಸಂಬಂಧವಿಲ್ಲದ ರಾಜ್ಯವನ್ನುಗೆಲ್ಲುವ ಆಲೋ ಚನೆಯನ್ನು ಮಾಡಿದನು. ಮೈಸೂರಿನ ನೆರೆರಾಜ್ಯಗಳಲ್ಲಿ ಮಲಿ ಯಾಳರಾಜ್ಯವೊಂದು ಮಾತ್ರ ಈತರದ್ದಾಗಿತ್ತು. ಆದ್ದರಿಂದ ಹೈದ ರನು ಮಲಿಯಾಳವನ್ನು ಒಳನುಗ್ಗಬೇಕೆಂದಾಲೋಚಿಸಿ, ಜಗಳಕ್ಕೆ ಕಾರಣವನ್ನು ಹುಡುಕಲಾರಂಭಿಸಿದನು. ಬಲಿಷ್ಠವ್ಯಕ್ತಿಗಳಿಗೆ ದೊ ರೆದಂತೆ ಪ್ರಬಲರಾದ ಅರಸರಿಗೆ ಬೇಕಾದಾಗ ಬೇಕಾದಷ್ಟು ಜಗ ಳದ ಕಾರಣಗಳು ದೊರೆಯುತ್ತವೆ. ಆದಕಾರಣ ಹೈದರನಿಗೆ ಕೂ ಡಲೆ ಕಾರಣಗಳು ಸಿಕ್ಕವು. ಅವುಗಳಾವವೆಂದರೆ:—೧. ಮೊದಲು ಒಮ್ಮೆ ಮಲಿಯಾಳವು ಬಿದನೂರ ರಾಜ್ಯಕ್ಕೆ ಸೇರಿತ್ತು; ಆದ್ದರಿಂದ ಬಿದನೂರು ಹೈದರನ ಕಯ್ಸೇರಿದ ಬಳಿಕ ಮಲಿಯಾಳವು ಹೈದರನ ರಾಜ್ಯವಾಯಿತು. ೨. ಕಾಲಿಕತ್ತದ ಸಾಮೊರಿನನಿಗೂ ಪಾಲೆಗಾ ಟದ ಅರಸನಿಗೂ ೧೭೫೭ರಲ್ಲಿ ಯುದ್ಧ ನಡೆದಾಗ ಸಾಮೊರಿನನು ಮೈಸೂರ ಅರಸನಿಗೆ ಕೊಡಲೊಪ್ಪಿದ ಹಣವನ್ನು ಅವನು ಇನ್ನೂ ಕೊಟ್ಟಿದ್ದಿಲ್ಲ. ೩. ಕೋಲಾತ್ರಿಮನೆತನದ ಅರಸನ ಮಾಂಡಲಿಕನೂ ಕಾನಾನೂರಿನ ನವಾಬನೂ ಆದ ಅಲ್ಲಿಯು ಸ್ವತಂತ್ರನಾಗಲಿಚ್ಛಿಸಿ, ಹೈದರನ ಸಹಾಯವನ್ನು ಬೇಡಿದನು. ಈಮುಂತಾದ ಕಾರಣಗಳ ನ್ನು ತೋರಿಸಿ ಹೈದರನು ದೊಡ್ಡ ದಂಡಿನೊಡನೆ ಮಲಿಯಾಳವನ್ನೊಳ ನುಗ್ಗಿದನು. ಕಾಲಿಕತ್ತದ ಸಾಮೊರಿನನಾದ ಮಾನವಿಕ್ರಮನು ಹೈ ದರನಿಗೆ ಶರಣುಬಂದು, ಅವನೊಡನೆ ಒಡಂಬಡಿಕೆ ಮಾಡಿಕೊಂಡನು. ಆದರೆ ಹೈದರನು ಬೇಡಿದಷ್ಟು ಹಣವನ್ನು ಕೊಡುವದು ಅವನಿಂದಾ ಗದ್ದರಿಂದ ಅವನು ತಾನು ಇಳಿದ ಗುಡಿಗೆ ಬೆಂಕಿಹಚ್ಚಿಸಿ, ಸುಟ್ಟು ಕೊಂಡು ಸತ್ತನು. ಕೋಚಿನ-ತ್ರಾವಣಕೋರಗಳ ಅರಸರು ಅವ

ನಿಗೆ ಶರಣುಬಂದರು. ಆದ್ದರಿಂದ ಹೈದರನು ಸಂತೋಷದಿಂದ ಕೊಯಿಮುತ್ತೂರಕ್ಕೆ ಹೋದನು. ಮುಂದೆ ೩ ತಿಂಗಳಾದ ಬಳಿಕ ಶೂರರಾದ ಮಲಿಯಾಳದ ನಾಯರರು ಬಂಡುಮಾಡಿ ಹೈದರನ ದಳವಾಯಿಯಾದ ರಾಜಾಸಾಹೇಬನನ್ನು ಸೋಲಿಸಿ, ಹಣ್ಣುಮಾಡಿದರು. ಆಸುದ್ದಿಯನ್ನು ಕೇಳಿ ಹೈದರನು ಕೂಡಲೆ ಅಲ್ಲಿಗೆ ಬಂದು ನಾಯರರನ್ನು ಸೋಲಿಸಿ, ೧೫,೦೦೦ ಜನರನ್ನು ಸೆರೆಹಿಡಿದು ಮೈಸೂರಿಗೆ ಕಳುಹಿದನು. ಆಸೆರೆಯಾಳುಗಳಲ್ಲಿ ಸುಮಾರು ೨೦೦ ಜನರು ಮಾತ್ರ ಮೈಸೂರಿಗೆ ಜೀವಂತ ಹೋಗಿ ಮುಟ್ಟಿದರು (೧೭೬೬).

ಇದೇ ಸಮಯಕ್ಕೆ ಚಿಕ್ಕಕೃಷ್ಣರಾಜನು ಮಡಿಯಲು, ಹೈದರನು ಅವನ ಮಗನಾದ ನಂಜರಾಜನಿಗೆ ಪಟ್ಟಗಟ್ಟಿಸಿ, ತಾನು ಶ್ರೀರಂಗಪಟ್ಟಣಕ್ಕೆ ತಿರುಗಿ ಹೋದಕೂಡಲೆ, ಅರಮನೆಯಲ್ಲಿದ್ದ ಎಲ್ಲ ವಸ್ತ್ರಾಭರಣಗಳನ್ನು ಅಪಹರಿಸಿ, ತನಗೆ ಬೇಕಾದ ಜನರನ್ನೇ ಅರಮನೆಯ ಊಳಿಗಕ್ಕಿಟ್ಟನು. ಆದರೆ ಈಮೇರೆಗೆ ಹೈದರನು ನಂಜರಾಜನನ್ನು ಮೂಲೆಗೊತ್ತಿ ನಿರ್ಮಾಲ್ಯವಾಗಿ ಮಾಡಿ ಕೂಡಿಸಿದ್ದು ಮೈಸೂರ ಅರಸನ ಅನ್ನವುಣ್ಣುವ ಎಷ್ಟೋ ಮಂದಿ ಅಧಿಕಾರಿಗಳಿಗೆ ಸರಿದೋರಲಿಲ್ಲ. ಆದ್ದರಿಂದ ಅವರೂ ಮೊದಲು ಮೈಸೂರ ರಾಜ್ಯದ ಮುಖ್ಯ ಮಂತ್ರಿಯಾದ ಕರಾಚೂರಿ ನಂಜರಾಜಯ್ಯನೂ ಕೂಡಿ, ಆಕಾಲಕ್ಕೆ ಪೇಶ್ವೇನಾದ ಮಾಧವರಾಯನಿಗೆ ಮೈಸೂರ ಮೇಲೆ ದಂಡೆತ್ತಿ ಬಂದು, ಹೈದರನನ್ನು ದಂಡಿಸಬೇಕೆಂದು ಒಳಗಿಂದೊಳಗೇ ಚಿನ್ನಹಕಾಗದ ಬರೆದರು. ಈರಾಜನಿಷ್ಠರಿಗೆ ಪೇಶ್ವೆಯು ನಂಜರಾಜನ ಪಕ್ಷ ಹಿಡಿದು ಹೈದರನೊಡನೆ ಕಾದಲಿಕ್ಕೆ ಏನೂ ಕಾರಣವಿಲ್ಲೆಂಬದು ತಿಳಿದಿರಲಿಕ್ಕಿಲ್ಲವೇ? ಪೇಶ್ವೇನು ಹೈದರನಂತೆ ಸಾತಾರೆಯ ಅರಸನನ್ನು ಮೂಲೆಗೊತ್ತಿ ರಾಜ್ಯವಾಳುತ್ತಿರುವುದು ಅವರಿಗೆ ಗೊತ್ತಿರಲಿಕ್ಕಿಲ್ಲವೇ? ಅಥವಾ "ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬ ನಾಣ್ಣುಡಿಯಂತೆ ಈತರದ ಆತ್ಮಘಾತಕವಿಚಾರವು ಅವರ ಮನಸ್ಸಿನಲ್ಲಿ ಬಂದಿರಬಹುದೇನು? ಅದು ಹೇಗೇ ಇರಲಿ.

ಹೈದರನ ವಿರುದ್ಧವಾದ ಈಬಗೆಯ ಪತ್ರಗಳು ಬಂದಕೂಡಲೆ ಪೇ ಶ್ವೇನಿಗೆ ಅತ್ಯಾನಂದವಾಯಿತು. ಆದ್ದರಿಂದ ಅವನು ನಿಜಾಮ-ಇಂಗ್ಲಿಷರನ್ನು ಮೈಸೂರನ್ನೊಳನುಗ್ಗಲಿಕ್ಕೆ ಒಡಂಬಡಿಸಿ, ಎಲ್ಲರಿಗಿಂತ ಮೊದಲು ತಾನೇ ದೊಡ್ಡ ದಂಡಿನೊಡನೆ ಮೈಸೂರನ್ನೊಳನುಗ್ಗಿ, ಸೀರಾದವರೆಗೆ ಹೋಗಿ, ಅಲ್ಲಿದ್ದ ಹೈದರನ ಬೀಗನಾದ **ಮೀರಅಲ್ಲಿ ರಾಜಾಖಾನ**ನನ್ನು ಒಡಕೊಂಡು, ಅವನಿಗೆ **ಗುರುಮ ಕುಂಡ**ವನ್ನು ಉಂಬಳಿ ಹಾಕಿಕೊಟ್ಟು, **ಸೀರಾ**ವನ್ನು ತನ್ನ ಸ್ವಾಧೀನಮಾಡಿಕೊಂಡು, ತನ್ನ ಸಹಾಯಕರಾದ ಇಂಗ್ಲಿಷ-ನಿಜಾಮರ ದಂಡುಗಳು ಮೈಸೂರ ರಾಜ್ಯವನ್ನು ಹೊಗುವದಕ್ಕಿಂತ ಮೊದಲೇ, ಹೆದರಿದ ಹೈದರನಿಂದ ೩೬ ಲಕ್ಷ ರೂಪಾಯಿಗಳ ಕಪ್ಪವನ್ನು ತೆಗೆದುಕೊಂಡು, ಪುಣೆಯ ದಾರಿಯನ್ನು ಹಿಡಿದನು!! ಅತ್ತ ಇಂಗ್ಲಿಷ-ನಿಜಾಮರು ನಿಷ್ಕಾರಣವಾಗಿ ಹೈದರನ ದ್ವೇಷ ಕಟ್ಟಿಕೊಂಡು ಹಲ್ಲು ಬಾರಿಸುತ್ತ ಕುಳಿತರು. ಮೈಸೂರಿನಲ್ಲಿ ನಂಜರಾಜ-ನಂಜರಾಜಯ್ಯರು ಸಿಟ್ಟಿಗೆದ್ದ ಹೈದರನು ಏನು ಮಾಡುವನೋ ಎಂದು ಉಮ್ಮಳಿಸುತ್ತ ಕುಳಿತರು. ಮಾಧವರಾಯನು ತಿರುಗಿ ಹೋದಕೂಡಲೆ ಹೈದರನು ಶ್ರೀರಂಗಪಟ್ಟಣಕ್ಕೆ ಹೋಗಿ, ನಂಜರಾಜಯ್ಯನನ್ನು ವಿಶ್ವಾಸಘಾತದಿಂದ ಕರಿಸಿ, ಅವನನ್ನು ಸೆರೆಯಲ್ಲಿಟ್ಟು, ಅವನ ಉಂಬಳಿಯನ್ನು ಕಿತ್ತಿಕೊಂಡು, ಅವನ ಪಕ್ಷದ ಜನರ ಮೇಲೆ ಇಲ್ಲದ ಆರೋಪಗಳನ್ನು ಹೊರಿಸಿ, ಅವರಿಂದ ದಂಡತೆರಿಸಿದನು.

ಹೈದರನು ಈಮೇರೆಗೆ ರಾಜಧಾನಿಯಲ್ಲೆಲ್ಲ ವ್ಯವಸ್ಥೆಯನ್ನು ಮಾಡಿ, ಪೇಶ್ವೇನು ಹುಚ್ಚಮಲ್ಲಿಯಾಗಿ ಮಾಡಿ ಕೂಡ್ರಿಸಿದ ನಿಜಾಮನನ್ನು ತನ್ನ ಕಡೆಗೆ ಒಡಕೊಂಡು, ಇಂಗ್ಲಿಷರೊಡನೆ ಯುದ್ಧ ಹೂಡಿದನು. ಆದರೆ ಇಂಗ್ಲಿಷ ಬಹದ್ದೂರರು ಈಯುದ್ಧಕ್ಕೆ ಹೆದರಿದರೇನು? ಅವರ ದಳವಾಯಿಯಾದ ಕರ್ನಲ್ **ಸ್ಮಿಥನು** ಎರಡೂ ರಾಜ್ಯಗಳ ದಂಡುಗಳನ್ನು **ಚಂಗಮಾವು** ಎಂಬಲ್ಲಿಯೂ **ತಿರುವಣ್ಣಾಮಲೆ**ಯೆಂಬಲ್ಲಿಯೂ ಸೋಲಿಸಿ, ಹೈದರನು ಹಾಕಿದ ಅಂಬೂರಿನ ಮುತ್ತಿಗೆಯನ್ನೆಬ್ಬಿಸಿ, ನಿಜಾಮನನ್ನು ಧೈರ್ಯಗೆಡಿಸಿದನು. ಆಗ

ನಿಜಾಮನು ಇಂಗ್ಲಿಷರು ಹೇಳಿದಂತೆ ಕೇಳಿ ಒಪ್ಪಂದಮಾಡಿಕೊಂಡನು. ಹೈದರನ ಮನಸ್ಸಿನಲ್ಲಾದರೂ ಒಡಂಬಡಿಕೆ ಮಾಡಿಕೊಳ್ಳುವದಿತ್ತು. ಆದರೆ ಆವನು ನಿಜಾಮನಂತೆ ಹೇಡಿಯಲ್ಲುದರಿಂದ ಅವರು ಹೇಳಿದ ಶರ್ತುಗಳಿಗೆ ಒಪ್ಪಿಕೊಳ್ಳಲಿಲ್ಲ (೧೭೬೮). ಅಷ್ಟರಲ್ಲಿ ಮಳೆಗಾಲವಾರಂಭವಾದ್ದರಿಂದ ಯುದ್ಧದ ಕೆಲಸವು ತುಸು ಹಿಮ್ಮೆಟ್ಟಿತು.

ಮೇಲೆ ವಿವರಿಸಿದಂತೆ ಮೈಸೂರಿನ ಮೂಡಲಲ್ಲಿ ಯುದ್ಧ ನಡೆದಾಗ, ಮುಂಬಯಿ ಸರಕಾರದ ಒಂದು ದಂಡು ಬಂದು; ಮಂಗಳೂರು, ಹೊನ್ನಾವರ, ಮುಂತಾದ ಸ್ಥಳಗಳನ್ನು ಹಿಡಿದುಕೊಂಡು, ಇಂಗ್ಲಿಷರಿಗೆ ನೆರವಾಗದ ಮಲಿಯಾಳರನ್ನು ದಂಡಿಸಿ, ಬೆಂಗಳೂರಿಗೆ ತಿರುಗಿ ಬಂತು. ಅಷ್ಟರಲ್ಲಿ ಮದ್ರಾಸದ ದಳವಾಯಿಯಾದ ಕರ್ನಲ್ ಉಡ್ಡನು ಬಾರಾಮಹಾಲವನ್ನು ಹಿಡಿದುಕೊಂಡನು. ಮತ್ತು ಕರ್ನಲ್ ಸ್ಮಿಥನು ಕೃಷ್ಣಗಿರಿ-ಮುಳಬಾಗಲ-ಕೋಲಾರ-ಹೊಸೂರುಗಳನ್ನು ತೆಗೆದುಕೊಂಡನು. ಈಕಾಲಕ್ಕೆ ಗುತ್ತಿಯಮುರಾರಿರಾಯನು ಇಂಗ್ಲಿಷರಿಗೆ ನೆರವಾಗಲಿಕ್ಕೊಡಂಬಟ್ಟನು. ಆದ್ದರಿಂದ ಮದ್ರಾಸ ಸರಕಾರದವರು ತಮ್ಮ ದಳವಾಯಿಗಳಾದ ಸ್ಮಿಥ-ಉಡ್ಡರಿಗೆ ಬೆಂಗಳೂರನ್ನು ಮುತ್ತಲಿಕ್ಕೆ ಹೇಳಿದರು. ಆದರೆ ಕರ್ನಾಟಕದ ನವಾಬನಾದ ಮಹಮ್ಮದ ಅಲ್ಲಿಯು ತನ್ನ ದಂಡನ್ನು ಬೇಗನೆ ಜೊತೆಗೊಳಿಸದ್ದರಿಂದ, ಅವರಿಗೆ ಹೊರಡಲಿಕ್ಕೆ ತಡವಾಯಿತು. ಅಷ್ಟರಲ್ಲಿ ಹೈದರನು ತನ್ನ ಕುಟುಂಬದವರನ್ನೂ ಬಂಡಾರವನ್ನೂ ಬೆಂಗಳೂರಿಂದ ಸವಣದುರ್ಗವೆಂಬ ಭದ್ರವಾದ ಕೋಟೆಗೆ ಸುರಕ್ಷಿತವಾಗಿ ಕಳುಹಿ, ಸುಮ್ಮನೆ ಹಗೆಗಳ ಹಾದಿನೋಡುತ್ತ ಕುಳ್ಳಿರದೆ, ಗುರಮಕೊಂಡಕ್ಕೆ ಹೋಗಿ, ಅಲ್ಲಿದ್ದ ತನ್ನ ಬೀಗನಾದ ಅಲ್ಲಿರಾಜಾಖಾನನನ್ನು ತನ್ನ ಕಡೆಗೆ ಮಾಡಿಕೊಂಡು, ಮದ್ರಾಸ ಸರಕಾರದವರು ತನ್ನ ಒಪ್ಪಂದದ ಸೂಚನೆಗಳನ್ನು ಮಾನ್ಯಮಾಡದ್ದರಿಂದ ಮುಳಬಾಗಲಕ್ಕೆ ಹೋಗಿ ಆಕೋಟೆಯನ್ನು ಹಿಡಿದುಕೊಂಡು, ಕರ್ನಲ್ ಉಡ್ಡನೊಡನೆ ನಿಕರದಿಂದ ಹೋರಾಡಿ, ತನ್ನ ಚಪಲತನದಿಂದ ಇಂ

ಗ್ಲಿಷರಿಗೆ ಅನ್ನ ಸಾಮಗ್ರಿಯು ಮುಟ್ಟದಂತೆ ಮಾಡಿ ಅವರನ್ನು ಗೋಳಾಡಿಸಿದನು.

"ಇಂಗ್ಲಿಷರ ರಾಜ್ಯದಲ್ಲಿ ಇರುವೆ ಹೋಗಲಿಕ್ಕೆ ಸ್ಥಳ ದೊರೆಯುವದಿಲ್ಲ, ಆದರೂ ಆನೆಗಳು ಹೋದರೆ ಗೊತ್ತೇಹತ್ತುವದಿಲ್ಲ" ಎಂಬ ನಾಣ್ಣುಡಿಯ ದೃಷ್ಟಾಂತವು ಈಕಾಲಕ್ಕೆ ದೊರೆಯಿತು. ಮದ್ರಾಸ ಸರಕಾರದ ಕೆಲವು ದೊಡ್ಡ ಅಧಿಕಾರಿಗಳು ಕರ್ನಾಟಕದ ನವಾಬನಾದ ಮಹಮ್ಮದ ಅಲ್ಲಿಯಲ್ಲಿ ಪಕ್ಷಪಾತವಿಟ್ಟಿದ್ದರು. ಆದ್ದರಿಂದ ಆಸರಕಾರದವರು ತಮ್ಮ ದಳವಾಯಿಗಳಿಗೆ ತಾವು ಯುದ್ಧದಲ್ಲಿ ಹಿಡಿದುಕೊಂಡ ಸ್ಥಳಗಳನ್ನು ನವಾಬನ ವಶಕ್ಕೆ ಕೊಡಬೇಕೆಂತಲೂ ಬೆಂಗಳೂರಿನ ಮೇಲೆ ಸಾಗಿ ಹೋಗಬೇಕೆಂತಲೂ ಒಂದರ ಹಿಂದೊಂದು ಹುಕುಮನ್ನು ಕಳುಹುತ್ತಿದ್ದರು. ಈಯೆರಡೂ ತರದ ಹುಕುಮುಗಳಂತೆ ನಡೆಯುವುದು ದಳವಾಯಿಗಳಿಗೆ ಅಸಂಭವವೆಂದು ತೋರಿತು. ಏಕಂದರೆ ನವಾಬನ ವಶದಲ್ಲಿ ಕೊಟ್ಟ ಊರುಗಳನ್ನೆಲ್ಲ ಮೈಸೂರವರು ಕೂಡಲೆ ಹಿಡಿದುಕೊಳ್ಳುತ್ತಿದ್ದರು, ಮತ್ತು ಬೆಂಗಳೂರಿಗೆ ಹೆದರಿಕಿಲ್ಲದೆ ಹೋಗಲಿಕ್ಕೆ ಸಾಕಷ್ಟು ದಂಡು ಅವರ ಬಳಿಯಲ್ಲಿದ್ದಿಲ್ಲ. ಆದ್ದರಿಂದ ಕರ್ನಲ್ ಸ್ಮಿಥನು ಮದ್ರಾಸ ಸರಕಾರಕ್ಕೆ ಅಪ್ರಿಯನಾದನು, ಆಕಾರಣ ಸರಕಾರದವರು ಸ್ಮಿಥ-ಉಡ್ಡರನ್ನು ತಿರುಗಿ ಕರಿಸಿ, ಕರ್ನಲ್ ಲ್ಯಾಂಗನೆಂಬವನನ್ನು ತಮ್ಮ ದಳವಾಯಿಯನ್ನು ಮಾಡಿದರು.

ಇಂಗ್ಲಿಷರ ಅಧಿಕಾರಿಗಳಲ್ಲಿ ಈಮನಸ್ತಾಪವು ಹುಟ್ಟಿದ್ದ ಕಾಲದಲ್ಲಿ ಹೈದರನು ಸುಮ್ಮನೆ ಕುಳ್ಳಿರದೆ, ತನ್ನ ದಳವಾಯಿಯಾದ **ಫಾಜಲ್-ಉಲ್ಲಾಖಾನ**ನನ್ನು ಶ್ರೀರಂಗಪಟ್ಟಣಕ್ಕೆ ಕಳುಹಿ, ಅವನು ಹೊಸ ದಂಡುಕಟ್ಟಿಕೊಂಡು ಬಂದಕೂಡಲೆ ಅವನ್ನು **ಗೆಜ್ಜಲ್ಹಟ್ಟಿ**ಯ ಮಾರ್ಗವಾಗಿ ಕಣಿವೆಯ ಕೆಳಗೆ ಕಳುಹಿ, ಮುಂದಿನ ತಿಂಗಳು ಅಂದರೆ ದಶಂಬರ ೧೭೬೮ರಲ್ಲಿ ತಾನೂ ಅತ್ತಕಡೆಗೆ ನಡೆದನು. ಅವನು ಹಾದಿಯಲ್ಲಿ **ಕರೂರ**ನ್ನು ಹಿಡಿದುಕೊಂಡು, **ಎರೋಡೆ**ಯ ಹತ್ತರ ಕ್ಯಾಪ್ಟನ್ ನಿಕ್ಸನ್ನನೆಂಬ ದಳವಾಯಿಯನ್ನು ಪೂರ್ಣ

ವಾಗಿ ಸೋಲಿಸಿ, ಆವೂರನ್ನು ಹಿಡಿದುಕೊಂಡು, ಅಲ್ಲಿದ್ದ ಇಂಗ್ಲಿಷ ರನ್ನೆಲ್ಲ ಸೆರೆಯಾಳಾಗಿ ತನ್ನ ರಾಜಧಾನಿಗೆ ಕಳುಹಿ,* ತಂಜಾವರದ ಅರಸನಿಂದ ೪ ಲಕ್ಷ ರೂಪಾಯಿ ಕಪ್ಪವನ್ನು ತೆಗೆದುಕೊಂಡು, ಕಡ ಲೂರಿಗೆ ಹೋದನು. ಹೈದರನ ಈಹಾವಳಿಗೆ ಹೆದರಿ ಮದ್ರಾಸ ಸರಕಾರದವರು ಕ್ಯಾಪ್ಟನ್ ಬ್ರೂಕನೆಂಬ ನಿಯೋಗಿಯನ್ನು ಹೈದ ರನ ಬಳಿಗೆ ಒಪ್ಪಂದ ಬೇಡಲಿಕ್ಕೆ ಕಳುಹಿದರು. ಆದರೆ ಹೈದರನು ಕರ್ನಾಟಕ ನವಾಬನಿಗೆ ಏನೂ ಬಿಟ್ಟು ಕೊಡಲೊಪ್ಪದ್ದರಿಂದಲೂ ಹಿಂದೆ ಹೇಳಿದಂತೆ ಮದ್ರಾಸ ಸರಕಾರದ ಕೆಲಧಿಕಾರಿಗಳು ಆನವಾ ಬನ ಪಕ್ಷಪಾತಿಗಳಾದ್ದರಿಂದಲೂ ಒಪ್ಪಂದವಾಗಲಿಲ್ಲ. ಆದಕಾ ರಣ ಹೈದರನು ಮೊದಲು ಕರ್ನಾಟಕದ ಯುದ್ಧದಲ್ಲಿ ಕ್ಲೈವನು ಮಾಡಿದ ಯುಕ್ತಿಯನ್ನು ಈಕಾಲಕ್ಕೆ ಮಾಡಿದನು. ಮದ್ರಾಸ ದಲ್ಲಿ ಹೆಚ್ಚಿಗೆ ದಂಡಿಲ್ಲೆಂಬದು ಅವನಿಗೆ ಗೊತ್ತಿತ್ತು. ಆದ್ದರಿಂದ ಆವನು ೬೦೦೦ ಮಂದಿ ಉತ್ತಮ ಸ್ವಾರರನ್ನು ತನ್ನ ಸಂಗಡ ತೆಗೆದು ಕೊಂಡು, ೩½ ದಿವಸಗಳಲ್ಲಿ ೧೩೦ ಮೈಲು ದಾರಿನಡೆದು, ಮದ್ರಾಸ ದಿಂದ ೫ ಮೈಲಿನ ಮೇಲಿರುವ ಸೆಂಟಮೌಂಟವೆಂಬದೊಂದು ಮರ ಡಿಯ ಮೇಲೆ ಪಾಳಯ ಹಾಕಿದನು. ಕೂಡಲೆ ಮದ್ರಾಸಸರಕಾ ರದವರು ಹೆದರಿ, ಅವನು ಹೇಳಿದಂತೆ ಒಪ್ಪಂದ ಮಾಡಿಕೊಂಡರು (೧೭೬೯). ಇಂಗ್ಲಿಷರು ಈತರದ ಸ್ಥಿತಿಯಲ್ಲಿದ್ದರೂ ಹೈದರನು ಅನ್ಯಾಯದ ಬೇಡಿಕೆಯನ್ನು ಮಾಡಲಿಲ್ಲೆಂಬದು ಅವನಿಗೆ ಭೂಷ ಣಾಸ್ಪದವಾದ ಸಂಗತಿಯೇ ಸರಿ. ಈಯೊಪ್ಪಂದದ ಶರ್ತುಗಳಾವ ವೆಂದರೆ:—(೧) ಎರಡೂ ಪಕ್ಷದವರ ಸೀಮೆಗಳು ಯುದ್ಧದ ಮೊ ದಲಿದ್ದಂತೇ ಇರಬೇಕು; (೨) ಮುಹಮ್ಮದ ಅಲ್ಲಿಯು ಕರೂರಿನ

* ೧೭೬೭ರಲ್ಲಿ ಹೈದರನು ವನಿಯಂಬಾಡಿಯೆಂಬವೂರನ್ನು ಹಿಡಿದುಕೊಳ್ಳಲು, ಅಲ್ಲಿದ್ದ ಇಂಗ್ಲಿಷ ಅಧಿಕಾರಿಯು ತಾನು ಮುಂದೆ ಆಯುದ್ಧದಲ್ಲಿ ಶಸ್ತ್ರಹಿಡಿಯಲಿ ಕ್ಕಿಲ್ಲೆಂದು ಮಾತುಕೊಟ್ಟು ಬಿಡುಗಡೆ ಹೊಂದಿದ್ದನು. ಆದರೆ ಅದೇ ಗೃಹಸ್ಥನು ಎರೋಡೆಯಲ್ಲಿ ಕಾದುತ್ತಿರುವುದನ್ನು ನೋಡಿ ಹೈದರನು ನ್ಯಾಯವಾಗಿ ಸಿಟ್ಟಗೆದ್ದು, ತನಗೆ ಸಿಕ್ಕ ಎಲ್ಲ ಇಂಗ್ಲಿಷರನ್ನು ಸೆರೆಯಾಳಾಗಿ ಮಾಡಿದನು.

ಮೇಲಿದ್ದ ತನ್ನ ಬಾಧ್ಯತೆಯನ್ನು ಬಿಟ್ಟುಕೊಡಬೇಕು; (೩) ಮತ್ತು ಪರರಾಯರು ಯುದ್ಧ ಹೂಡಿದರೆ ಒಬ್ಬರು ಮತ್ತೊಬ್ಬರಿಗೆ ನೆರವಾಗಬೇಕು.

ಈಮೇರೆಗೆ ಇಂಗ್ಲಿಷರೊಡನೆ ನಡೆದ ಯುದ್ಧವು ಮುಗಿಯಿತು. ಆದರೆ ದುರ್ದೈವದಿಂದ ಹೈದರನು ಬಾಬರನಂತೆ ತನ್ನ ಉಳಿದ ಆಯುಷ್ಯವನ್ನು ಜಗಳಾಡುವದರಲ್ಲೇ ಕಳೆದನು. ಅವನಿಗೆ ರಾಜ್ಯದಾಡಳತವನ್ನು ತಿದ್ದುವುದರಿಂದ ಆಗುವ ಲಾಭಗಳು ಗೊತ್ತೇ ಇರಲಿಲ್ಲ. ಪ್ರಜೆಗಳ ಸುಖದುಃಖವನ್ನು ವಿಚಾರಿಸಿ, ತಕ್ಕ ಏರ್ಪಾಡುಗಳನ್ನು ಮಾಡುವ ಇಚ್ಛೆಯು ಅವನಲ್ಲಿ ಇದ್ದಂತೆ ತೋರುವದಿಲ್ಲ. ಜಗಳವು ಇಲ್ಲದಿದ್ದರೆ ಅವನಿಗೆ ಹೊತ್ತೇ ಹೋಗುತ್ತಿದ್ದಿಲ್ಲ. ಹೇಗಾದರೂ ಮಾಡಿ ದುಡ್ಡು ಕೂಡ ಹಾಕಿ ಹೆಚ್ಚು ದಂಡು ಕಟ್ಟಿಕೊಂಡು, ನಿರ್ಬಲರಾದ ನೆರೆರಾಯರ ನಾಡುಗಳನ್ನು ಹಿಡಿದುಕೊಳ್ಳಬೇಕೆಂಬ ಲವಲವಿಕೆಯು ಅವನ ಮನಸ್ಸಿನಲ್ಲಿ ಯಾವಾಗಲೂ ಇರುತ್ತಿತ್ತು. ಈಯುದ್ದೇಶಕ್ಕನುಸರಿಸಿ, ಇಂಗ್ಲಿಷರೊಡನೆ ನಡೆದ ಯುದ್ಧವು ಮುಗಿದಕೂಡಲೆ, ಅವನು ಮೊದಲು ಸೀರಾಪ್ರಾಂತಕ್ಕೆ ಸೇರಿದ ಕಡಪೆ-ಕರ್ನೂಲುಗಳ ನವಾಬನನ್ನು ಸೋಲಿಸಿ, ಅವರಿಂದ ಕಪ್ಪವನ್ನು ತೆಗೆದುಕೊಂಡು, ಅವರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡನು.

ಪೇಶ್ವೇನು ಮೈಸೂರಿನ ಮೇಲೆ ಆಗಿಂದಾಗ ದಂಡೆತ್ತಿ ಬರಲಿಕ್ಕೊಂದು ನೆವನ ಮಾಡಿಕೊಂಡಿದ್ದನು. ಅದಾವದೆಂದರೆ ವಿಜಯನಗರದ ರಾಜರ ಕಾಲದಲ್ಲಿ ಮೈಸೂರು ಆ ರಾಜ್ಯದ ಮಾಂಡಲಿಕ ಸಂಸ್ಥಾನವಾಗಿತ್ತು. ಮುಂದೆ ವಿಜಯನಗರವು ಹಾಳಾದ ಬಳಿಕ ಅದಿಲ್‌ಶಾಹಿ ಬಾದಶಹನು ಮೈಸೂರ ಅರಸನು ತನ್ನ ಮಾಂಡಲಿಕನೆಂದು ತಿಳಿದುಕೊಂಡನು; ಬಳಿಕ ಅವರಂಗಜೇಬನು ಅದಿಲ್‌ಶಾಹಿಯನ್ನು ಹಾಳುಗೆಡವಿದ ಬಳಿಕ ಮೈಸೂರ ಅರಸನು ಮೋಗಲ್ ಬಾದಶಹನ ಮಾಂಡಲಿಕನಾದನು. ಮುಂದೆ ಮೋಗಲ್ ರಾಜ್ಯವು ಹಾಳಾದ ಬಳಿಕ ಪೇಶ್ವೇರು ಬಾದರಾಯಣ ಸಂಬಂಧದಿಂದ

ಮೈಸೂರು ತಮ್ಮ ಮಾಂಡಲಿಕಸಂಸ್ಥಾನವೆಂದೆಣಿಸಿ, ಆರಾಜ್ಯದಿಂದ ಕಪ್ಪವನ್ನು ತೆಗೆದುಕೊಳ್ಳುವ ನೆವದಿಂದ ಮೇಲಿಂದಮೇಲೆ ದಂಡೆತ್ತಿ ಬರುತ್ತಿದ್ದರು.

ಮೇಲೆ ಹೇಳಿದಂತೆ ಹೈದರನು ಕಡಪೆ-ಕರ್ನೂಲುಗಳ ನವಾಬರನ್ನು ಗೆದ್ದ ತುಸುದಿವಸದಲ್ಲೇ ಆಕಾಲಕ್ಕೆ ಪೇಶ್ವೇನಾದ ಮಾಧವರಾಯನು ದೊಡ್ಡ ದಂಡು ತೆಗೆದುಕೊಂಡು, ಮೈಸೂರ ಮೇಲೆ ಸಾಗಿಬಂದನು. ಆಗ ಹೈದರನು ಒಪ್ಪಂದದ ಶರ್ತಿನಂತೆ ಇಂಗ್ಲಿಷರ ನೆರವನ್ನು ಕೇಳಿದನು. ಅದಕ್ಕವರು ನಕಾರಭಾಗಿಸಿದ್ದರಿಂದ ಅವನು ತಾನೊಬ್ಬನೆ ಪೇಶ್ವೇನೊಡನೆ ಕಾದುವದು ಕಷ್ಟವೆಂದೆಣಿಸಿ ಮಾಧವರಾಯನೊಡನೆ ಒಪ್ಪಂದ ಮಾಡಲೆಳಸಿದನು. ಆದರೆ ಮಾಧವರಾಯನು ೧ ಕೋಟಿ ರೂಪಾಯಿ ಕಪ್ಪವನ್ನು ಬೇಡಿದ್ದರಿಂದ, ಇಷ್ಟು ಹಣ ಕೊಡುವುದಕ್ಕಿಂತ ಕಾದುವುದೇ ಲೇಸೆಂದು ಹೈದರನಿಗೆ ತೋರಿತು. ಆದ್ದರಿಂದ ಮಾಧವರಾಯನು ಒಂದರ ಹಿಂದೊಂದು ಸ್ಥಳವನ್ನು ಹಿಡಿದುಕೊಳ್ಳುತ್ತಾ, ನಿಜಗಲ್ಲಿನ ವರೆಗೆ ಬಂದನು. ಅಲ್ಲಿ ಮಾತ್ರ ಅವನ ದಂಡು ಬೆನ್ನು ತೋರಿಸಿತು. ಆದರೂ ಮಾಧವರಾಯನು ಧೈರ್ಯಬಿಡದೆ ಮತ್ತೆ ಪ್ರಯತ್ನಮಾಡಿ, ಚಿತ್ರಗಲ್ಲುದುರ್ಗದ ಪಾಳಯಗಾರನ ಸಹಾಯದಿಂದ ಆ ಕೋಟೆಯನ್ನು ಹಿಡಿದುಕೊಂಡು, ಅದರಲ್ಲಿದ್ದ ಎಲ್ಲ ಜನರ ಕಿವಿ ಮೂಗುಗಳನ್ನು ಕ್ರೂರತನದಿಂದ ಕೊಯ್ಸಿ ಹಾಕಿದನು*!!

ಈಜನಕ್ಷೋಭದಿಂದಲೋ ಬೇರೆ ಯಾವ ಕಾರಣದಿಂದಲೋ

---

* ಈ ಕಾರ್ಯವು ಮಾಧವರಾಯನ ಹೆಸರಿಗೆ ಕುಂದು ತರುತ್ತದೆ. ಹಗೆಗಳು ಧೈರ್ಯದಿಂದ ತಮ್ಮ ಕೋಟೆಯನ್ನು ಕಾಪಾಡಿದರೆ, ಕಲಿಗಳು ಸಂತೋಷಬಡ ಬೇಕೇ ಹೊರತು ಅವರು ತಪ್ಪುಗಾರರೆಂದು ಎಣಿಸಕೂಡದು. ಮುಂದೆ ದೈವಯೋಗದಿಂದ ಅವರು ಸೋತು ಶರಣು ಬಂದರೆ ಅವರಿಗೆ ಮಾನಕೊಡುವುದು ಶೂರರಿಗೆ ಭೂಷಣವು. ಆದ್ದರಿಂದ ಮಾಧವರಾಯನು ಹಾಗೆ ಮಾಡದೆ ಅವರು ದೊಡ್ಡ ಅಪರಾಧಿಗಳೆಂದೆಣಿಸಿ, ಅವರ ಕಿವಿ ಮೂಗುಗಳನ್ನು ಕೊಯ್ಸಿದ್ದು ಅವನ ಶೌರ್ಯಕ್ಕೂ ಬ್ರಾಹ್ಮಣ್ಯಕ್ಕೂ ಲಾಂಛನಾಸ್ಪದವಾದ ಸಂಗತಿಯೇ ಸರಿ.

ಮಾಧವರಾಯನು ಈಕಾಲಕ್ಕೆ ಬೇನೆಬಿದ್ದನು. ಅದರಿಂದ ಅವನು ತನ್ನ ಸೋದರಮಾವನಾದ ತ್ರಿಯಂಬಕರಾಯನನ್ನು ದಂಡಿನೊಡನೆ ಬಿಟ್ಟು, ತಾನು ಪುಣೆಗೆ ಹೋದನು. ಇತ್ತ ತ್ರಿಯಂಬಕರಾಯನು ಗುರಮಕೊಂಡ ಮುಂತಾದ ಸ್ಥಳಗಳನ್ನು ಹಿಡಿದುಕೊಂಡು, ಹೈದರನು ಪಾಳಯ ಹಾಕಿದ್ದ **ಮೇಲುಕೋಟೆಗೆ** ಹೋದನು. ಅಲ್ಲಿ ಎರಡೂ ದಂಡುಗಳು ಇದುರುಬದರಾಗಿ ಕೆಲವು ದಿವಸಗಳಿದ್ದ ಬಳಿಕ ಒಂದು ದಿನ ರಾತ್ರಿ ಹೈದರನು ಶ್ರೀರಂಗಪಟ್ಟಣಕ್ಕೆ ತಿರುಗಿ ಹೋಗಬೇಕೆಂದು ತನ್ನ ದಂಡಿನವರಿಗೆ ಅಪ್ಪಣೆ ಕೊಟ್ಟನು. ಆದರೆ ಆದಿನ ಸಂಜೆಯಲ್ಲಿ ಹೈದರನು ಯಥೇಚ್ಛವಾಗಿ ಕುಡಿದುದರಿಂದಲೂ ಅವನ ಮಗನಾದ ಟೀಪುವು ಬೇರೆ ಕಡೆಯಲ್ಲೆಲ್ಲೋ ಹೋಗಿದ್ದುದರಿಂದಲೂ ಒಬ್ಬ ದಂಡಾಳು ತುಬಾಕಿಯನ್ನು ಹಾರಿಸಿದನು. ಕೂಡಲೆ ಮೈಸೂರವರು ಓಡಿಹೋಗುತ್ತಾರೆಂದು ತ್ರಿಯಂಬಕರಾಯನು ತನ್ನ ದಂಡನ್ನು ಸಜ್ಜು ಮಾಡಿ ಹೈದರನ ದಂಡನ್ನು **ಚಿನಕುರಳಿಯ** ಹತ್ತರ ಅಡ್ಡಗಟ್ಟಿ ಯಥೇಚ್ಛವಾಗಿ ಕೊಲೆ ಮಾಡಿದನು. ಆಘೋರ ಸಂಗ್ರಾಮದಲ್ಲಿ ಹೈದರನು ಹಾಗೂ ಹೀಗೂ ಮಾಡಿ ತಪ್ಪಿಸಿಕೊಂಡು ಒಬ್ಬನೇ ಶ್ರೀರಂಗಪಟ್ಟಣಕ್ಕೆ ಓಡಿಹೋದನು; **ಟೀಪುವು** ಹರಕು ಬಟ್ಟೆಗಳಿಂದ ರೂಪು ಬದಲಿಸಿಕೊಂಡು, ಶ್ರೀರಂಗಪಟ್ಟಣವ ಹೊಕ್ಕನು*; **ಫಾಜಲ್‌ಉಲ್ಲಾಖಾನನೆಂಬ** ದಳವಾಯಿಯು ಮಾತ್ರ ಶೌರ್ಯದಿಂದ ಕಾದಿ, ಹಾದಿ ಬಿಡಿಸಿಕೊಂಡು, ರಾಜಧಾನಿಗೆ ಹೋಗಿ ಮುಟ್ಟಿದನು. ಕೂಡಲೆ ತ್ರಿಯಂಬಕರಾಯನು ಶ್ರೀರಂಗಪಟ್ಟಣಕ್ಕೆ ಬೆನ್ನಟ್ಟಿ ಹೋಗಿದ್ದರೆ, ಹೈದರನು ತುಸುದಿವಸದಲ್ಲೇ ಜೇರಿಗೆ ಬರುತ್ತಿದ್ದನು. ಆದರೆ ತ್ರಿಯಂಬಕರಾಯನ ದ್ರವ್ಯಾಶೆಯು ಹೈದರನಿಗೆ ಅವಕಾಶ ಕೊಟ್ಟಿತು. ಮೇಲುಕೋಟೆಯು ಶ್ರೀವೈಷ್ಣವ-ಬ್ರಾಹ್ಮಣರ ಮುಖ್ಯಸ್ಥಾನವಾದ್ದರಿಂದ ಆಮಠದ ಸಂಪತ್ತಿಯು ತ್ರಿಯಂಬಕರಾಯನ ಲೋಭವನ್ನು ಹೆಚ್ಚಿಸಿ, ಹೈದರನ ಬೆನ್ನಟ್ಟುವ ಕೆಲಸದ ಗೌರವವನ್ನು

---

* ಟೀಪುವು ಶ್ರೀರಂಗಪಟ್ಟಣಕ್ಕೆ ಬಂದ ಬಳಿಕ ಹೈದರನು ಅವನನ್ನು ಚೆನ್ನಾಗಿ ಬಾರುಕೋಲಿನಿಂದ ಹೊಡೆದನಂತೆ.

ಕಂದಿಸಿತು. ತ್ರಿಯಂಬಕರಾಯನು ತನ್ನ ಬ್ರಾಹ್ಮಣಧರ್ಮಕ್ಕೆ ವಿರುದ್ಧವಾಗಿ ಅಲ್ಲಿಯ ತೇರುಗಳನ್ನು ಸುಡಿಸಿ, ದೇವಸ್ವವನ್ನು ಅಪಹರಿಸುವ ನೀಚಕೃತ್ಯದಲ್ಲಿ ತೊಡಗಿದ್ದರಿಂದ, ಹೈದರನಿಗೆ ಸಾಕಷ್ಟು ಅವಕಾಶ ಸಿಕ್ಕು ಮುತ್ತಿಗೆಯ ಬಾಧೆಯನ್ನು ತಪ್ಪಿಸಲಿಕ್ಕೆ ಬೇಕಾದ ಅನುಕೂಲತೆಯನ್ನು ಮಾಡಿಕೊಳ್ಳಲಿಕ್ಕೆ ಆಸ್ಪದವಾಯಿತು. ಬಳಿಕ ತ್ರಿಯಂಬಕರಾಯನು ಬಂದು ಹೈದರನ ರಾಜಧಾನಿಯನ್ನು ಮುತ್ತಿದನು. ಈಮುತ್ತಿಗೆಯು ಹದಿನಯ್ದು ತಿಂಗಳು ನಡೆಯಿತು. ಹೈದರನು ಹಣ್ಣಾಗದಿದ್ದರೂ ತ್ರಿಯಂಬಕರಾಯನು ಬೇಸತ್ತು ಮುತ್ತಿಗೆಯನ್ನೆಬ್ಬಿಸಲಿಲ್ಲ. 'ಹಗ್ಗ ಹರಿಯಲಿಲ್ಲ, ಕೋಲು ಮುರಿಯಲಿಲ್ಲ' ಎಂಬ ಗಾದೆಯಂತೆ ಅವರೀರ್ವರ ಸ್ಥಿತಿಯಾಯಿತು. ಕಟ್ಟಕಡೆಗೆ ಕೆಳಗೆ ಬರೆದ ಶರ್ತುಗಳಂತೆ ಒಪ್ಪಂದವಾಯಿತು (ಜೂನ ೧೭೭೪):—

(೧) ಹೈದರನು ಪೇಶ್ವೇನಿಗೆ ಒಟ್ಟು ೩೦ ಲಕ್ಷ ರೂಪಾಯಿ ಕೊಡಬೇಕು.

(೨) ಮೇಲೆ ಹೇಳಿದ ಹಣದಲ್ಲಿ ಅರ್ಧ ಹಣವನ್ನು ಹೈದರನು ಆಕಾಲಕ್ಕೆ ಕೊಟ್ಟುದರಿಂದ ಉಳಿದ ಹಣವನ್ನು ಕೊಡುವ ವರೆಗೆ ಹೈದರನು ಕೋಲಾರ ಪ್ರಾಂತವನ್ನು ಪೇಶ್ವೇನಿಗೆ ಭೋಗ್ಯಡವು ಮಾಡಿಕೊಡಬೇಕು.*

ಈಯುದ್ಧವು ಹೈದರನ ಬಂಡಾರವನ್ನೆಲ್ಲ ಬರಿದು ಮಾಡಿತು. ಆದ್ದರಿಂದ ಅವನು ಆಪ್ತೇಷ್ಟರನ್ನು ನೋಡದೆ, ದೊರೆದಷ್ಟು ಹಣವನ್ನು ತೆಗೆದುಕೊಂಡನು. ಅವನು ಒಡೆಯನಾದ ನಂಜರಾಜನನ್ನೂ ತನ್ನ ಆಪ್ತನಾಗಿದ್ದ ಫಾಜಲ್ ಉಲ್ಲಾಖಾನನನ್ನೂ ಬಿಡಲಿಲ್ಲ. ಈ ಮೇರೆಗೆ ಹೈದರನು ಹಣ ಕೂಡಿಸುವ ಆಲೋಚನೆಯಲ್ಲಿರುವಾಗ

* ಈ ಯುದ್ಧವು ನಡೆದಾಗ ಮೈಸೂರಿನ ಅರಸನಾದ ನಂಜರಾಜನು ಪೇಶ್ವೇನೊಡನೆ ಒಳಸಂಚು ನಡಿಸಿರುತ್ತಾನೆಂದು ಹೈದರನಿಗೆ ತಿಳಿದುದರಿಂದ ಅವನು ಯುದ್ಧವು ಮುಗಿದ ಕೂಡಲೆ ನಂಜರಾಜನು ಸ್ನಾನ ಮಾಡುವಾಗ ಕುತ್ತಿಗೆ ಹಿಚಕಿ ಅವನನ್ನು ಕೊಲ್ಲಿಸಿ, ಅವನ ತಮ್ಮನಾದ ಚಾಮರಾಜನಿಗೆ ಪಟ್ಟಗಟ್ಟಿಸಿದನು!!

ಪುಣೆಯಲ್ಲಿ ಪೇಶ್ವೇ ನಾರಾಯಣರಾಯನ ಕೊಲೆಯಾಯಿತೆಂತಲೂ ಅವನ ಕಕ್ಕನಾದ ರಘುನಾಥರಾಯನು ಆ ಕೊಲೆಯನ್ನು ಮಾಡಿಸಿ ತಾನು ಪೇಶ್ವೇನಾದನೆಂತಲೂ ಈ ಕಾರಣದಿಂದ ಪುಣೆಯ ದರಬಾರಿನಲ್ಲಿ ಎರಡು ಪಂಗಡಗಳಾಗಿರುತ್ತವೆಂತಲೂ ಸುದ್ದಿಯು ಬಂತು. ಕೂಡಲೆ ಹೈದರನು ಅದೇ ಸಂಧಿಯೆಂದೆಣಿಸಿ ತಾನು ಮಾಡಿಕೊಂಡ ಒಪ್ಪಂದದ ಶರ್ತುಗಳನ್ನು ಸಟ್ಟೆ ಮಾಡದೆ, ತಾನು ಭೋಗ್ಯಡವಾಗಿ ಕೊಟ್ಟ ಕೋಲಾರ ಮುಂತಾದ ಸ್ಥಳಗಳನ್ನು ತಿರುಗಿ ತೆಗೆದುಕೊಂಡನು. ಆಕಾಲದಲ್ಲಿ ಈದೇಶದೊಳಗಿನ ಅರಸರ ನಡುವೆ ಆದ ಒಪ್ಪಂದಗಳು ಎಣ್ಣೆ ಚೀಟಿಗಳಾಗಿದ್ದವೆಂದರೆ ಅತಿಶಯೋಕ್ತಿಯಾಗಲಾರದು.

ಇಂತು ಪೇಶ್ವೇನನ್ನು ಮೋಸಗೊಳಿಸಿದ ಬಳಿಕ ಹೈದರನ ದೃಷ್ಟಿಯು ಶನೀಶ್ವರನ ದೃಷ್ಟಿಯಂತೆ ಕೊಡಗು ಸೀಮೆಯ ಮೇಲೆ ಬಿತ್ತು. ಅವನು ಬಿದನೂರನ್ನು ತೆಗೆದುಕೊಂಡಾಗ ಕೊಡಗು ಆ ಸಂಸ್ಥಾನಕ್ಕೆ ಸೇರಿತ್ತು. ಆದ್ದರಿಂದ ಅವನು ಕೊಡಗಿನಿಂದ ಪ್ರತಿವರ್ಷ ಪೊಗದಿಯನ್ನು ತೆಗೆದುಕೊಳ್ಳುತ್ತಿದ್ದನು. ೧೭೭೦ರಲ್ಲಿ ಆ ಸೀಮೆಯ ಪಟ್ಟದ ಸಂಬಂಧದಿಂದ ಬಡೆದಾಟವು ಹುಟ್ಟಲು, ಲಿಂಗರಾಜನೆಂಬವನು ಹೈದರನ ನೆರವನ್ನು ಕೇಳಿದನು. ಆದರೆ ಅದೇ ಸಮಯಕ್ಕೆ ಮಾಧವರಾಯನು ಮೈಸೂರಿನ ಮೇಲೆ ದಂಡೆತ್ತಿ ಬಂದುದರಿಂದ ಹೈದರನಿಗೆ ಕೊಡಗಿಗೆ ಹೋಗಲಿಕ್ಕೆ ಅವಕಾಶ ದೊರೆಯಲಿಲ್ಲ. ಈಗ ಪೇಶ್ವೇನ ಕಾಟವು ತಪ್ಪಿದ್ದರಿಂದಲೂ ಕೊಡಗಿನ ಅರಸನು ತ್ರಿಯಂಬಕರಾಯನು ಶ್ರೀರಂಗಪಟ್ಟಣವನ್ನು ಮುತ್ತಿದಾಗ ಹೈದರನಿಗೆ ಬೇಕಾದ ಸಾಮುಗ್ರಿಗಳನ್ನು ಒದಗಿಸಿಕೊಡದ್ದರಿಂದಲೂ ಹೈದರನು ಅಲ್ಲಿಗೆ ದಂಡೆತ್ತಿ ಹೋಗಿ, ಅಲ್ಲಿಯ ರಾಜಧಾನಿಯಾದ ಮಡಿಕೇರಿಯನ್ನು ಹಿಡಿದುಕೊಂಡು, ಪ್ರತಿಯೊಬ್ಬ ಕೊಡಗಿಯ ತಲೆಗೆ ೫ ರೂಪಾಯಿಯಂತೆ ೭೦೦ ಜನರನ್ನು ಕೊಲ್ಲಿಸಿ, ಆ ಸೀಮೆಯನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡು, ಅಲ್ಲಿಂದ ಮಲಬಾರಕ್ಕೆ ಹೋಗಿ ಆ ನಾಡನ್ನು ಮತ್ತೆ ಗೆದ್ದನು (೧೭೭೩).

ಹೈದರನು ಈ ಮೇರೆಗೆ ತೊಡಗಿದಾಗ ಪೇಶ್ವೇ ರಘುನಾಥ ರಾಯನು ಅವನು ಮಾಡಿದ ಮೋಸಕ್ಕೆ ಸಿಟ್ಟಿಗೆದ್ದು, ನಿಜಾಮನೊಡನಿದ್ದ ತನ್ನ ಜಗಳವನ್ನು ತೀರಿಸಿಕೊಂಡು, ದಂಡೆತ್ತಿ ಬಂದು, ಕಲ್ಯಾಣದುರ್ಗದ ಬಳಿಯಲ್ಲಿಳಿದನು. ಕೂಡಲೆ ಹೈದರನು ತನ್ನ ವಕೀಲನನ್ನು ಒಪ್ಪಂದದ ಮಾತಾಡಲಿಕ್ಕೆ ಅವನ ಬಳಿಗೆ ಕಳುಹಿದನು. ಹೈದರನ ಸುದೈವದಿಂದ ಅದೇ ಸಮಯಕ್ಕೆ ಪುಣೆಯೊಳಗಿನ ಮುತ್ಸದ್ದಿಗಳು ರಘುನಾಥರಾಯನು ಪೇಶ್ವೇನಲ್ಲೆಂತಲೂ ಸ್ವರ್ಗವಾಸಿ ನಾರಾಯಣರಾಯನ ಹೆಂಡತಿಯು ಹಡೆಯುವ ವರೆಗೆ ಆಕೆಯ ಹೆಸರಿನಿಂದ ರಾಜ್ಯವಾಳಬೇಕೆಂತಲೂ ಸಂಚುಮಾಡಿರುತ್ತಾರೆಂಬ ಸುದ್ದಿಯು ಅಲ್ಲಿಗೆ ಬಂತು. ಆದ್ದರಿಂದ ರಘುನಾಥರಾಯನು ಬಿಗಿಹಿಡಿಯದೆ ಕೆಳಗೆ ಬರೆದ ಶರ್ತುಗಳಂತೆ ಹೈದರನೊಡನೆ ಒಪ್ಪಂದ ಮಾಡಿಕೊಂಡನು (೧೭೭೪).

(೧) ಕೃಷ್ಣಾನದಿಯ ತೆಂಕಣಿಗಿರುವ ಎಲ್ಲ ಸ್ಥಳಗಳ ಮೇಲಿನ ಹಕ್ಕನ್ನು ಪೇಶ್ವೇಯು ಬಿಟ್ಟುಕೊಡಬೇಕು.

(೨) ಹೈದರನು ಪೇಶ್ವೇನಿಗೆ ವರ್ಷವೊಂದಕ್ಕೆ ೬೦೦,೦೦೦ ರೂಪಾಯಿಗಳನ್ನು ಮಾತ್ರ ಪೊಗದಿಯಾಗಿ ಕೊಡಬೇಕು.

(೩) ಪೇಶ್ವೇ ಪಟ್ಟದ ಸಂಬಂಧದಿಂದ ಹೈದರನು ರಘುನಾಥ ರಾಯನಿಗೆ ಸಹಾಯಮಾಡಬೇಕು.

ಈಮೇರೆಗೆ ಒಪ್ಪಂದವಾದ ಬಳಿಕ ರಘುನಾಥರಾಯನು ಪುಣೆಗೆ ತಿರುಗಿಹೋದ್ದರಿಂದ, ಹೈದರನು ಮತ್ತೆ ಹೆರೆಯುಚ್ಚಿದ ಹಾವಿನಂತಾದನು. ಅವನು ಕೊಡಗಿನಲ್ಲಿದ್ದ ಬಂಡಾಯವನ್ನು ಮುರಿದು ಬಳ್ಳಾರಿಗೆ ಹೋಗಿ ಅದನ್ನು ಮುತ್ತಿದ್ದ ನಿಜಾಮನ ದಂಡನ್ನು ಓಡಿಸಿ, ಅದನ್ನು ಹಿಡಿದುಕೊಂಡು ಬಳಿಕ ಗುತ್ತಿಯನ್ನು ಸ್ವಾಧೀನಮಾಡಿಕೊಂಡನು. ಅಷ್ಟರಲ್ಲಿ ರಘುನಾಥರಾಯನು ಇಂಗ್ಲಿಷರ ಸಹಾಯವನ್ನು ಪಡೆದು, ಕೃಷ್ಣಾನದಿಯ ವರೆಗೆ ಎಲ್ಲ ಸೀಮೆಯನ್ನು ಹಿಡಿದುಕೊಳ್ಳಲಿಕ್ಕೆ ಹೈದರನಿಗೆ ಬರೆದನು. ಕೂಡಲೆ ಹೈದರನು ತನ್ನ

ದಂಡನ್ನು ಕಳುಹಿ ಸವಣೂರ ಮುಂತಾದ ಪ್ರಾಂತಗಳನ್ನು ಹಿಡಿದು ಕೊಂಡನು*.

ಹೈದರನ ಈಹಾವಳಿಯ ಸುದ್ದಿಯು ಪುಣೆಗೆ ಬಂದ ಕೂಡಲೆ, ಆಕಾಲಕ್ಕೆ ಪೇಶ್ವೇರಾಜ್ಯದ ಮುಖ್ಯಾಧಿಕಾರಿಯಾದ ನಾನಾ ಫಡನವೀಸನು ಭಗೀರಥ-ಪ್ರಯತ್ನಮಾಡಿ, ದೊಡ್ಡ ದಂಡನ್ನು ಕೂಡಿಸಿ **ಪರಶುರಾಮ ಭಾವು ಪಟವರ್ಧನನೆಂಬ** ದಳವಾಯಿಯನ್ನು ಮೈಸೂರನ್ನೊಳನುಗ್ಗಲಿಕ್ಕೆ ಕಳುಹಿದ್ದಲ್ಲದೆ, ನಿಜಾಮನನ್ನು ತನ್ನ ಕಡೆಗೆ ಮಾಡಿಕೊಂಡು ಅವನದೊಂದು ದಂಡನ್ನು ಮೈಸೂರ ಮೇಲೆ ಕಳುಹಿದನು. ಆದರೆ ಹೈದರನ ದಳವಾಯಿಯಾದ **ಮುಹಮ್ಮದ ಅಲ್ಲಿ**ಯೆಂಬವನು ಪೇಶ್ವೇನ ದಂಡಿನ ಚೂಣಿಯನ್ನು ಪೂರ್ಣವಾಗಿ ಸೋಲಿಸಿದ್ದರಿಂದ, ಪರಶುರಾಮ ಭಾವುವಿಗೆ ಕೃಷ್ಣಾನದಿಯನ್ನು ದಾಟಲಿಕ್ಕೆ ಧೈರ್ಯವಾಗಲಿಲ್ಲ; ಮತ್ತು ನಿಜಾಮನ ದಂಡು ಆದವಾನಿಯವರೆಗೆ ಬಂದು ಅಲ್ಲಿಂದಲೇ ತಿರುಗಿ ಹೋಯಿತು.

ಈಪ್ರಕಾರ ಪೇಶ್ವೇನ ಭಯವು ಕೆಲಮಟ್ಟಿಗೆ ದೂರವಾದ ಬಳಿಕ ಹೈದರನು ಚಿತ್ರಗಲ್ದುರ್ಗವನ್ನು ಮುತ್ತಿದನು. ಅಲ್ಲಿಯ ಪಾಳಯಗಾರನಾದ **ಮದಕೇರಿನಾಯಕನು** ಪೇಶ್ವೇನೊಡನೆ ನಡೆದ ಯುದ್ಧದಲ್ಲಿ ತನಗೆ ನೆರವಾಗಲಿಲ್ಲೆಂಬದೇ ಈಮುತ್ತಿಗೆಯ ಕಾರಣವು. ಆನಾಯಕನು ಎಷ್ಟು ಹೇಳಿಕೊಂಡರೂ ಹೈದರನು ಕೇಳಲಿಲ್ಲ. ಕಟ್ಟಕಡೆಗೆ ಪೇಶ್ವೇನ ದಂಡು ತೆಗೆದುಕೊಂಡು **ಹರಿಪಂತ ಫಡಕೆ**ಯೆಂಬವನು ತುಂಗಭದ್ರಾನದಿಯನ್ನು ದಾಟಿ ಬರುತ್ತಾನೆಂದು

* ಹೈದರನು ಉತ್ತರ-ಕರ್ಣಾಟಕದ ರಾಜಧಾನಿಯಾದ ಧಾರವಾಡವನ್ನು ಬಹಳ ಯುಕ್ತಿಯಿಂದ ಹಿಡಿದುಕೊಂಡನು. ಅವನು ಪೇಶ್ವೇನ ದಂಡು ಸಹಾಯಕ್ಕೆ ಬರುವದೆಂದು ಒಂದು ಸುಳ್ಳು ಕಾಗದ ಬರೆಯಿಸಿ, ಅದು ಧಾರವಾಡದ ಕೋಟೆಯ ಮುಖ್ಯಸ್ಥನಿಗೆ ಮುಟ್ಟುವಂತೆ ಮಾಡಿ, ತನ್ನ ದಂಡಿನವರಲ್ಲಿ ಕೆಲವರಿಗೆ ಆರೆಯರ ವೇಷ ಹಾಕಿಸಿ, ಕೋಟೆಯ ಕಾವಲುಗಾರರು ಅವರನ್ನು ಒಳಗೆ ಬರಗೊಟ್ಟ ಕೂಡಲೆ ಶ್ರಮವಿಲ್ಲದೆ ಆ ಕೋಟೆಯನ್ನು ಹಿಡಿದುಕೊಂಡನು.

ಸುದ್ದಿ ಬಂದುದರಿಂದ, ಹೈದರನು ಮದಕೇರಿನಾಯಕನಿಂದ ೧೩ ಲಕ್ಷ ರೂಪಾಯಿ ಕಪ್ಪತೆಗೆದುಕೊಂಡು, ಹರಿಪಂತನಿಗಿದುರಾಗಲಿಕ್ಕೆ ಹೊರಟನು. ಅವನು ಹರಿಪಂತನ ದಂಡಿನಲ್ಲಿದ್ದ **ಮಾನಾಜಿ ಪಾಂಕ್ರಿಯಾ**ಯೆಂಬವನನ್ನು ಒಡಕೊಂಡು, **ರಾರವಿ**ಯೆಂಬಲ್ಲಿ ಹರಿಪಂತನನ್ನು ಸೋಲಿಸಿ ಹಿಂದಕ್ಕಟ್ಟಿದನು.

ಈಗೆಲವಿನಿಂದ ಪಾಳಯಗಾರರನ್ನು ದಂಡಿಸಲಿಕ್ಕೆ ಹೈದರನಿಗೆ ತುಸು ಅವಕಾಶ ದೊರೆಯಿತು. ಆದ್ದರಿಂದ ಅವನು **ಮಿರಸಾಬಿ**ಯೆಂಬ ತನ್ನ ಬೀಗನನ್ನು ಕಡಪೆಯ ನವಾಬನನ್ನು ದಂಡಿಸಲಿಕ್ಕೆ ಕಳುಹಿ, ತಾನು ಮತ್ತೆ ಚಿತ್ರಗಲ್ಲುದುರ್ಗವನ್ನು ಮುತ್ತಿದನು. ಮದಕೇರಿನಾಯಕನು ಎಷ್ಟು ಹೋರಾಡಿದರೂ ಅವನಿಂದ ತನ್ನ ಕೋಟೆಯನ್ನು ಕಾಪಾಡಲಿಕ್ಕಾಗಲಿಲ್ಲ. ಕೊನೆಗೆ ಹೈದರನು ಅವನನ್ನು ಸೆರೆಹಿಡಿದು ಶ್ರೀರಂಗಪಟ್ಟಣಕ್ಕೆ ಕಳುಹಿ, ಚಿತ್ರಗಲ್ಲುದುರ್ಗವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು (೧೭೭೯).

ಅತ್ತ ಕಡಪೆಯ ನವಾಬನ ಕಯ್ಕೆಳಗಿನ ಶೂರ ಅಫಗಾಣರು ಹೈದರನ ದಳವಾಯಿಯಾದ **ಮಿರಸಾಬಿ**ಯ ಆಟವನ್ನು ನಡೆಯಗೊಡಲಿಲ್ಲ. ಹೈದರನು ಚಿತ್ರಗಲ್ಲುದುರ್ಗವನ್ನು ಹಿಡಿದುಕೊಂಡ ಕೂಡಲೆ ತಾನೇ ಅಲ್ಲಿಗೆ ಹೋಗಿ, ಅಫಗಾಣರನ್ನು ಮುತ್ತಿ, ಶರಣು ಬರಮಾಡಿ ಹೊಣೆಕೊಟ್ಟು ಹೈದರನ ಸ್ವಾಮಿತ್ವಕ್ಕೆ ಒಡಂಬಟ್ಟವರನ್ನು ತನ್ನ ಊಳಿಗಕ್ಕಿಟ್ಟುಕೊಂಡನು. ಅವರೊಳಗೆ ೮೦ ಜನರಿಗೆಯಾರೂ ಹೊಣೆಗಾರರಾಗಲಿಲ್ಲ. ಆದ್ದರಿಂದ ಹೈದರನು ಅವರನ್ನು ಸೆರೆಯಲ್ಲಿಟ್ಟನು. ಈ ಅಫಗಾಣರು ಸುಮ್ಮನಿರುವವರೇ? ಅವರು ಇರುಳಿನಲ್ಲೆದ್ದು, ಕಾವಲುಗಾರರನ್ನು ಕೊಂದು, ಹೈದರನ ಡೇರೆಯನ್ನು ಹೊಕ್ಕರು. ಸುದೈವದಿಂದ ಹೈದರನು ಅವರ ಗದ್ದಲಕ್ಕೆ ಎಚ್ಚತ್ತು, ತನ್ನ ಹಾಸಿಗೆಯ ಮೇಲೆ ತಲೆಗಿಂಬನ್ನಿಟ್ಟು, ಅದಕ್ಕೆ ಹೊಚ್ಚಿ, ತಾನು ಡೇರೆಯಿಂದೋಡಿ ಹೋಗಿ, ತನ್ನ ಜನರನ್ನೆಬ್ಬಿಸಿ, ಬಂಡುಗಾರರನ್ನು ಹಿಡಿಸಿ, ಕ್ರೂರತನದಿಂದ ಕೊಲ್ಲಿಸಿಬಿಟ್ಟನು. ಬಳಿಕ ಹೈದರನು ಕಡಪೆಯ ನವಾಬನನ್ನು ಸೆರೆಹಿಡಿದು, ಶ್ರೀರಂಗಪಟ್ಟಣಕ್ಕೆ ಕಳುಹಿ, ಅವನ

ತಂಗಿಯನ್ನು ಮದುವೆಮಾಡಿಕೊಂಡು, ಆಕೆಗೆ **ಬಕ್ಷಿಬೇಗಮ್ಮೆಂಬ** ಬಿರುದನ್ನು ಕೊಟ್ಟನು.

ಕಡಪೆಯ ನವಾಬನು ಪಾದಾಕ್ರಾಂತನಾದ ಬಳಿಕ ಹೈದರನು ತನ್ನ ವರ್ಚಸ್ಸನ್ನು ಬೆಳಿಸಿಕೊಳ್ಳಲಿಕ್ಕೆ ಸವಣೂರ ನವಾಬನಾದ **ಅಬ್ದುಲ್ ಹಕೀಮ**ನೊಡನೆ ಶರೀರಸಂಬಂಧವನ್ನು ಮಾಡಲೆಳಸಿ, ಅವನ ಮಗಳನ್ನು ತನ್ನ ೨ನೆಯ ಮಗನಾದ **ಕರೀಮ**ನಿಗೂ ತನ್ನ ಮಗಳನ್ನು ಅವನ ಮಗನಿಗೂ ಕೊಟ್ಟು ಎರಡೂ ಮದುವೆಗಳನ್ನು ಬಹುಸಮಾರಂಭದಿಂದ ಶ್ರೀರಂಗಪಟ್ಟಣದಲ್ಲಿ ಮಾಡಿದನು (೧೭೭೯).

ಇದೇ ಹೈದರನ ಘನತೆಯು ಕಾಲವು. ಈಸಮಯಕ್ಕೆ ಮೈಸೂರ ರಾಜ್ಯವು ತುಂಗಭದ್ರಾತೀರದ ವರೆಗೆ ಹಬ್ಬಿತ್ತು; ಸವಣೂರ ನವಾಬನು ಹೈದರನ ಆಪ್ತನಾಗಿದ್ದನು. ಪರರಾಯರ ಭಯವು ಸದ್ಯಕ್ಕೇನೂ ಇದ್ದಿಲ್ಲ. ದೇಶದಲ್ಲಿ ಶಾಂತತೆ ಹಬ್ಬಿತ್ತು. ಆದ್ದರಿಂದ ಒಳನಾಡಿನ ಏರ್ಪಾಡನ್ನು ಚೆನ್ನಾಗಿ ಮಾಡಿ ಪ್ರಜಾರಂಜನೆಯನ್ನು ಮಾಡಿ, ತಾನು ದೊರಕಿಸಿದ ಪಟ್ಟವನ್ನು ವಂಶಪರಂಪರೆಯಾಗಿ ಇಟ್ಟುಕೊಳ್ಳುವ ಎತ್ತುಗಡೆ ಮಾಡಲಿಕ್ಕೆ ಈಕಾಲವು ಬಹಳ ಅನುಕೂಲವಾಗಿತ್ತು. ಆದರೆ ಹೈದರನು ಈಯುತ್ತಮ ಸಂಧಿಯನ್ನು ಹೋಗಗೊಟ್ಟನು. ಅವನು ಬಲ್ಲಿದ ಬಂಟನೇ ಹೊರತು ಮುತ್ಸದ್ದಿಯಾಗಿರಲಿಲ್ಲ. ಆದ್ದರಿಂದ ಅವನು ಹೆಚ್ಚಿನ ವಿಚಾರವನ್ನೇನೂ ಮಾಡದೆ, ಕಾಣಬರುವ ಜನರಿಂದ ಹಣವನ್ನೆಬ್ಬಿಸುವ ಆಲೋಚನೆನಡಿಸಿದನು. ಈಕೆಲಸದಲ್ಲಿ ಅವನಿಗೆ ಕಂದಾಯದ ಮುಖ್ಯಸ್ಥನಾದ **ಮೀರಸಾದಕ***ನೆಂಬವನೂ ಪೋಲೀಸ ಮುಖ್ಯಸ್ಥನಾದ **ಶಾಮಯ್ಯ**ನೆಂಬವನೂ ಸಹಾಯಕರಾಗಿದ್ದರು. ಇವರು ಇಂಗ್ಲಂಡದ ಅರಸನಾದ ೭ನೆಯ ಹೇನ್ರಿಯ (೧೪೮೫-೧೫೦೭)

---

*ಈಗ ಮೀರಸಾದಕ ಶಬ್ದವನ್ನು ನಾವು ವಂಚಕ ಮನುಷ್ಯನೆಂಬ ಅರ್ಥದಲ್ಲಿ ಉಪಯೋಗಿಸುತ್ತೇವೆ. ಮೀರಸಾದಕನು ಈಕಾಲದಲ್ಲಿ ಜನರನ್ನು ಮೋಸಗೊಳಿಸಿದ್ದರಿಂದ ಈಯರ್ಥವು ಬಂದಿರಬಹುದು.

ಸಹಾಯಕರಾದ ಎಂಪಸನ್-ಡಡ್ಲೆಯೆಂಬವರನ್ನು ಕೆಲವುಟ್ಟಿಗೆ ಹೋಲುತ್ತಿದ್ದರೆನ್ನಬಹುದು. ಇವರೊಳಗೆ ಶಾಮಯ್ಯನೆಂಬವನು ಧನಿಕರ ಮೇಲೆ ಅನ್ಯಾಯದಿಂದ ತಪ್ಪುಹೊರಿಸಿ, ದಂಡ ತೆರಿಸುತ್ತಿದ್ದುದಲ್ಲದೆ ಚೆಲುವೆಯರಾದ ಹೆಂಗಸರನ್ನು ವಿಶ್ವಪ್ರಯತ್ನಮಾಡಿ ಹಿಡತಂದು ಹೈದರನಿಗೆ ಒಪ್ಪಿಸುತ್ತಿದ್ದನು. ಇವನು ಮುಂದೆ ಹೆಸರಾದ ಪೂರ್ಣಯ್ಯನವರಿಗಾದರೂ ದಂಡಕಟ್ಟಿಸಿದನಂತೆ. ಇವನು ಕಾರಕೂನರಿಗೆ ೧೨ ತಿಂಗಳುಗಳ ಸಂಬಳ ಕೊಡದೆ ೧೦ ತಿಂಗಳುಗಳ ಸಂಬಳವನ್ನು ಮಾತ್ರ ಕೊಡುತ್ತಿದ್ದನು, ಮತ್ತು ರಾಹುತರಿಗೆ ತಿಂಗಳ ಸಂಬಳದ ಬದಲು ೨೦ ದಿವಸಗಳ ಸಂಬಳವನ್ನು ಮುಟ್ಟಿಸುತ್ತಿದ್ದನು.

ಈಮೇರೆಗೆ ಹೈದರನು ಪೇಶ್ವೇನೊಡನೆ ಹೂಡಬಹುದಾದ ಯುದ್ಧದ ವೆಚ್ಚಕ್ಕೋಸ್ಕರ ಹಣವನ್ನು ಕೂಡಿಸಿಡುವಷ್ಟರಲ್ಲಿ ನಾನಾ ಫಡನವೀಸನಿಂದ ಗಣೇಶರಾಯನೆಂಬ ಒಬ್ಬ ನಿಯೋಗಿಯು ಬಂದು, ಹೈದರನಿಗೆ ಹೇಳಿದ್ದೇನಂದರೆ:—ಇಂಗ್ಲಿಷರು ರಘುನಾಥರಾಯನ ಪಕ್ಷವನ್ನು ಸ್ವೀಕರಿಸಿರುತ್ತಾರೆ. ಆದ್ದರಿಂದ ತಾವು ಪೆಶ್ವೇ-ನಿಜಾಮರ ಕಟ್ಟನ್ನು ಸೇರಿದರೆ ಮೂರೂ ಜನರು ಕೂಡಿ, ಫಿರಂಗಿಯರನ್ನು ಈದೇಶದಿಂದ ಹೊರಗೆ ಹಾಕಲಿಕ್ಕೆ ಅನುಕೂಲವಾಗುವದು. ಈಕೆಂಪುಮೋತಿಯವರನ್ನು ನಂಬಕೂಡದು. ಇವರು ವ್ಯಾಪಾರದ ನೆವನಮಾಡಿಕೊಂಡು ಇಲ್ಲಿಗೆ ಬಂದು, ನಮ್ಮ ಕಯ್ಯಿಂದಲೆ ನಮ್ಮ ಜನರ ಕುತ್ತಿಗೆಕೊಯಿಸಿ, ರಾಜ್ಯವನ್ನು ಸಂಪಾದಿಸಿ, ತಮ್ಮಂತಹ ಅರಸರನ್ನು ಬಾವುಗವು ಬೆಕ್ಕಿನ ಮರಿಗಳನ್ನು ಅಂಜಿಸಿಕೊಂಡಂತೆ, ಹೆದರಿಸುತ್ತಲಿದ್ದಾರೆ. ಇದು ಎಷ್ಟು ನಾಚಿಕೆಯ ಮಾತು!! ನಮ್ಮೊಳಗೇ ನಾವು ಬಡಿದಾಡಿ ಈಪರದೇಶೀಯರಿಗೆ ಲಾಭಮಾಡಿಕೊಡುವುದು ಎಷ್ಟು ದಡ್ಡತನವು? ಪೇಶ್ವೇನ ರಾಜ್ಯವನ್ನು ತಿನ್ನಲಿಕ್ಕೆ ತಾವು ಬಾಧ್ಯಸ್ಥರು, ತಮ್ಮ ರಾಜ್ಯವನ್ನು ಉಣ್ಣಲಿಕ್ಕೆ ಪೇಶ್ವೇನು ಬಾಧ್ಯಸ್ಥನಾಗಬಹುದು. ಆದರೆ ಈಕೆಂದಮೋತಿಯವರಿಗೆ ರಘುನಾಥರಾಯನು ರಾಜ್ಯಕೊಡಲೊಪ್ಪಿದ್ದು

ಸರಿಯೇ? ಛೀ, ಛೀ, ಅದು ಎಂದೂ ಸರಿಯಾಗಲಾರದು. ರಘು ನಾಥರಾಯನು ತಮಗೆ ತುಂಗಭದ್ರಾ-ತೀರದ ವರೆಗೆ ರಾಜ್ಯವನ್ನು ಕೊಟ್ಟುದರ ಬಗ್ಗೆ ಪೇಶ್ವೇ ತುಸುವಾದರೂ ದುಃಖಿಸುವದಿಲ್ಲ. ಆದರೆ ಈಫಿರಂಗಿಯರಿಗೆ ಗೋಪಾದದಷ್ಟು ಭೂಮಿಯನ್ನು ಕೊಡಲಿಕ್ಕೆ ಅವನ ಮನಸ್ಸು ಹೇಸುತ್ತದೆ. ಪ್ರಾಣಹೋದರೂ ಚಿಂತೆಯಿಲ್ಲ, ಇಂಗ್ಲಿಷರಿಗೆ ಒಂದು ಬೊಟ್ಟಿನಷ್ಟಾದರೂ ಭೂಮಿಯನ್ನು ಕೊಡ ಗೊಡಲಿಕ್ಕಿಲ್ಲೆಂದು ಪೇಶ್ವೇನ ಪಂಥವಿರುತ್ತದೆ. ಈಪಂಥವನ್ನು ಕಡೆಗಾಣಿಸುವ ಭಾರವು ತಮ್ಮದೇ ಇರುತ್ತದೆ. ತಾವು ಪೇಶ್ವೇನಿಗೆ ನೆರವಾಗಲೊಡಂಬಟ್ಟರೆ ತಮ್ಮ ಮತ್ತು ನಿಜಾಮನ ಸಹಾಯದಿಂದ ಈಶ್ವೇತದ್ವೀಪಸ್ಥರ ಸರಕುಕಟ್ಟಿ, ಇವರನ್ನು ಈಭಾರತಭೂಮಿಯಿಂ ದ ಓಡಿಸುವ ಎತ್ತುಗಡೆಯನ್ನು ಮಾಡಲಿಕ್ಕೆ ಪೇಶ್ವೇನು ಭಗೀ ರಥ-ಪ್ರಯತ್ನವನ್ನು ಮಾಡುವವನಿದ್ದಾನೆ. ಆದ್ದರಿಂದ ತಾವು ಬಹುದಿವಸದಿಂದ ಎರಡೂ ರಾಜ್ಯಗಳ ನಡುವಿದ್ದ ಋಣಾನು ಬಂಧವನ್ನು ಮರೆಯದೆ, ದೇಶಾಭಿಮಾನವನ್ನು ಹಿಡಿದು, ಈವಂಚಕ ರಾದ ಫಿರಂಗಿಯರ ಪಾರಪತ್ಯಮಾಡಲಿಕ್ಕೆ ಟೊಂಕಕಟ್ಟಬೇಕೆಂದು ಪೇಶ್ವೇನ ಬಿನ್ನಹವಿದೆ.

ಈಸ್ವಾರ್ಥಸಾಧಕಮಾತಿಗೆ ಹೈದರನು ಮರುಳಾದನು. ಇಂ ಗ್ಲಿಷರನ್ನು ಈದೇಶದಿಂದ ಹೊರಡಿಸುವ ವಿಚಾರವು ಪೇಶ್ವೆ-ನಿಜಾ ಮರ ಮನಸ್ಸಿನಲ್ಲಿ ನಿಶ್ಚಯವಾಗಿ ಬಂದಿರಬಹುದೆಂದು ಅವನಿಗೆ ತೋರಿತು. ಪೇಶ್ವೇನೂ ನಿಜಾಮನೂ ತಮ್ಮ ಸ್ವಾರ್ಥದ ಬಗ್ಗೆ ಇಂಗ್ಲಿಷರೊಡನೆ ಯುದ್ಧಹೂಡಿರುತ್ತಾರೆಂಬ ,ವಿಚಾರವು ಅವನ ಮನಸ್ಸಿನಲ್ಲಿ ಬರಲಿಲ್ಲ. ೧೭೭೯ರಲ್ಲಿ ಆದ ಒಪ್ಪಂದದ ಶರ್ತಿನಂತೆ ಪೇಶ್ವೇನು ಮೈಸೂರನ್ನೊಳನುಗ್ಗಿದಾಗ, ಇಂಗ್ಲಿಷರು ತನಗೆ ನೆರವಾ ಗದ್ದರಿಂದ ಅವರು ನಂಬಿಗಸ್ಥರಲ್ಲೆಂದು ಅವನು ಈಮೊದಲೇ ಮನ ಗಂಡಿದ್ದನು. ಇದಲ್ಲದೆ ಇಂಗ್ಲಿಷರು ಹೈದರನ ಅನುಮತಿಯಿಲ್ಲದೆ ಒಮ್ಮೆ ತಮ್ಮ ದಂಡನ್ನು ಮೈಸೂರಿಗೆ ಸೇರಿದ ಕಡಪೆ-ಕರ್ನೂಲ ಗಳ ದಾರಿಯಿಂದ ಕಳುಹಿದ್ದರು. ಆರ್ಕಾಟದ ನವಾಬನಾದ ಮಹ

ಮ್ಮದ ಅಲ್ಲಿಯು ಇಂಗ್ಲಿಷರಿಗೆ ಇಷ್ಟಮಿತ್ರನಿದ್ದಂತೆ ಹೈದರನಿಗೆ ಕಡುಹಗೆಯಾಗಿದ್ದನು. ಅವನ ಪ್ರೇರಣೆಯಿಂದ ಮದ್ರಾಸ ಸರಕಾರದವರು ಹೈದರನಿಗೆ ವಿರುದ್ಧವಾದ ಆಲೋಚನೆಗಳನ್ನು ಮಾಡಲಾರಂಭಿಸಿದರು; ಮತ್ತು ಬ್ರಿಟಿಶ್ ಸರಕಾರದ ವಕೀಲನಾಗಿ ಮಹಮ್ಮದ ಅಲ್ಲಿಯ ಕಡೆಗೆ ಬಂದ ಜಾನ ಲಿಂಡಸೆ ದೊರೆಯು ಹೈದರನನ್ನು ಮುರಿಯಬೇಕೆಂದು ಮದ್ರಾಸ ಸರಕಾರಕ್ಕೆ ಆಗ್ರಹಪೂರ್ವಕವಾಗಿ ಸೂಚಿಸಿದ್ದನು. ೧೭೭೯ರಲ್ಲಿ ಇಂಗ್ಲಿಷರು ಫ್ರೆಂಚರಿಗೆ ಸೇರಿದ ಮಾಹಿಯೆಂಬ ಬಂದರವನ್ನು ಹಿಡಿದುಕೊಂಡರು. ಅದು ತನ್ನ ಆಶ್ರಿತಬಂದರವೆಂದು ಹೈದರನು ಎಷ್ಟು ಹೇಳಿದರೂ ಅವರು ಲಕ್ಷ್ಯಕೊಡಲಿಲ್ಲ. ಈಮುಂತಾದ ಕಾರಣಗಳಿಂದ ಹೈದರನು ಪೇಶ್ವೇ-ನಿಜಾಮರು ಮಾಡಿದ ಕಟ್ಟನ್ನು ಸೇರಲಿಕ್ಕೆ ಮನಸ್ಸುಮಾಡಿದನು.

ಈಕಾಲಕ್ಕೆ ಇಂಗ್ಲಿಷರು ಸ್ವಾರ್ಟ್ಸನೆಂಬ ಒಬ್ಬ ಪಾದ್ರಿಯನ್ನು ಹೈದರನೊಡನೆ ಒಪ್ಪಂದಮಾಡಲಿಕ್ಕೆ ಕಳುಹಿದರು. ಆಗ ಹೈದರನು ಅವನ ಮುಂದೆ ಮಹಮ್ಮದ ಅಲ್ಲಿಯ ಕೃತ್ರಿಮವನ್ನೂ ಇಂಗ್ಲಿಷರು ತನಗೆ ಮಾಡಿದ ಅಪಕಾರದ್ರೋಹಗಳನ್ನೂ ಸ್ಪಷ್ಟವಾಗಿ ವಿವರಿಸಿ, ಅವರು ತನಗಾದ ಹಾನಿಯನ್ನು ತುಂಬಿಕೊಟ್ಟು, ಮುಂದೆ ಅಕೃತ್ರಿಮಬುದ್ಧಿಯಿಂದ ನಡೆಯುವಂತಿದ್ದರೆ ತಾನು ಸಂತೋಷದಿಂದ ಅವರೊಡನೆ ಸ್ನೇಹವನ್ನು ಬೆಳಿಸುವೆನೆಂದು ಹೇಳಿಕಳುಹಿದನು. ಇಂಗ್ಲಿಷರು ಮಹಮ್ಮದ ಅಲ್ಲಿಯ ಮಾತು ಕೇಳಿ, ಹೈದರನ ಮಾತಿಗೆ ಕಿವಿಗೊಡದ್ದರಿಂದ, ಒಪ್ಪಂದದ ವಿಚಾರವು ಅಷ್ಟಕ್ಕೇ ಉಳಿಯಿತು*. ಮುಂದೆ ತುಸುದಿವಸದಲ್ಲೇ ಇಂಗ್ಲಿಷರು ಮತ್ತೊಬ್ಬ ನಿಯೋಗಿಯನ್ನು ಶ್ರೀರಂಗಪಟ್ಟಣಕ್ಕೆ ಕಳುಹಿದರು. ಆಗ ಒಪ್ಪಂ

---

* ಮೊದಲಿನಿಂದ ಹೈದರನು ಇಂಗ್ಲಿಷರ ಸ್ನೇಹವನ್ನು ಮನಃಪೂರ್ವಕವಾಗಿ ಬಯಸುತ್ತಿದ್ದನು. ಅವನು ಸತ್ತ ಬಳಿಕ ಅವನ ರುಮಾಲಿನ ಚುಂಗಿನಲ್ಲಿದ್ದ ಒಂದು ಚೀಟಿಯಲ್ಲಿ ಬರೆದುದೇನಂದರೆ:—ನನ್ನ ಮಗನಾದ ಟೀಪುವೇ, ನೀನು ಇಂಗ್ಲಿಷರೊಡನೆ ಯಾವಾಗಲೂ ಸ್ನೇಹವನ್ನು ಬೆಳಿಸು, ಅವರ ಗೆಳೆತನದಿಂದ ನಿನಗೆ ಆಗುವಷ್ಟು ಲಾಭಗಳು ಅವರ ಹಗೆತನದಿಂದ ನಿನಗೆಂದೂ ಆಗಲಾರವು.

ದದ ಹಂಗಾಮವು ಮೀರಿಹೋದ್ದರಿಂದ ಹೈದರನು ಇಂಗ್ಲಿಷರನ್ನು ವಂಚಕತನದ ಬಗ್ಗೆ ದೂಷಿಸಿ, ಆನಿಯೋಗಿಯನ್ನು ಸುರಕ್ಷಿತವಾಗಿ ತಿರುಗಿ ಕಳಿಸಿಕೊಟ್ಟನು.

ಜುಲೈ ೧೭೮೦ರಲ್ಲಿ ಈಯುದ್ಧವು ಆರಂಭವಾಯಿತು. ಇದಕ್ಕೆ ಮೈಸೂರ ೨ನೆಯ ಯುದ್ಧವೆನ್ನುವದಕ್ಕಿಂತ ಪೇಶ್ವೆ-ನಿಜಾಮು-ಮೈಸೂರ ಅರಸರು ಇಂಗ್ಲಿಷರೊಡನೆ ಹೂಡಿದ ಯುದ್ಧವೆನ್ನುವದು ಹೆಚ್ಚು ಸರಿಯಾಗುವದು. ಏಕಂದರೆ ಪೇಶ್ವೇನು ವರ್‍ಹಾಡ-ಮಧ್ಯ ಹಿಂದುಸ್ಥಾನಗಳನ್ನೂ ನಿಜಾಮನು ಉತ್ತರಸರಕಾರವನ್ನೂ ಹೈದರನು ಮದ್ರಾಸ ಇಲಾಖೆಯನ್ನೂ ಒಳನುಗ್ಗಬೇಕೆಂದು ಅವರೊಳಗೆ ಗೊತ್ತಾಗಿತ್ತು. ಆದರೆ ಈಚರಿತ್ರದಲ್ಲಿ ಪೇಶ್ವೇ-ನಿಜಾಮರ ಯುದ್ಧಕ್ರಮವನ್ನು ವಿವರಿಸುವುದು ಅಪ್ರಾಸಂಗಿಕವಾಗಬಹುದಾದ್ದರಿಂದ, ಹೈದರನು ಮದ್ರಾಸ ಸರಕಾರದೊಡನೆ ನಡಿಸಿದ ಯುದ್ಧವನ್ನು ಮಾತ್ರ ವಿಶೇಷವಾಗಿ ವಿವರಿಸುವೆವು.

ಈಕಾಲಕ್ಕೆ ಹೈದರನು ೮೩,೦೦೦ ದಂಡನ್ನು ಬೆಂಗಳೂರಲ್ಲಿ ಕೂಡಿಸಿದ್ದನು. ಈದಂಡಿನಲ್ಲಿ ೧೪,೦೦೦ ಸ್ವಾರರೂ ೧೨,೦೦೦ ಸಿಲ್ಲೇದಾರರೂ ೧೫,೦೦೦ ಕಾಲಾಳುಗಳೂ ೧೨,೦೦೦ ಮಂದಿ ಸವಣೂರವರೂ ೪೦,೦೦೦ ಸಿಪಾಯರೂ ಇದ್ದರು. ಅವನು ಒಮ್ಮಿಂದೊಮ್ಮೆ ಮದ್ರಾಸ ಸರಕಾರದವರ ಸೀಮೆಯನ್ನೊಳನುಗ್ಗಿ, ಮದ್ರಾಸದಿಂದ ೯ ಮೈಲುಗಳ ಮೇಲಿರುವ **ಸೆಂಟಥಾಮಸ್** ಮರಡಿಯ ವರೆಗೆ ಹಳ್ಳಿಗಳನ್ನು ಸುಟ್ಟು ಸೂರೆಮಾಡಿ, ಬಾರಾಮಹಾಲಗಳ ದಾರಿಯಿಂದ ಸಂಗಮದ ಕಣವಿಗೆ ಬಂದು, ಅಲ್ಲಿ ತನ್ನ ಮಗನಾದ **ಕರೀಮನನ್ನು** **ಪೋರ್ಟೋನೊವ್ಹೋದ** ಕೋಟೆಯನ್ನು ತೆಗೆದುಕೊಳ್ಳಲಿಕ್ಕೆ ಕಳುಹಿ ತಾನು ಆರ್ಕಾಟವನ್ನು ಮುತ್ತಿದನು. ಮುಂದೆ ತುಸುದಿವಸದಲ್ಲೇ ಮದ್ರಾಸದ ಮುಖ್ಯ ದಳವಾಯಿಯಾದ **ಹೇಕ್ಟರ ಮನ್ರೋ** ದೊರೆಯು **ಕಂಚಿಯಲ್ಲಿ** ತನಗೆ ನೆರವಾಗಲಿಕ್ಕೆ ಬರುವ ದಂಡುಗಳ ಹಾದಿನೋಡುತ್ತಾನೆಂಬ ಸುದ್ದಿಯನ್ನು ಕೇಳಿ, ಆರ್ಕಾಟದ ಮುತ್ತಿಗೆಯನ್ನೆಬ್ಬಿಸಿ, ಕಂಚಿಯ ನೆರೆಯಲ್ಲಿ ಪಾಳೆಯಹಾಕಿ, ತನ್ನ ಮಗ

ನಾದ ಟೀಪುವನ್ನು ಗುಂಟೂರಿಂದ ಬರುತ್ತಿದ್ದ ಕರ್ನಲ್ **ಬೇಲಿಯ**ನ್ನು ತಡೆಯಲಿಕ್ಕೆ ಕಳುಹಿದನು. ಟೀಪುವು ಎಷ್ಟು ಪ್ರಯತ್ನಮಾಡಿದರೂ ಬೇಲಿಯು ಅವನಿಗೆ ಆಸಕೊಳ್ಳಲಿಲ್ಲ. ಈಸುದ್ದಿಯನ್ನು ಕೇಳಿ, ಮನ್ರೊದೊರೆಯು ಕರ್ನಲ್ ಫ್ಲೆಚ್ಚರನೆಂಬವನೊಡನೆ ೧,೦೦೦ ದಂಡನ್ನು ಬೇಲಿಯ ಸಹಾಯಕ್ಕೆ ಕಳುಹಿದನು. ಈದಂಡು ಬೇಲಿಯನ್ನು ಸುರಕ್ಷಿತವಾಗಿ ಕೂಡಿತು. ಆದರೆ ಮುಂದೆ ಒಂದೆರಡು ದಿವಸದಲ್ಲೇ ಹೈದರನೂ ಟೀಪುವೂ ಬೇರೆ ಬೇರೆ ದಿಕ್ಕಿನಿಂದ ಒಮ್ಮೆಲೆ ಬಂದು, **ಪೊಲಿಲೂರೆಂಬಲ್ಲಿ** ಇಂಗ್ಲಿಷರ ದಂಡಿನ ಮೇಲೆ ಬಿದ್ದರು (೧೦ ಸಪಟಂಬರ). ಆದಿವಸ ಬಹುಭಯಂಕರವಾದ ಕಾಳಗವೆಸಗಿತು. ಒಟ್ಟು ೧೩ ಸಾರೆ ಮೈಸೂರವರು ಇಂಗ್ಲಿಷರ ಮೇಲೆ ಸಾಗಿ ಹೋದರು ಮತ್ತು ಅಷ್ಟುಸಾರೆ ಇಂಗ್ಲಿಷರು ಅವರನ್ನು ಹಿಂದಕ್ಕಟ್ಟಿದರು. ಹೈದರನು ಇದನ್ನು ನೋಡಿ ಕೆಲಮಟ್ಟಿಗೆ ನಿರಾಶನಾದನಂತೆ. ಕಡೆಗೆ ಅವನು ತನಗೆ ನೆರವಾಗಲಿಕ್ಕೆ ಬಂದ **ಲಾಲಿಯೆಂಬ** ಫ್ರೆಂಚದಳವಾಯಿಯ ಪ್ರೋತ್ಸಾಹದಿಂದ ಮತ್ತೆ ಪ್ರಯತ್ನಮಾಡಲು, ಇಂಗ್ಲಿಷರು ಎದೆಗೆಟ್ಟರು, ದಂಡಾಳುಗಳು ಕಾಲುದೆಗೆದರು, ಮತ್ತು ಬೇಲಿಯೂ ಅವನ ದಂಡಿನವರೂ ಶಸ್ತ್ರಗಳನ್ನು ಕೆಳಗಿಟ್ಟು ಶರಣು ಬಂದರು. ಈಕಾಳಗದಲ್ಲಿ ೫,೦೦೦ ಸಿಪಾಯರೂ ೭೦೦ ಯುರೋಪಿಯರೂ ಸತ್ತರೆಂತಲೂ ೨,೦೦೦ ಮಂದಿ ಇಂಗ್ಲಿಷರು ಸೆರೆಸಿಕ್ಕರೆಂತಲೂ ಫ್ರೆಂಚರು ಬರೆದಿಟ್ಟಿದ್ದಾರೆ.* ಈಕಾಳಗವು ಮುಗಿದ ಬಳಿಕ ಹೈದರನು ಸಂತೋಷಬಟ್ಟು ತನ್ನ ದಂಡಿನವರಿಗೆಲ್ಲ ಇನಾಮುಗಳನ್ನು ಹಂಚಿ, ಅಲ್ಲಿಂದ ಹೊರಟು ಅರ್ಕಾಟವನ್ನು ಮುತ್ತಿ, ಅದನ್ನು ಹಿಡಿದುಕೊಂಡನು. ಬಳಿಕ ಅವನು **ಅಂಬೂರು**, **ಚಿಂಗಲ್ಪೇಟ**, **ಕರಂಗುಲಿ** ಮುಂತಾದ ಕೋಟೆಗಳನ್ನು ಮುತ್ತಿದನು.

ಆದರೆ ಹೈದರನ ಈಸುದೈವವು ಬಹಳ ದಿವಸ ಉಳಿಯಲಿಲ್ಲ.

---

*ಈಕಾಳಗದ ಚಿತ್ರಗಳು ಶ್ರೀರಂಗಪಟ್ಟಣದಲ್ಲಿರುವ ದರಿಯಾದೌಲತ್ತೆಂಬ ಅರಮನೆಯ ಗೋಡೆಯ ಮೇಲೆ ಬರೆಯಲ್ಪಟ್ಟಿವೆ. ಅವುಗಳನ್ನು ಈಗಲೂ ನೋಡಬಹುದು.

ಈಯುದ್ಧದ ಸುದ್ದಿಯು ಕಲಕತ್ತೆಗೆ ಮುಟ್ಟಿದ ಕೂಡಲೆ ಆಕಾಲಕ್ಕೆ ಸರ್ವಾಧಿಪತಿಯಾದ **ವಾರೆನ್ ಹೇಸ್ಟಿಂಗ್ಸನು** ವಿಶ್ವಪ್ರಯತ್ನಮಾಡಿ ದೊಡ್ಡ ದಂಡನ್ನು ಕೂಡಿಸಿ, ಅನುಭವವುಳ್ಳ ೬೦ ವರುಷದ ಮುದುಕನಾದ **ಆಯರಕೂಟ** ದೊರೆಯೆಂಬ ದಳವಾಯಿಯನ್ನು ಹೈದರನ ವಿರುದ್ಧವಾಗಿ ಕಳುಹಿದನು. ಮೇಲೆ ಹೇಳಿದ ಕೋಟೆಗಳನ್ನು ಹೈದರನು ಮುತ್ತಿದಾಗ, ಅವನು ಯುದ್ಧರಂಗಕ್ಕೆ ಬಂದು ತಲಪಿದನು. ಕೂಡಲೆ ಹೈದರನು **ವಂಡಿವಾಸ ಪೆರಂಬಕಾಯಿಲ** ಮುಂತಾದ ಕೋಟೆಗಳ ಮುತ್ತಿಗೆಯನ್ನೆಬ್ಬಿಸಿ, ಕೂಟನ ದಂಡಿಗೆ ಅನ್ನ ಸಾಮುಗ್ರಿ ದೊರೆಯದಂತೆ ಯತ್ನಮಾಡಲಾರಂಭಿಸಿದನು. ಆದ್ದರಿಂದ ಕೂಟನು ಪುದುಚೇರಿಯ ಕಡೆಗೆ ಹೋಗಿ, ಅಲ್ಲಿ ಸಾಮುಗ್ರಿಯು ದೊರೆಯದ್ದರಿಂದ ಕಡಲೂರಿಗೆ ಹೋಗಿ, ಅಲ್ಲಿಯಾದರೂ ಸಾಮುಗ್ರಿಯ ಕೊರತೆಯ ಮೂಲಕವಾಗಿ ೪ ತಿಂಗಳು ಸುಮ್ಮನೇ ಕುಳಿತನು. ಬಳಿಕ ತುಸುದಿವಸದಲ್ಲೇ ಒಂದು ಸಾಮುಗ್ರಿಯ ಹಡಗು ಮದ್ರಾಸದಿಂದ ಬಂದುದರಿಂದ ಕೂಟನಿಗೆ ಧೈರ್ಯ ಬಂತು. ಆದ್ದರಿಂದ ಅವನು ಪೋರ್ಟನೊವೋದ ಬಳಿಯಲ್ಲಿ ಚಿದಂಬರಮ್ಮದ ಕೋಟೆಯನ್ನು ಮುತ್ತಿದನು. ಆಗ ಹೈದರನು ೨ ದಿವಸಗಳಲ್ಲಿ ೧೦೦ ಮೈಲು ನಡೆದು ಬಂದು, ಚಿದಂಬರಮ್-ಕಡಲೂರುಗಳ ನಡುವೆ ಒಂದು ಭದ್ರವಾದ ಸ್ಥಳದಲ್ಲಿ ಪಾಳಯಹಾಕಿಕೊಂಡು ನಿಂತು, ಇಂಗ್ಲಿಷರಿಗೆ ಬೇರೆ ಕಡೆಯಿಂದ ಸಹಾಯ ದೊರೆಯದಂತೆ ವ್ಯವಸ್ಥೆ ಮಾಡಿದನು. ಆದ್ದರಿಂದ ಕೂಟನು ೧ನೆಯ ಜುಲೈ ದಿವಸ ಚಿದಂಬರಮ್ಮದ ಮುತ್ತಿಗೆಯನ್ನೆಬ್ಬಿಸಿ, ಪೋರ್ಟನೊವೋದ ಬಳಿಯಲ್ಲಿದ್ದ ಹೈದರನ ದಂಡನ್ನು ಕೆಣಕಿದನು. ಕೆಲಹೊತ್ತಿನ ವರೆಗೆ ತುಮುಲ ಯುದ್ಧವು ನಡೆಯಿತು. ಕಡೆಗೆ ಕೂಟನ ದಂಡಿನ ತಿದ್ದುವಿಕೆಯು ಹೈದರನನ್ನು ಅಗಾಧಗೊಳಿಸಿದುದಲ್ಲದೆ ಅವನ ದಂಡಿನವರನ್ನು ಹಿಮ್ಮೆಟ್ಟಿಸಿತು. ಹೈದರನು ಕಯ್ಸೆರೆ ಸಿಗುವ ಹೊತ್ತು ಬಂದಿತ್ತು; ಆದರೆ ಅಷ್ಟರಲ್ಲಿ ಅವನ ಒಬ್ಬ ಆಪ್ತಸೇವಕನು ಬಲಾತ್ಕಾರದಿಂದ ಅವನನ್ನು ಕುದುರೆಯ ಮೇಲೆ ಕೂಡ್ರಿಸಿ ಪಾರುಮಾಡಿದನು (೧೭೮೧).

ಈಗೆಲವಿನಿಂದ ಕೂಟನಿಗೆ ಹೆಚ್ಚು ಧೈರ್ಯವು ಬಂತು. ಅವನು ಹೋಗಿ ಪುಲಿಕತ್ತ ಸರೋವರದ ಹಾದಿಯಿಂದ ತನ್ನ ಸಹಾಯಕ್ಕೆ ಬರುತ್ತಿದ್ದ ದಂಡನ್ನು ಕೂಡಿದನು. ಆದ್ದರಿಂದ ಟೀಪುವು ಹೆದರಿ, ವಂಡಿವಾಸದ ಮುತ್ತಿಗೆಯನ್ನೆಬ್ಬಿಸಿದನು. **ತಿರುಪಸುರವು** ಕೂಟನ ಕಯ್ಸೇರಿತು. ಬಳಿಕೆ ಅವನು ಮೈಸೂರ ದಂಡನ್ನು ಅರಸುತ್ತಾ ಹೋಗಿ, ಹಿಂದಿನ ವರ್ಷ ಬೇಲಿಯ ಸೋಲಿನ ಬಗ್ಗೆ ಹೆಸರಾದ **ಪೊಲಿಲೂರೆಂ**ಬಲ್ಲಿ ಮೈಸೂರ ದಂಡಿನ ಮೇಲೆ ಬಿದ್ದನು (೨೭ ಅಗಷ್ಟ). ಇದು ಮೊದಲಿನ ಗೆಲವಿನ ಸ್ಥಳವಾದ್ದರಿಂದ ಹೈದರನು ತನಗೆ ಜಯ ಬರುವುದು ನಿಶ್ಚಯವೆಂದು ತಿಳಿದಿದ್ದನು. ಆದ್ದರಿಂದ ಮೈಸೂರವರು ಬಲುಹುರುಪಿನಿಂದ ಕಾದಿದರು. ಈಕಾರಣದಿಂದ ನಂಬಿಗೆಯೇ ಗೆಲವಿನ ಕುರುಹೆಂಬ ಗಾದೆಯಂತೆ ಮೈಸೂರವರು ಪೂರ್ಣವಾಗಿ ಅಪಜಯಪಡಲಿಲ್ಲ. ಆದಕಾರಣ ಕೂಟನು ಉದಾಸೀನನಾಗಿ, ಮದ್ರಾಸಿಗೆ ಹೋಗಿ, ತನ್ನ ಕೆಲಸವನ್ನು ಬಿಟ್ಟುಕೊಡುತ್ತೇನೆಂದು ಹೇಳಿದನು. ಆದರೆ ಆಕಾಲಕ್ಕೆ ಮದ್ರಾಸದ ಅಧಿಪತಿಯಾದ **ಮೆಕಾರ್ಟನೆ** ದೊರೆಯು ಹಾಗೆ ಮಾಡಕೂಡದೆಂತಲೂ **ವೇಲೂರ** ಮುತ್ತಿಗೆಯನ್ನೆಬ್ಬಿಸಬೇಕೆಂತಲೂ ಚಾಲುವರೆದುದರಿಂದ, ಕೂಟನು ಆಮಾತಿಗೆ ಒಡಂಬಟ್ಟು, ದಂಡಿನೊಂದಿಗೆ ವೇಲೂರಿಗೆ ಹೋಗಿ ಮೈಸೂರವರ ಮುತ್ತಿಗೆಯನ್ನೆಬ್ಬಿಸಿ, **ಚೋಳಂಗೆರೆ**ಯೆಂಬಲ್ಲಿ ಮತ್ತೆ ಹೈದರನ ದಂಡನ್ನು ಸೋಲಿಸಿ, ಮದ್ರಾಸಕ್ಕೆ ತಿರುಗಿ ಹೋಗಿ, ಅಲ್ಲಿ ತನ್ನ ಅಶಕ್ತತೆಯ ಮೂಲಕವಾಗಿ ಸುಮ್ಮನೇ ಕುಳಿತನು.

ಈಸಮಯಕ್ಕೆ ಹೈದರನಿಗೆ ಅವಕಾಶ ದೊರೆಯಿತು. ಆದರೆ ಆ-ಅವಕಾಶದಿಂದ ಅವನಿಗೇನೂ ಉಪಯೋಗವಾಗಲಿಲ್ಲ. ಏಕಂದರೆ ಅವನು ನಿರುತ್ಸಾಹಿಯಾಗಿದ್ದನು. ನಿಜಾಮನು ಉತ್ತರಸರಕಾರದ ಸೀಮೆಯನ್ನೊಳಸುಗ್ಗ ಬೇಕೆಂದು ಮೊದಲು ಗೊತ್ತಾಗಿತ್ತಷ್ಟೇ. ಆದರೆ ಅವನು ಹಾಗೆ ಮಾಡದೆ ಇಂಗ್ಲಿಷರಿಂದ ಗುಂಟೂರನ್ನು ತೆಗೆದುಕೊಂಡು ಸ್ವಸ್ಥ ಕುಳಿತನು. ಆದ್ದರಿಂದ ಯುದ್ಧದ ಭಾರವೆಲ್ಲ ಹೈದರನ ಮೇಲೇ ಬಿತ್ತು. ಆದರೂ ಅವನು ಧೈರ್ಯ

ಬಿಡದೆ, ನಾಗಾಪಟ್ಟಣದಲ್ಲಿದ್ದ ಡಚ್ಚರಿಗೆ **ನಾಗೂರನ್ನು** ಕೊಡಲೊ ಡಂಬಟ್ಟು, ಅವರ ಸಹಾಯವನ್ನು ಬೇಡಿದನು. ಈಸುದ್ದಿಯು ಇಂಗ್ಲಿಷರಿಗೆ ತಿಳಿದುದರಿಂದ ಅವರ ದಳವಾಯಿಯಾದ **ಬ್ರೇಥವೇಟನು*** **ನಾಗಾಪಟ್ಟಣವನ್ನೂ ನಾಗೂರನ್ನೂ** ಹಿಡಿದುಕೊಂಡು, ಡಚ್ಚರಿಂದ ಸಹಾಯ ಬಾರದಂತೆ ಮಾಡಿ, ಹೈದರನನ್ನು ತಂಜಾವರದಿಂದ ಹೊರಡಿಸಿದನು.

ನಿಜಾಮನು ಸ್ವಾರ್ಥಬುದ್ಧಿಯಿಂದ ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಂಡನೆಂದು ಹೈದರನು ಚಿಂತೆ ಮಾಡುವಷ್ಟರಲ್ಲಿ ಪೇಶ್ವೇನು **ಮಹಾದಾಜಿಶಿಂದೆಯ** ಮಧ್ಯಸ್ಥಿಕೆಯಿಂದ **ಸಾಲ್ಬಾಯಿಯಲ್ಲಿ** ಇಂಗ್ಲಿಷರೊಡನೆ ಒಪ್ಪಂದಮಾಡಿಕೊಂಡನೆಂದು ಸುದ್ದಿ ಬಂತು (ಮೇ ೧೭೮೨). ಅದನ್ನು ಕೇಳಿ ಹೈದರನು ಬಹುಪಶ್ಚಾತ್ತಾಪಬಟ್ಟು ತನ್ನ ಬಂಡಾರಗಾರನಾದ **ಪೂರ್ಣಯ್ಯ**ನವರಿಗೆ ಹೇಳಿದ್ದೇನಂದರೆ:— ನಾನು ದೊಡ್ಡ ತಪ್ಪು ಮಾಡಿದೆನು. ನಾನು ಒಂದು ಲಕ್ಷ ಮೊಹರುಗಳನ್ನು ಕೊಟ್ಟು ಒಂದು ಸಿಂದಿಯ ಗೊಬ್ಬೆಯನ್ನು ಕೊಂಡಂತಾಯಿತು. ನನ್ನ ಮತ್ತು ಇಂಗ್ಲಿಷರ ನಡುವೆ ಉಂಟಾದ ಮನಸ್ತಾಪವು ಯುದ್ಧಕ್ಕೆ ಹೋಗುವಷ್ಟು ಬಲವತ್ತರವಾಗಿದ್ದಿಲ್ಲ. ಮಹಮ್ಮದ ಅಲ್ಲಿಯು ಎಷ್ಟು ವಿಶ್ವಾಸಘಾತಕತನ-ಮಾಡಿದರೂ ಇಂಗ್ಲಿಷರು ನನ್ನ ಗೆಳೆಯರಾಗುವಂತಿದ್ದರು. ಎಷ್ಟು ಮಂದಿ ಬೇಲಿ-ಬ್ರೇಥವೇಟರನ್ನು ನಾನು ಸೋಲಿಸಿದರೂ ಇಂಗ್ಲಿಷರನ್ನು ನಿರ್ಮೂಲ ಮಾಡುವುದು ನನ್ನಿಂದಾಗಲಿಕ್ಕಿಲ್ಲ. ನೆಲದ ಮೇಲೆ ಅವರಿಗೆ ಸಾಮಗ್ರಿಯು ದೊರೆಯದಂತೆ ನಾನು ಮಾಡಬಹುದು; ಆದರೆ ಸಮುದ್ರವನ್ನು ಬತ್ತಿಸುವದು ನನ್ನಿಂದ ಆಗಲಾರದು. ಸಾಧಾರಣಬುದ್ಧಿಯುಳ್ಳವರು ಮರಾಟರನ್ನು ನಂಬಕೂಡದೆಂಬ ವಿಚಾರವನ್ನು ನಾನು ಲಕ್ಷದಲ್ಲಿ ತರತಕ್ಕದ್ದಿತ್ತು; ಏಕಂದರೆಯಾರೂ ತಮ್ಮನ್ನು ನಂಬುವದಿಲ್ಲೆಂದು ಮರಾಟರೇ ತಿಳಿಯುತ್ತಾರೆ. ಫ್ರೆಂಚರ ದಂಡು ಯು

---

* ೧೭೮೨ ಫೇಬ್ರುವರಿಯಲ್ಲಿ ಟೀಪುಸುಲ್ತಾನನು ಈ ಬ್ರೇಥವೇಟನನ್ನು ಪೂರ್ಣವಾಗಿ ಸೋಲಿಸಿದನು.

ರೋಪದಿಂದ ಈವೊತ್ತು ಬರುವುದು ನಾಳೆ ಬರುವದೆಂದು ಹಾದಿ ನೋಡುತ್ತ ನಾನು ವ್ಯರ್ಥವಾಗಿ ಕಾಲಕಳೆಯಲಾರಂಭಿಸಿದ್ದೇನೆ. ಅದು ಬಂದು ನನಗೆ ಇಲ್ಲಿ ಗೆಲವು ಬಂತೆಂದು ಎಣಿಸಿದರೂ ನಾನೊಬ್ಬನೇ ಮರಾಟರೊಡನೆ ಯುದ್ಧಮಾಡಲಿಕ್ಕೆ ಹೋಗಬೇಕಾಗುವದು; ಏಕಂದರೆ ನಾನು ಫ್ರೆಂಚರನ್ನು ನಂಬಿ ಅವರನ್ನು ನನ್ನ ರಾಜ್ಯದೊಳಗೆ ಬರಗೊಡಲಾರೆನು.

ಈಮೇರೆಗೆ ಪೇಶ್ವೆ-ನಿಜಾಮರು ಮೋಸಗೊಳಿಸಿದರೂ ಹೈದರನು ಧೈರ್ಯಬಿಡಲಿಲ್ಲ. ಅವನು ಮಲಬಾರ-ಕೂರ್ಗಗಳಲ್ಲಿ ತನ್ನ ಅಧಿಕಾರವನ್ನು ನೆಲೆಗೊಳಿಸಲಿಕ್ಕೆ ದಂಡುಕಳುಹಿ, ತಾನೂ ಅತ್ತಕಡೆಗೆ ಹೋಗಬೇಕೆಂಬ ಆಲೋಚನೆಯಲ್ಲಿದ್ದಾಗ ಫ್ರಾನ್ಸದೇಶದಿಂದ ತನಗೆ ಸಹಾಯಮಾಡಲಿಕ್ಕೆ ದಂಡು ಬಂದು, ಪೋರ್ಟನೊವೋದಲ್ಲಿ ಇಳಿಯಿತೆಂದು ಸುದ್ದಿ ಬಂತು. ಕೂಡಲೆ ಫ್ರೆಂಚರು ಕಡಲೂರನ್ನು ಹಿಡಿದುಕೊಂಡರೆಂಬ ಮತ್ತೊಂದು ಸಂತೋಷದ ಸುದ್ದಿಯು ಬಂತು. ಆದ್ದರಿಂದ ಹೈದರನು ಹುರುಪುಗೊಂಡು, ಫ್ರೆಂಚರನ್ನು ಕೂಡಿ, ಪರಮಕೋವಿಲನ್ನು ಹಿಡಿದುಕೊಂಡು, ಕೆಲ್ಲಿನೂರೆಂಬ ಭದ್ರವಾದ ಸ್ಥಳದಲ್ಲಿ ಪಾಳಯಹಾಕಿದನು. ಹೈದರನ ಈಹಾವಳಿಯ ಸುದ್ದಿಯನ್ನು ಕೇಳಿ, ಕೂಟನಿಗೆ ಸುಮ್ಮನೆ ಕೂಡ್ರಲಿಕ್ಕಾಗಲಿಲ್ಲ. ಅವನು ದಂಡಿನೊಡನೆ ಹೊರಟು ಹೈದರನನ್ನು ಅರ್ಣಿಯೆಂಬ ಸ್ಥಳದ ಬಳಿಯಲ್ಲಿ ಕೆಣಕಿ ಸೋಲಿಸಿದನು. ಆದರೆ ಅರ್ಣಿಯನ್ನು ಮುತ್ತಿ ಹಿಡಿದುಕೊಳ್ಳುವಷ್ಟು ಸಾಮರ್ಥ್ಯವು ಅವನಲ್ಲಿದ್ದಿಲ್ಲ. ಮುಂದೆ ಕೆಲವು ದಿವಸಗಳ ಮೇಲೆ ಹೈದರನು ಅವನ ದಂಡಿನ ಒಂದು ಭಾಗದ ಮೇಲೆ ಬಿದ್ದು ಅದನ್ನು ಓಡಿಸಿದನು. ಇದೇ ಹೈದರ-ಕೂಟರ ನಡುವೆ ಆದ ಕಡೆಯ ಕಾಳಗವು (ಜೂನ೧೭೮೨).

ಈಸಮಯಕ್ಕೆ ಕರ್ನಲ್ ಹಂಬರಸ್ಟನ್ನನೆಂಬ ಮುಂಬಯಿ ಸರಕಾರದ ದಳವಾಯಿಯು ಮಲಬಾರವನ್ನೊಳನುಗ್ಗಿ, ಕಾಲಿಕತ್ತ ಮುಂತಾದ ಸ್ಥಳಗಳನ್ನು ಹಿಡಿದುಕೊಂಡನೆಂದು ಸುದ್ದಿ ಬಂತು. ಆದ್ದರಿಂದ ಹೈದರನು ತನ್ನ ಮಗನಾದ ಟೀಪುವನ್ನು ಅಲ್ಲಿಗೆ ಕಳುಹಿ

ದನು. ಟೀಪುವಿನಲ್ಲಿ ಅವನ ತಂದೆಯ ಅನುಭವವೂ ಎಚ್ಚರವೂ ಇಲ್ಲದ್ದರಿಂದ ಅವನು ಇಂಗ್ಲಿಷರಿಗೆ ಸಾಮಗ್ರಿಯು ಸಿಗದಂತೆ ಮಾಡಿ, ಅವರನ್ನು ದಣಿಸುವ ಗೋಜಿಗೆ ಹೋಗದೆ, ಹೆಮ್ಮೆಯಿಂದ **ಪಾಣಿಯಾಣಿ**ಯೆಂಬಲ್ಲಿ ಅವರ ದಂಡಿನ ಮೇಲೆ ಬಿದ್ದು ಸೋಲುತಂದುಕೊಂಡನು. ಬಳಿಕ ಅವನು ಮುಂದೆ ಏನು ಮಾಡಬೇಕೆಂಬ ಆಲೋಚನೆಯಲ್ಲಿರುವಾಗ ಹೈದರನು ಅರಸುಹುಣ್ಣಿನ ಬೇನೆಯಿಂದ ಚಿತ್ತೂರ ಬಳಿಯಲ್ಲಿದ್ದ **ನರಸಿಂಗರಾಯನ ಪೇಟೆ**ಯಲ್ಲಿ ಸತ್ತನು (೭ ದಿಶಂಬರ ೧೭೮೨) ಎಂಬ ಭಯಂಕರವಾದ ಸುದ್ದಿಯು ಬಂತು. ಆದ್ದರಿಂದ ಅವನು ಕೂಡಲೆ ತನ್ನ ತಂದೆಯಿದ್ದ ಪಾಳಯಕ್ಕೆ ಹೊರಟುಹೋದನು.*

ಇಲ್ಲಿಗೆ ಹೈದರ ಅಲ್ಲಿಯ ಚರಿತ್ರವು ಮುಗಿದಂತಾಯಿತು. ಮುಂದೆ ಅವನು ಇಂಗ್ಲಿಷರೊಡನೆ ಹೂಡಿದ ಯುದ್ಧದ ಪರಿಣಾಮವೇನಾಯಿತೆಂಬದನ್ನು ಟೀಪುವಿನ ಚರಿತ್ರದಲ್ಲಿ ನೋಡಿಕೊಳ್ಳಬಹುದು. ಆದ್ದರಿಂದ ಇಲ್ಲಿ ನಮ್ಮ ಚರಿತ್ರನಾಯಕನ ಗುಣದೋಷಗಳನ್ನು ವಿವರಿಸಿ ಈ ಚರಿತ್ರವನ್ನು ಮುಗಿಸುವೆವು.

---

* ಹೈದರನು ತೀರಿಕೊಂಡಾಗ ಪೂರ್ಣಯ್ಯನವರು ದಂಡಿನ ಸರಬರಾಯಿ ಮೇಲ್ವಿಚಾರಣೆಯ ಕೆಲಸದ ಮೇಲೂ, ಮೀರಸಾದಕನು ಕಂದಾಚಾರದ ಬಕ್ಷೀಗಿರಿ ಕೆಲಸದ ಮೇಲೂ ಇದ್ದರು. ಇವರಲ್ಲದೆ ಅಬ್ಬೂ ಮಹಮ್ಮದ ಮಿರ್ದೆಯೆಂಬವನೂ ತೋಷಿಖಾನೆ ಕೃಷ್ಣರಾಯರೆಂಬವರೂ ಅಂಚೆ ಶಾಮಯ್ಯನೆಂಬವನೂ ಪ್ರಮುಖ ಸರದಾರರಾಗಿದ್ದರು. ಇವರೆಲ್ಲರು ಕೂಡಿ ಮುಂದೆ ಏನು ಮಾಡಬೇಕೆಂದು ವಿಚಾರ ಮಾಡುತ್ತಿರುವಾಗ ಪೂರ್ಣಯ್ಯನವರು ಹೈದರನು ಸತ್ತ ಸುದ್ದಿಯನ್ನು ಹೊರಗೆಡವಿದರೆ, ದಂಡಿನ ಕಟ್ಟು ಉಳಿಯಲಿಕ್ಕಿಲ್ಲೆಂದು ಸೂಚಿಸಿ, ಸಾರಣಿ ಸವಾರನನ್ನು ಟೀಪುವಿನ ಬಳಿಗೆ ಕಳಿಸಿ, ಹೈದರನ ದೇಹವನ್ನು ಒಂದು ಸಂದುಕದಲ್ಲಿ ಪರಿಮಳದ್ರವ್ಯಗಳೊಂದಿಗೆ ಹಾಕಿ ಮೊಹರು ಮಾಡಿ ಆ ಸಂದುಕವನ್ನು ಕೋಲಾರಕ್ಕೆ ಕಳುಹಿ, ತಾವು ದಿನಾಲು ಹೈದರನ ಡೇರೆಗೆ ನಿತ್ಯದಂತೆ ಹೋಗಿ, ಅಪ್ಪಣೆ ಪಡೆದಂತೆ ಮಾಡಿ, ದಂಡಿನವರಿಗೆ ಅವನು ಸತ್ತ ಸುದ್ದಿಯನ್ನು ತಿಳಿಯಗೊಡಲಿಲ್ಲ. ಆದರೂ ಮಹಮ್ಮದ ಅಮೀನನೆಂಬವನೊಬ್ಬ ೪,೦೦೦ ಕುದುರೆಯ ಸವಾರರ ಮೇಲಧಿಕಾರಿಯು ಈ ಗುಪ್ತ ಸುದ್ದಿಯನ್ನು ತಿಳಕೊಂಡು ಹೈದರನ ಎರಡನೆಯ ಮಗನಾದ ಕರೀಮುಸಾಬಿಗೆ ಪಟ್ಟಗಟ್ಟಬೇಕೆಂದು ವ್ಯರ್ಥಪ್ರಯತ್ನಮಾಡಿ ಸಾವನದುರ್ಗದಲ್ಲಿ ಸೆರೆಯಾಳಾದನು.

ಶಿವಾಜಿಯಂತೆ ಹೈದರನಿಗೆ ಓದುಬರಹ ಬರುತ್ತಿದ್ದಿಲ್ಲ. ತನ್ನ ಹೆಸರಿನ ಮೊದಲನೆಯ ಅಕ್ಷರವನ್ನು ಮಾತ್ರ ಅವನು ತಲೆಕೆಳಗಾಗಿ ಬರೆಯುತ್ತಿದ್ದನು. ಅವನು ಕನ್ನಡ-ತೆಲಗು-ತಮಿಳ ನುಡಿಗಳನ್ನು ಚೆನ್ನಾಗಿ ಮಾತಾಡುತ್ತಿದ್ದನು. ಅವನಲ್ಲಿ **ನೆನಪಿನ ಶಕ್ತಿಯು** ಬಹಳವಾಗಿತ್ತು. ಅವನು ಒಮ್ಮೆ ಕೇಳಿದ್ದನ್ನು ಅಥವಾ ನೋಡಿದ್ದನ್ನು ಎಂದೂ ಮರೆಯುತ್ತಿದ್ದಿಲ್ಲ. ಅವನಲ್ಲಿದ್ದ ಮತ್ತೊಂದು ದೊಡ್ಡ ಗುಣವು **ಆಸಕ್ತಿಯು.** ಅವನು ದಿನಾಲು ಬೆಳಿಗ್ಗೆ ಮೋರೆ ತೊಳೆದುಕೊಂಡ ಕೂಡಲೆ ದರ್ಬಾರಕ್ಕೆ ಹೋಗಿ, ಬಂದ ಕಾಗದಗಳನ್ನೆಲ್ಲ ಓದಿಸಿಕೊಂಡು, ಅವುಗಳ ಉತ್ತರಗಳನ್ನು ತಾನೇ ಹೇಳಿ ರಾಯಸದವರಿಂದ ಬರೆಯಿಸುತ್ತಿದ್ದನು; ಮತ್ತು ಒಬ್ಬನು ಬರೆದುದನ್ನು ಮತ್ತೊಬ್ಬನಿಂದ ಓದಿಸಿಕೊಂಡು ತನ್ನ ರುಜು ಹಾಕುತ್ತಿದ್ದನು. ಅವನ ಬೇಹಿನವರು ಎಲ್ಲ ಕಡೆಯಿಂದ ಸುದ್ದಿಗಳನ್ನು ತಂದು, ಅವನಿಗೆ ಇರುಳಿನಲ್ಲಿ ತಿಳಿಸುತ್ತಿದ್ದರು. ಒಮ್ಮೊಮ್ಮೆ ಅವನು ತಾನೇ ವೇಷಬದಲಿಸಿಕೊಂಡು ಊರೊಳಗೆ ತಿರುಗಾಡುತ್ತಿದ್ದನು. ಆದ್ದರಿಂದ ಸಂಚುಗಾರರಿಗೆ ಎಳ್ಳಷ್ಟಾದರೂ ಇಂಬು ದೊರೆಯುತ್ತಿದ್ದಿಲ್ಲ. ಹೈದರನಲ್ಲಿದ್ದ ೩ನೆಯ ದೊಡ್ಡ ಗುಣವು **ಧರ್ಮದುರಭಿಮಾನದ ಅಭಾವವು.** ಒಮ್ಮೆ ಶ್ರೀರಂಗಪಟ್ಟಣದ ಉತ್ಸವಮೂರ್ತಿಯು ಬೆಂಕಿಯಲ್ಲಿ ಬಿದ್ದು ಕರಗಲು, ಅವನು ಕೂಡಲೆ ಸರಕಾರದ ಹಣದಿಂದ ಹೊಸ ಮೂರ್ತಿಯನ್ನು ಮಾಡಿಸಿ ಕೊಟ್ಟುದಲ್ಲದೆ ಗುಡಿಯ ಕೆಲವು ಬಿದ್ದ ಭಾಗಗಳನ್ನು ಕಟ್ಟಿಸಿದನು; ಮತ್ತೊಮ್ಮೆ ಸಿಯಾ-ಸುನ್ನಿಮತದವರು ಜಗಳಾಡಲು, ಹೈದರನು ಅವರಿಬ್ಬರನ್ನು ಹೆದರಿಸಿ ಸಮಾಧಾನಮಾಡಿದನು. ಮತ್ತೊಮ್ಮೆ ಸ್ವಾರ್ಟ್ಸನೆಂಬ ಪಾದ್ರಿಗೆ ತನ್ನ ರಾಜ್ಯದೊಳಗೆ ಬೇಕಾದಲ್ಲಿ ಉಪದೇಶಮಾಡಲಿಕ್ಕೆ ಅಪ್ಪಣೆಕೊಟ್ಟನು. ಇದಲ್ಲದೆ ಅವನು ಬ್ರಾಹ್ಮಣರಿಗೂ ಮುಸಲ್ಮಾನರಿಗೂ ಅವರವರ ಯೋಗ್ಯತೆಯಂತೆ ದೊಡ್ಡ ದೊಡ್ಡ ಕೆಲಸಗಳನ್ನು ಪಕ್ಷಪಾತವಿಲ್ಲದೆ ಕೊಡುತ್ತಿದ್ದನು. ಹೈದರನ ನಾಲ್ಕನೆಯ ದೊಡ್ಡ ಗುಣವು **ಶೌರ್ಯವು.** ಅವನು ಕುದುರೆ ಏರುವುದರಲ್ಲಿ

ಯೂ ಗುರಿಹೊಡೆಯುವುದರಲ್ಲಿಯೂ ಜಾಣನಾಗಿದ್ದನು; ಮತ್ತು ಅವನ ಚಾಪಲ್ಯವೂ ಗಟ್ಟಿಗತನವೂ ಹೊಗಳತಕ್ಕಂತಹವುಗಳೇ ಸರಿ. ಸವಾರರ ಯುದ್ಧದಲ್ಲಿ ಅವನು ಇಂಗ್ಲಿಷ ದಳವಾಯಿಗಳಿಗಿಂತ ಹೆಚ್ಚು ಕುಶಲತೆಯನ್ನು ತೋರಿಸುತ್ತಿದ್ದನು. ಅವನು ತನ್ನ ಜೀವದ ಎಚ್ಚರಿಕೆಯಿಲ್ಲದೆ ಕಾದುತ್ತಿದ್ದನಾದ್ದರಿಂದ ಅವನ ದಂಡಾಳುಗಳು ಅವನನ್ನು ಹುರುಪಿನಿಂದ ಹಿಂಬಾಲಿಸುತ್ತಿದ್ದರು.* ಅವನು ತಪ್ಪುಮಾಡಿದ ತನ್ನ ಸೇವಕರನ್ನು ದಯೆಯಿಲ್ಲದೆ ಬಾರುಕೋಲಿನಿಂದ ಹೊಡೆಯುತ್ತಿದ್ದರೂ ವಿಶ್ವಾಸದಿಂದ ತನ್ನ ಊಳಿಗವನ್ನು ಮಾಡಿದವರಿಗೆ ಯಥೇಷ್ಟವಾಗಿ ಇನಾಮುಕೊಡುತ್ತಿದ್ದನು.

ಹೈದರನು ಮೇಲೆ ವಿವರಿಸಿದಂತೆ ಗುಣಿಯಾದರೂ ಅವನಲ್ಲಿ ಒಂದೆರಡು ದುರ್ಗುಣಗಳಿದ್ದವು. ಈಕಲಿಯುಗದಲ್ಲಿ ಇಂದ್ರಿಯನಿಗ್ರಹವನ್ನು ಮಾಡಿದ ಅರಸರು ಅಪರೂಪವೇ ಸರಿ. ಹೈದರನಂತೂ ಮುಸಲ್ಮಾನನಾದ್ದರಿಂದ ಬೇಕಾದಷ್ಟು ಜನ ಹೆಂಗಸರನ್ನು ಅರಮನೆಯಲ್ಲಿಟ್ಟುಕೊಳ್ಳಲಿಕ್ಕೆ ಧರ್ಮದಿಂದ ಪ್ರತಿಬದ್ಧನಾಗಿದ್ದಿಲ್ಲ. ಅವನು ಕೆಲಮಟ್ಟಿಗೆ **ವಿಷಯಾಸಕ್ತ**ನಾದ್ದರಿಂದ ಚೆಲುವೆಯರಾದ ಹೆಂಗಳೆಯರನ್ನು ಹೇಗಾದರೂ ಮಾಡಿ ಹಿಡಿದು ತರಿಸಿ, ತನ್ನ ಅರಮನೆಯಲ್ಲಿಟ್ಟುಕೊಳ್ಳುತ್ತಿದ್ದನು; ಇಲ್ಲವೆ ದಂಡಿನವರಿಗೆ ಕೊಡುತ್ತಿದ್ದನು. ಆದರೂ ಅವನು ಶಿವಾಜಿಯ ಮೊಮ್ಮಗನಾದ ಶಾಹುಮಹಾರಾಜನಂತೆ ವಿಷಯಾಸಕ್ತನಾಗಿ ರಾಜ್ಯಕಾರ್ಯವನ್ನು ಅಲಕ್ಷಿಸಲಿಲ್ಲ, ಮತ್ತು ದಂಡಿನ ಪರಿಶ್ರಮವನ್ನು ತಪ್ಪಿಸಿಕೊಳ್ಳಲಿಲ್ಲ. ಅವನು ಸಾಯುವಾಗ ೬೦೦ ಜನ ಹೆಂಗಸರು ಅವನ ಅರಮನೆಯಲ್ಲಿದ್ದರೆಂತಲೂ ಅವನು ಸತ್ತ ಸುದ್ದಿಯು ಶ್ರೀರಂಗಪಟ್ಟಣಕ್ಕೆ ಬಂದ ಕೂಡಲೆ ಆಹೆಂಗಸರು ಒಡಕೊಂಡ ಬಳೆಗಳ ಚೂರುಗಳು ಮೂರು ಹೇರಾದವೆಂತಲೂ ತಿಳಿಯುತ್ತದೆ. ಹೈದರನಲ್ಲಿದ್ದ ಮತ್ತೊಂದು ದುರ್ಗುಣವು **ದ್ರವ್ಯಲೋಭವು.** ಹೆಂಗಳೆಯರನ್ನು ಹಿಡಿದು ತರಿಸ

---

* ಅವನು ಸಾಯುವಾಗ ಅವನ ದಂಡಿನಲ್ಲಿ ೮೮,೦೦೦ ಜನರಿದ್ದರು.

ಲಿಕ್ಕೆ ಅವನು ಹೇಗೆ ಅನುಮಾನಮಾಡುತ್ತಿದ್ದಿಲ್ಲವೋ, ಹಾಗೇ ಹಣವನ್ನು ಅಪಹರಿಸಲಿಕ್ಕೆ ಅವನು ಹಿಂದೆ ಮುಂದೆ ನೋಡುತ್ತಿದ್ದಿಲ್ಲ. ಅವನು ಒಮ್ಮೆ ಹಣಕ್ಕೋಸುಗ ತನ್ನ ಒಡೆಯನಾದ ನಂಜರಾಜಯ್ಯನನ್ನೂ ತನ್ನ ಆಪ್ತಮಿತ್ರನಾದ ಫಾಜಲುಲ್ಲಾಖಾನನ್ನೂ ಹೇಸದೆ ಸುಲಿದನು. ಅವನು ರಾಜ್ಯವನ್ನು ಕಯ್ಕೊಂಡಂದಿನಿಂದ ಸಾಯುವವರೆಗೆ ಯುದ್ಧದಲ್ಲೇ ತೊಡಗಿದ್ದನು. ಪೇಶ್ವೇನೊಬ್ಬನೇ ಅವನಿಂದ ಲಕ್ಷಾವಧಿ ರೂಪಾಯಿ ಕಪ್ಪವನ್ನು ತೆಗೆದುಕೊಂಡನು. ಆದರೂ ಅವನು ಸತ್ತ ಬಳಿಕ ಅವನ ಬಂಡಾರದಲ್ಲಿ ಬೆಲೆಯುಳ್ಳ ಒಡವೆ-ಬಟ್ಟೆಗಳ ಹೊರತು ೩ ಕೋಟಿ ನಗದು ರೂಪಾಯಿಗಳಿದ್ದವು. ಇದರಿಂದ ಅವನಲ್ಲಿ ದ್ರವ್ಯಾಶೆಯು ಎಷ್ಟಿತ್ತೆಂಬದನ್ನು ಸುಲಭವಾಗಿ ತರ್ಕಿಸಬಹುದು.

---



## ೧. ಟೀಪುಸುಲ್ತಾನ.

ಈಕರ್ಣಾಟಕ ದೇಶದಲ್ಲಿ ಇಂಗ್ಲಿಷರಿಗೆ ಅತಿಬಲಾಢ್ಯಶತ್ರುವಾದವನೂ ತನ್ನ ಕಲಿತನದಿಂದ ಮೈಸೂರ ಹುಲಿಯೆಂದು ಹಗೆಗಳಿಂದಾದರೂ ಕರೆಯಲ್ಪಟ್ಟವನೂ ಟೀಪುಸುಲ್ತಾನನೇ ಸರಿ.

ಇವನು ಮೈಸೂರ ರಾಜವಂಶವನ್ನು ಪಟ್ಟದಿಂದ ತಳ್ಳಿ, ಆ ರಾಜ್ಯವನ್ನು ತನ್ನ ಪರಾಕ್ರಮದಿಂದ ಹಿಡಿದುಕೊಂಡ ಹೈದರ ಅಲ್ಲಿಯ ಮಗನು. ಇವನ ತಾಯಿಯು ಕೆಲಕಾಲ ಕಡಪೆಯ ಸುಬೇದಾರ

ನಾದ **ಮೀರಮಾಯಾನುದ್ದೀನನ** ಮಗಳು. ಆಕೆಯ ಹೆಸರು **ಫಕ್ರಲುನ್‌ನಿಸ್ಸಾ.** ಇವನು ೧೭೫೩ನೆಯ ಇಸವಿಯಲ್ಲಿ **ದೇವನ ಹಳ್ಳಿಯಲ್ಲಿ** ಹುಟ್ಟಿದನು. ಇವನನ್ನು ಬಸುರಿದ್ದಾಗ ಇವನ ತಾಯಿ ಯು ಆರ್ಕಾಟಕ್ಕೆ ಹೋಗಿ, ಅಲ್ಲಿದ್ದ **"ಟೀಪುಮಸ್ತಾನಅಲಿಯಾ"** ಎಂಬ ಫಕೀರನ ದರ್ಗಾಕ್ಕೆ ನಡೆದುಕೊಂಡುದರಿಂದ ತನ್ನ ಮಗನು ಹುಟ್ಟಿದ ಕೂಡಲೆ ಅವನಿಗೆ ಆಸಾಧುವಿನ ಹೆಸರಿಟ್ಟಳೆಂದು ಕೆಲ ವರು ಹೇಳುತ್ತಾರೆ. ಅದು ಹೇಗೇ ಇರಲಿ, ಟೀಪುವಿನ ಬಾಲ್ಯದ ಸಂಬಂಧದಿಂದ ನಮಗೆ ಹೆಚ್ಚಿಗೇನೂ ಗೊತ್ತಾಗುವದಿಲ್ಲ. ಅವನ ತಂದೆಯು ಸಾಯುವಾಗ ಅವನಿಗೆ ಸುಮಾರು ೨೯ ವರುಷಗಳಾಗಿ ದ್ದವು.*

ತಂದೆ ಸತ್ತಾಗ ಟೀಪು **ಪಾಣಿಯಾಣಿ**ಯೆಂಬಲ್ಲಿದ್ದನು. ಆ ಸುದ್ದಿಯನ್ನು ಕೇಳಿದ ಕೂಡಲೆ ಅವನು ಒತ್ತರದಿಂದ ಹೊರಟು **ಪೆನ್ನಾರ** ಹೊಳೆ ದಂಡೆಯಲ್ಲಿದ್ದ ಮುಖ್ಯ ಸೇನೆಯನ್ನು ಕೂಡಿ, ತಾನೇ **ಮೈಸೂರ** ಒಡೆಯನೆಂದು ಸಾರಿದನು. ಈಪ್ರಸಂಗದಲ್ಲಿ **ಪೂರ್ಣ ಯ್ಯ-ಕೃಷ್ಣ**ರಾಯರು ತೋರಿಸಿದ ರಾಜನಿಷ್ಠೆಯು ಹೊಗಳತಕ್ಕಂತ ಹದೇ ಸರಿ. ಈಸಮಯದಲ್ಲಿ **ಮದ್ರಾಸ** ಸರಕಾರದವರು ಚಟು ವಟಿಕೆಯನ್ನು ತೋರಿಸದೆ ವ್ಯರ್ಥವಾಗಿ ಹೊತ್ತುಗಳೆದುದು ದಡ್ಡ ತನವಾಯಿತು.

**ಮುಂಬಯಿ** ಸರಕಾರದವರು ಹೈದರನು ಸತ್ತ ಸುದ್ದಿಯನ್ನು ಕೇಳಿದ ಕೂಡಲೆ **ಹೊನ್ನಾವರ**ದಲ್ಲಿದ್ದ **ಮ್ಯಾಥೂಸ**ನೆಂಬ ತಮ್ಮ ದಳವಾಯಿಗೆ ಬಿದನೂರನ್ನು ಹಿಡಿದುಕೊಳ್ಳಲಿಕ್ಕೆ ಕಟ್ಟಪ್ಪಣೆಯನ್ನಿ ತ್ತರು. ಅದರಂತೆ ಅವನು ಅಲ್ಲಿಗೆ ಹೋಗಿ ಅದನ್ನು ಮುತ್ತಿದನು. ಆಕೋಟೆಯು ಆಕಾಲಕ್ಕೆ **ಶೇಖ ಅಯಾಜ** (ಹಯಾತಸಾಹೇಬ) ನೆಂಬ, ಒತ್ತಾಯದಿಂದ ಮುಸಲಮಾನನಾದ, ನಾಯರ ಬ್ರಾಹ್ಮಣನ ವಶದಲ್ಲಿತ್ತು. **ಹೈದರನು** ಅವನಲ್ಲಿಟ್ಟ ಪೂರ್ಣವಿಶ್ವಾಸವು **ಟೀಪುವಿಗೆ**

* ಹಿಂದೆ ಪುಟ ೧೫೭ ನೋಡಿರಿ.

ಸೇರದ್ದರಿಂದ ಅವನು ಶೇಖ ಅಯಾಜನನ್ನು ಕೆಲಸದಿಂದ ತೆಗೆದು ಹಾಕಿ ಲುತಫ್ ಅಲ್ಲಿಬೇಗ ಎಂಬವನನ್ನು ಅವನೆಡೆಯಲ್ಲಿ ನಿಯಮಿಸಿದನು. ಆದ್ದರಿಂದ ಶೇಖ ಅಯಾಜನು, ಬೇಗನು ಅಲ್ಲಿಗೆ ಬರುವದಕ್ಕಿಂತ ಮೊದಲೇ ಆಕೋಟೆಯನ್ನು ಮ್ಯಾಥೂಸನಿಗೆ ಒಪ್ಪಿಸಿಕೊಟ್ಟನು.* ಈಸುದ್ದಿಯನ್ನು ಕೇಳಿ ಸುಲ್ತಾನನು ಸಿಟ್ಟಿಗೆದ್ದು, ತನ್ನ ಎಲ್ಲ ದಂಡನ್ನು ತೆಗೆದುಕೊಂಡು ಬಂದು, ಬಿದನೂರನ್ನು ಮುತ್ತಿದನು. ಮ್ಯಾಥುಸನ ಹತ್ತರ ೧೬೦೦ ದಂಡಾಳುಗಳು ಮಾತ್ರ ಇದ್ದುದರಿಂದ ಅವನು ನಿರುಪಾಯನಾಗಿ ಮುಂದೆ ಕೆಲವು ದಿವಸದ ಮೇಲೆ ಸುಲ್ತಾನನಿಗೆ ಶರಣುಬಂದನು. ಆದರೆ ಅಷ್ಟರಲ್ಲಿ ಶೇಖಅಯಾಜನು ಆಕೋಟೆಯಲ್ಲಿದ್ದ ಎಲ್ಲ ಬಂಡಾರವನ್ನು ತೆಗೆದುಕೊಂಡು ಮುಂಬಯಿಗೆ ಹೋದನೆಂಬ ಸುದ್ದಿಯನ್ನು ಕೇಳಿ, ಸುಲ್ತಾನನು ಕನಲ್ದು ಕೆಂಡಾಗಿ ತಾನು ಮ್ಯಾಥೂಸನಿಗೆ ಕೊಟ್ಟ ಮಾತನ್ನು ಮುರಿದು, ಅವನನ್ನೂ ಅವನ ಸಂಗಡಿಗರನ್ನೂ ಶ್ರೀರಂಗಪಟ್ಟಣದಲ್ಲಿ ಸೆರೆಯಲ್ಲಿಟ್ಟು, ಇಂಗ್ಲಿಷರ ವಶದಲ್ಲಿದ್ದ ಮಂಗಳೂರನ್ನು ಮುತ್ತಿದನು. ಆದರೆ ಅಷ್ಟರಲ್ಲಿ ಇಂಗ್ಲಿಷರಿಗೂ ಫ್ರೆಂಚರಿಗೂ ಒಪ್ಪಂದವಾದ್ದರಿಂದ ಅವನ ದಂಡಿನಲ್ಲಿದ್ದ ಫ್ರೆಂಚರು ಬಿಟ್ಟುಹೋದರು. ಆದರೂ ಸುಲ್ತಾನನು ಮುತ್ತಿಗೆಯನ್ನೆಬ್ಬಿಸದೆ, ಒಳಗಿದ್ದ ಇಂಗ್ಲಿಷರು ತನಗೆ ಶರಣುಬರುವಂತೆ ಮಾಡಿಕೊಂಡನು. ಇದೇ ಹೆಸರಾದ ಮಂಗಳೂರ ಒಪ್ಪಂದವು. ಇದರಿಂದ ಇಂಗ್ಲಿಷರು ತಾವು ಮಲಬಾರದಲ್ಲಿಯೂ ಕನ್ನಡ ಜಿಲ್ಲೆಯಲ್ಲಿಯೂ ಹಿಡಿದುಕೊಂಡ ಪ್ರದೇಶಗಳನ್ನು ಸುಲ್ತಾನನಿಗೆ ತಿರುಗಿ ಕೊಟ್ಟರು (ಮಾರ್ಚ ೧೭೮೪). ಸುಲ್ತಾನನಾದರೂ ತಾನು ಹಿಡಿದುಕೊಂಡ ಪ್ರದೇಶಗಳನ್ನು ಬಿಟ್ಟುಕೊಟ್ಟನು. ಎರಡೂ ಪಕ್ಷದವರು ತಮ್ಮಲ್ಲಿದ್ದ ಸೆರೆಯಾಳುಗಳ

---

* ಶೇಖಅಯಾಜನ ಮನಸ್ಸಿನಲ್ಲಿ ರಾಜದ್ರೋಹದ ವಿಚಾರವು ಎಳ್ಳಷ್ಟಾದರೂ ಇದ್ದಿಲ್ಲ. ಹೈದರನು ಅವನನ್ನು ಮೇಲಿಂದ ಮೇಲೆ ಹೊಗಳಿ, ಟೀಪುವನ್ನು ಹೀಯಾಳಿಸುತ್ತಿದ್ದನಾದ ಕಾರಣ ಟೀಪುವು ಹೊಟ್ಟೆಕಿಚ್ಚಿನಿಂದ ಅವನನ್ನು ಕೆಲಸದಿಂದ ತೆಗೆದು, ಅವನನ್ನು ಕೊಲ್ಲಬೇಕೆಂದು ಅಯಾಜನ ಕಾರಕೂನನಿಗೆ ಪತ್ರಬರೆದನು!!

ಬಿಡುಗಡೆ ಮಾಡಿದರು.* ಈಯೊಪ್ಪಂದ ಮಾಡಿಕೊಂಡು, ಮಂಗಳೂರಿಂದ ಹೊರಟು ತಿರುಗಿ ಬರುವಾಗ ಸುಲ್ತಾನನು ಸಮುದ್ರ ದಂಡೆಗುಂಟಿದ್ದ ಸುಮಾರು ೭೦,೦೦೦ ಕ್ರೈಸ್ತರನ್ನು ಒತ್ತಾಯದಿಂದ ಮುಸಲ್ಮಾನರನ್ನು ಮಾಡಿ, ಅವರಿಗೆ ಅಹಮ್ಮದೀಯರು (ಸ್ತುತ್ಯರು) ಎಂಬ ಹೆಸರುಕೊಟ್ಟನು. ಅದೇ ಸುಮಾರಿಗೆ ಟೀಪುವು ಬಾದಶಹನೆಂಬ ಬಿರುದನ್ನು ಧರಿಸಿ, ತನ್ನ ರಾಜಧಾನಿಯಲ್ಲಿದ್ದ ಶಿವಾಲಯವನ್ನು ನೆಲಸಮಮಾಡಿ, ಆಯೆಡೆಯಲ್ಲೊಂದು ಮಸೀದೆಯನ್ನು ಕಟ್ಟಿಸಿ, ತನ್ನ ಸೀಮೆಯಲ್ಲಿದ್ದ ಎಲ್ಲ ದೇವಾದಾಯ-ಧರ್ಮಾದಾಯಗಳನ್ನು ಸರಕಾರಕ್ಕೆ ಸೇರಿಸಿಕೊಂಡನು.

ಬಳಿಕ ಸುಲ್ತಾನನು ಸುಮ್ಮನೇ ಕೂಡ್ರದೆ ತನ್ನ ತಂದೆಯ ಕಾಲದಲ್ಲಿ ಕಪ್ಪವನ್ನು ಕೊಡಲಿಕ್ಕೆ ಒಡಂಬಟ್ಟು, ಹಾಗೆ ಮಾಡದೆ ಇದ್ದ ನರಗುಂದದ ಜಹಾಗೀರದಾರನ ಮೇಲೆ ದಂಡೆತ್ತಿಹೋಗಿ, ನರಗುಂದದ ಕೋಟೆಯನ್ನು ಹಿಡಿದುಕೊಂಡು, ಆಗ ಜಹಗೀರದಾರನಾಗಿದ್ದ, ವೆಂಕಟರಾಯನೆಂಬವನನ್ನು ಕಬಾಳದುರ್ಗವೆಂಬಲ್ಲಿ ಸೆರೆಯಲ್ಲಿಟ್ಟನು. ಟೀಪುವು ದಂಡೆತ್ತಿ ಬರುವುದಕ್ಕಿಂತ ಮೊದಲು ನರಗುಂದದ ಸಂಸ್ಥಾನಿಕನು ಪೇಶ್ವೇನ ಸಹಾಯ ಬೇಡಿದ್ದರಿಂದ, ಟೀಪುವಿನ ಹಾವಳಿಯನ್ನು ನೋಡಿ ಅವನಿಗೆ ಸ್ವಾಭಾವಿಕವಾಗಿ ಸಿಟ್ಟು ಬಂತು. ಇಂಗ್ಲಿಷರಂತು ಟೀಪುವಿನ ಸೊಕ್ಕನ್ನು ಮುರಿಯಲಿಕ್ಕೆ ಹವಣಿಸುತ್ತಿದ್ದರು. ಆದ್ದರಿಂದ ಇಂಗ್ಲಿಷರೂ ಪೇಶ್ವೇನೂ ನಿಜಾಮನೂ† ಒಟ್ಟುಗೂಡಿ ಮೈಸೂರನ್ನು ಒಳನುಗ್ಗ

* ಇದಕ್ಕೂ ಮೊದಲು ತಂಜಾವರದಲ್ಲಿ ಇಂಗ್ಲಿಷರ ರಾಯಭಾರಿಯಾದ ಸುಲಿಹ್ವನನೆಂಬವನು ಮೈಸೂರ ಅರಸು-ಮನೆತನದ ರಾಣಿಯಾದ ಲಕ್ಷ್ಮಮ್ಮಣ್ಣಿಯವರ ವಕೀಲನಾದ ತಿರುಮಲ್ಲರಾಯನೆಂಬವನೊಡನೆ ಒಪ್ಪಂದಮಾಡಿ, ಆ-ರಾಣಿಯ ಪಕ್ಷದ ಜನರ ನೆರವಿನಿಂದ ಮಧುರಾ, ಕೊಯಿಮುತ್ತೂರ ಈ ಜಿಲ್ಹೆಗಳಲ್ಲಿದ್ದ ಹಲವು ಸ್ಥಳಗಳನ್ನು ಹಿಡಿದುಕೊಂಡನು. ಅಷ್ಟರಲ್ಲಿ ಮಂಗಳೂರ ಒಪ್ಪಂದವಾದ್ದರಿಂದ ಇಂಗ್ಲಿಷರು ತಾವು ಹಿಡಿದುಕೊಂಡ ಎಲ್ಲ ಸ್ಥಳಗಳನ್ನು ತಿರುಗಿ ಕೊಟ್ಟರು.

† ಈಮೊದಲೇ ಟೀಪುವು ನಿಜಾಮನ ಅಂಕೆಯಲ್ಲಿದ್ದ ವಿಜಾಪುರವು ತನ್ನದೆಂದು ನಿಜಾಮನೊಡನೆ ಕಾಲುಕೆದರಿ ಜಗಳತೆಗೆದಿದ್ದನು. ಆದ್ದರಿಂದ ನಿಜಾಮನು ಟೀಪುವಿನ ವಿರೋಧಿಗಳನ್ನು ಕೂಡಿದನು.

ಬೇಕೆಂದು ಗೊತ್ತುಮಾಡಿದರು (೧೭೮೬). ಪೇಶ್ವೇನ ದಳವಾಯಿಯಾದ ಹರಿಪಂತನು ಬಾದಾಮಿಯನ್ನು ಹಿಡಿದುಕೊಂಡನು. ಆಗ ಸುಲತ್ತಾನನು ತನ್ನ ದಳವಾಯಿಯಾದ ಬುರಾನುದ್ದೀನನನ್ನು ಪೇಶ್ವೇನ ದಂಡಿಗೆ ಇದುರಾಗಲಿಕ್ಕೆ ಕಳುಹಿ ತಾನು ನಿಜಾಮನ ಹೆಂಡರು-ಮಕ್ಕಳಿದ್ದ ಆದವಾನಿಯನ್ನು ಮುತ್ತಿ, ಅದನ್ನು ನೆಲಸಮ ಮಾಡಿಬಿಟ್ಟನು.* ತರುವಾಯ ಅವನು ತುಂಗಭದ್ರಾ ನದಿಯನ್ನು ದಾಟಿ, ತನ್ನ ದಳವಾಯಿಯನ್ನು ಕೂಡಿ, ಸವಣೂರನ್ನು ಹಿಡಿದುಕೊಂಡನು. ಅಷ್ಟರಲ್ಲಿ ಇಂಗ್ಲಿಷರು ತನ್ನ ರಾಜ್ಯವನ್ನು ಒಳನುಗ್ಗುತ್ತಾರೆಂಬ ಸುದ್ದಿ ಬಂದುದರಿಂದ ಸುಲ್ತಾನನು ಆದವಾನಿ-ನರಗುಂದಗಳನ್ನು ತಿರುಗಿ ಕೊಟ್ಟು, ತಾನು ಪೇಶ್ವೇನಿಗೆ ಕೊಡತಕ್ಕ ಕಪ್ಪಗಾಣಿಕೆಯಲ್ಲಿ ೩೦ ಲಕ್ಷ ರೂಪಾಯಿಗಳನ್ನು ಆಗಲೇ ಕೊಟ್ಟು, ಉಳಿದ ೧೫ ಲಕ್ಷ ರೂಪಾಯಿಗಳನ್ನು ಹಿಂದುಗಡೆ ಕೊಡಲಿಕ್ಕೊಪ್ಪಿಕೊಂಡು, ಪೇಶ್ವೇನೊಡನೆ ಒಡಂಬಡಿಕೆಯನ್ನು ಮಾಡಿಕೊಂಡನು (೧೭೮೭ ಫೇಬ್ರುವರಿ).

ಬಳಿಕ ಸುಲ್ತಾನನು ತನ್ನ ರಾಜಧಾನಿಗೆ ಹೋಗಿ, ಮೈಸೂರ ಪಟ್ಟಣವಿದ್ದರೆ ಅದರಿಂದ ಜನರಿಗೆ ಮೊದಲಿನ ಅರಸುಮನೆತನದ ನೆನಪಾಗಬಹುದೆಂದು ತರ್ಕಿಸಿ, ಆ ಹಳೆ ರಾಜಧಾನಿಯನ್ನು ಹಾಳುಗೆಡವಬೇಕೆಂದು ಅಪ್ಪಣೆಯನ್ನಿತ್ತು, ಕಾಲಿಕತ್ತಕ್ಕೆ ಹೋಗಿ, ಅಲ್ಲಿಯ ಜನರು ಒಬ್ಬ ಹೆಂಗಸು ಬಹು ಮಂದಿ ಗಂಡಂದಿರನ್ನು ಮಾಡಿಕೊಳ್ಳುವ ಪದ್ಧತಿಯನ್ನು ಬಿಡದಿದ್ದರೆ ಒತ್ತಾಯದಿಂದ ಮುಸಲ್ಮಾನರಾಗಿ ಮಾಡಲ್ಪಡುವರೆಂದು ಒಟ್ಟುಹುಕುಮನ್ನು ತೆಗೆದು, ಆ ಹುಕುಮನ್ನು ಅಮಲಿನಲ್ಲಿ ತರಲಿಕ್ಕೆ ಬೇರೆಬೇರೆ ಮುಸಲ್ಮಾನ ಅಧಿಕಾರಿಗಳನ್ನು ನೇಮಿಸಿ, ತಾನು ಮರಳಿ ರಾಜಧಾನಿಗೆ ಬಂದನು. ಅಲ್ಲಿ ಅವನು ತನ್ನ ದಂಡಿನ ವ್ಯವಸ್ಥೆಯನ್ನು ಮಾಡುವಾಗ ಮಲಬಾರದಲ್ಲಿ ಬಂಡಾಯವೆದ್ದಿತು. ಆಗಲವನು ಅಲ್ಲಿಗೆ ತಾನೇ ಹೋಗಿ, ಕುತಿಪುರಮ್

---

* ಇಲ್ಲಿ ಮೊಹರು ಮಾಡಿದ ದೊಡ್ಡ ದೊಡ್ಡ ಸಂದುಕಗಳಿದ್ದವು. ಅವುಗಳನ್ನು ಒಡಿಸಿ ನೋಡಲು ಮೊಚ್ಚೆಜೋಡುಗಳ ಹೊರತು ಬೇರೆಯೇನೂ ಇದ್ದಿಲ್ಲ!!

ಎಂಬಲ್ಲಿಯ ೨ ಸಾವಿರ ನಾಯರರನ್ನು ಸೆರೆಹಿಡಿದು, ಅವರನ್ನು ಒ ತ್ತಾಯದಿಂದ ಮುಸಲ್ಮಾನರನ್ನು ಮಾಡಿ, ಮಲಬಾರದ ಎಷ್ಟೋ ದೇವಸ್ಥಾನಗಳನ್ನು ಸುಲಿದು, **ಕಾನಾನೂರ** ಅರಸನ ಮಗಳನ್ನು ತನ್ನ ಮಗನಾದ **ಅಬ್ದುಲ್ ಖಾಲಿಕ್** ಎಂಬವನಿಗೆ ಮದುವೆಮಾ ಡಿದನು.

**ಮಂಗಳೂರ** ಒಪ್ಪಂದವಾದ ಬಳಿಕ ಟೀಪುಸುಲ್ತಾನನು ಇಂ ಗ್ಲಿಷರನ್ನು ಮುರಿಬಡಿಯುವ ಉದ್ದೇಶದಿಂದ **ತುರ್ಕಸ್ಥಾನ**ಕ್ಕೆ ತನ್ನ ವಕೀಲನನ್ನು ಕಳುಹಿದನು. ಆದರೆ ಅದರಿಂದೇನೂ ಫಲವಾಗಲಿಲ್ಲ. ಮುಂದೆ ೧೭೮೭ರಲ್ಲಿ **ಮಹಮ್ಮದ ರವೇಶಖಾನ**ನೆಂಬವನನ್ನು **ಪಾರಿಸ** ಪಟ್ಟಣಕ್ಕೆ ಕಳುಹಿದನು. ಆಕಾಲಕ್ಕೆ ಫ್ರಾನ್ಸದ ಅರಸನಾ ದ ೧೬ನೆಯ **ಲೂಯಿ**ಯು ಅವನಿಗೆ ಆದರಾತಿಥ್ಯಮಾಡಿ, ಸದ್ಯಕ್ಕೆ ಸಹಾಯಮಾಡಲಿಕ್ಕೆ ಅನುಕೂಲವಿಲ್ಲೆಂದು ಹೇಳಿ ಕಳುಹಿದನು.

ಅತ್ತ ೧೭೬೧ರಲ್ಲಿ **ಕಾಲಿಕತ್ತ**ದ **ಸಾಮೊರಿನ್ನ**ನು **ಕೋಚೀನ** ದ ರಾಜ್ಯವನ್ನೊಳನುಗ್ಗಿದನು. ಆಗ ಅಲ್ಲಿಯ ಅರಸನು **ಡಚ್ಚರ** ಸಹಾಯ ತೆಗೆದುಕೊಂಡು, ಅವನನ್ನು ಹಿಂದಿರುಗಿಸಿದನು. ಈಯು ಪಕಾರಕ್ಕಾಗಿ **ಕೋಚೀನ**ದರಸನು ತನ್ನ ರಾಜ್ಯದಲ್ಲಿದ್ದ ಒತ್ತಿನ ದಂಡೆಗುಂಟ ೩೦ ಮೈಲು ವಿಸ್ತಾರವಾಗಿದ್ದ ಚಚ್ಚೌಕು ಪ್ರದೇಶವನ್ನು ಡಚ್ಚರಿಗೆ ಇನಾಮುಕೊಟ್ಟನು. ಮುಂದೆ ಅವರು ದಂಡೆಯ ಮೇ ಲಿದ್ದ **ಕರಿಯಪಿಳ್ಳೆ**ಯೆಂಬಲ್ಲಿ ತಮ್ಮ ಸ್ಥಳದ ಮೇರೆಗುಂಟ ೧೨ ಅಡಿ ಎತ್ತರ ೨೦ ಅಡಿ ಅಗಲವಾದ ಒಂದು ಗೋಡೆಯನ್ನು ಹಾಕಿಸಿದ ರು. ಇದೇ ಹೆಸರಾದ ತ್ರಾವಣಕೋರದ (ತಿರುವಾಂಕೂರಿನ) **ಗೋಡೆ**ಯು. ಮುಂದೆ ಸನ್ ೧೭೭೬ರಲಿ ಹೈದರ ಅಲ್ಲಿಯು ಮಲ ಬಾರವನ್ನು ಒಳನುಗ್ಗಿ, ಕೋಚೀನದ ರಾಜನನ್ನು ತನ್ನ ಮಾಂಡಲಿಕ ನನ್ನು ಮಾಡಿಕೊಂಡನು. ಅವನ ಮನಸ್ಸಿನಲ್ಲಿ ತ್ರಾವಣಕೋರವ ನ್ನು ತೆಗೆದುಕೊಳ್ಳುವದಿತ್ತು; ಆದರೆ ಡಚ್ಚರು ಅವನಿಗೆ ಇದುರಾ ದ್ದರಿಂದ ಅವನು ಹಿಂದಿರುಗ ಬೇಕಾಯಿತು.

**ಟೀಪು**ವಿನ ಮನಸ್ಸಿನಲ್ಲಿ ಬಹಳ ದಿವಸದಿಂದ ಮಲಬಾರವನ್ನು

ಹಿಡಿದುಕೊಳ್ಳುವದಿತ್ತು. ಏಕೆಂದರೆ ಯುದ್ಧಸಾಮುಗ್ರಿಗಳನ್ನು ತರಿಸಿಕೊಳ್ಳಲಿಕ್ಕೂ, ನೀರಿನ ಮೇಲಿಂದ ಹೋಗಿ ಇಂಗ್ಲಿಷರನ್ನು ಕೆಣಕಲಿಕ್ಕೂ, ಅವನಿಗೆ ಅದರ ಹೊರತು ಬೇರೆಯಾವ ಸ್ಥಳವಿದ್ದಿಲ್ಲ. ಆದ್ದರಿಂದ ಅವನು ತ್ರಾವಣಕೋರದೊಡನೆ ಜಗಳಾಡಲಿಕ್ಕೆ ಕೆಲವು ನೆವನಗಳನ್ನು ತೆಗೆದನು. ಅವುಗಳಾವವೆಂದರೆ:—(೧) ತ್ರಾವಣಕೋರದ ಅರಸನು ಮಲಬಾರದ ಕೆಲವು ತಪ್ಪುಗಾರರಿಗೆ ಆಶ್ರಯ ಕೊಟ್ಟಿದ್ದನು. (೨) ಅವನು ಟೀಪುವಿನ ಮಾಂಡಲಿಕನಾದ ಕೋಚೀನದ ಅರಸನ ರಾಜ್ಯದಲ್ಲಿ ತನ್ನ ರಾಜ್ಯದ ಮೇರೆಯು ಗೋಡೆಯನ್ನು ಒಯ್ದಿದ್ದನು. (೩) ಅವನು ಡಚ್ಚರಿಂದ **ಕ್ರೆಂಗನೂರ, ಅಯಾಕೋಟ** ಈಕೋಟೆಗಳನ್ನು ಮಾರಲಿಕ್ಕೆ ತೆಗೆದುಕೊಂಡಿದ್ದನು. ಈಮೇರೆಗೆ ಯುದ್ಧದ ಕಾರಣಗಳನ್ನು ಹುಡುಕಿ ತೆಗೆದು, ಕೋಚೀನದ ಅರಸನನ್ನು ತನ್ನ ಕಡೆಗೆ ಮಾಡಿಕೊಂಡು, ತ್ರಾವಣಕೋರದ ಅರಸನು ಮದ್ರಾಸ ಸರಕಾರದ ಗೆಳೆಯನೆಂಬ ಸಂಗತಿಯನ್ನು ಲಕ್ಷ್ಯಕ್ಕೆತಾರದೆ* ಟೀಪುಸುಲ್ತಾನನು ಸೊಕ್ಕಿನಿಂದ ದಂಡೆತ್ತಿಹೋಗಿ, ತ್ರಾವಣಕೋರದ ಗೋಡೆಯನ್ನು ಮುತ್ತಿದನು (೨೮ನೆಯ ದಿಶಂಬರ ೧೭೮೯). ಆದರೆ ಮೊಟ್ಟಮೊದಲು ಆಯತ್ನದಲ್ಲಿ ಅವನಿಗೆ ಯಶಬರಲಿಲ್ಲ. ಏಕೆಂದರೆ ಮರುದಿವಸವೇ ತ್ರಾವಣಕೋರದ ದಂಡಿನವರು ಹುರುಪಿನಿಂದ ಕಾದಿ, ಅವನ ದಂಡಿನವರನ್ನು ದಿಕ್ಕುಪಾಲಾಗಿ ಓಡಿಸಿಬಿಟ್ಟರು. ಟೀಪುವಿನ ಪಲ್ಲಕ್ಕಿಯವರು ಅವನನ್ನು ಚೆಲ್ಲಿಕೊಟ್ಟು ಓಡಿದ್ದರಿಂದ ಅವ ಒತ್ತಟ್ಟಿಗಾದನು, ಅವನ ಕಟಾರಿ-ಡಾಲುಗಳು ಒತ್ತಟ್ಟಿಗಾದವು. ಆದ್ದರಿಂದ ಅವನು ಕಾಲುನೋವು ಮಾಡಿಕೊಂಡು ಜೀವವುಳಿಸಿಕೊಂಡು ಪಾರಾಗಿಹೋಗಬೇಕಾದರೆ ಸಾಕುಬೇಕಾಯಿತು.

---

* ೧೭೬೮ರಲ್ಲಿ ಇಂಗ್ಲಿಷರು ನಿಜಾಮನೊಡನೆ ಮಾಡಿದ ಒಪ್ಪಂದದಲ್ಲಿ ನಿಜಾಮನು ಇಂಗ್ಲಿಷರ ಗೆಳೆಯರೊಡನೆ ಯುದ್ಧಮಾಡಕೂಡದೆಂಬದೊಂದು ಶರ್ತು ಇತ್ತು. ಆಗೆಳೆಯರ ಪಟ್ಟಿಯಲ್ಲಿ ಟೀಪುವಿನ ಹೆಸರೇ ಇದ್ದಿಲ್ಲ ಮತ್ತು ಟೀಪುವು ತನ್ನ ಹೆಸರನ್ನು ಇಂಗ್ಲಿಷರು ದ್ವೇಷಬುದ್ಧಿಯಿಂದ ಬಿಟ್ಟರುತ್ತಾರೆಂದು ತಿಳಿಕೊಂಡಿದ್ದನು.

**ಈಕಾಲಕ್ಕೆ ಕಾರ್ನವಾಲೀಸ** ದೊರೆಯು ಹಿಂದುಸ್ಥಾನದ ಸರ್ವಾಧಿಪತಿಯಾಗಿದ್ದನು. ಅವನು ತ್ರಾವಣಕೋರದ ಅರಸನು ಮಾರಲಿಕ್ಕೆ ತೆಗೆದುಕೊಂಡ ಸ್ಥಳಗಳಿಗೆ ಎಷ್ಟುಮಟ್ಟಿಗೆ ಟೀಪುವಿನ ಹಕ್ಕಿರುತ್ತದೆಂಬದನ್ನು ವಿಚಾರಮಾಡಲಿಕ್ಕೆ ಮದ್ರಾಸದ ಅಧಿಪತಿಗೆ ಈಮೊದಲೇ ಬರೆದಿದ್ದನು. ಆದರೆ ಟೀಪುವು ತನ್ನ ಮನಸ್ಸಿಗೆ ಬಂದಂತೆ ನಡೆದುದರಿಂದ ಕಾರ್ನವಾಲೀಸನು ತ್ರಾವಣಕೋರದ ಅರಸನಿಗೆ ನೆರವಾಗಬೇಕೆಂದು ೨ನೆಯ ಹುಕುಮನ್ನು ಅವನಿಗೆ ಕಳುಹಿದನು (೩೦ ಮಾರ್ಚ ೧೭೯೦).

ಈಸಂಗತಿಯನ್ನು ಅರಿಯದ ಟೀಪುಸುಲ್ತಾನನು ತನಗೆ ತ್ರಾವಣಕೋರದ ದಂಡಿನಿಂದಾದ ಅಪಮಾನಕ್ಕೆ ಸಿಟ್ಟಿಗೆದ್ದು, ಮುತ್ತಿಗೆಯ ಸಾಹಿತ್ಯವನ್ನೆಲ್ಲಾ ತೆಗೆದುಕೊಂಡು, ಅಲ್ಲಿಗೆ ಹೋಗಿ, ಆಗೋಡೆಯನ್ನು ಕೆಡವಿ, ಅಲ್ಲಿಯ ದಂಡನ್ನು ಸೋಲಿಸಿ ಹಿಂದಕ್ಕೆ ಅಟ್ಟಿ, ಗುಡಿಗುಂಡಾರಗಳನ್ನು ಕೆಡವಿಹಾಕಿಸಿದನು. ಮದ್ರಾಸ-ಸರಕಾರದವರು ತ್ರಾವಣಕೋರದ ಅರಸನ ಸಹಾಯಕ್ಕೆ ಬೇಗನೆ ದಂಡು ಕಳುಹದ್ದರಿಂದ ಅವನ ಹಾವಳಿಗೆ ಅಡ್ಡಿಯಾಗಲಿಲ್ಲ. ಅಷ್ಟರಲ್ಲಿ ಮಳೆಗಾಲವು ಆರಂಭವಾದುದರಿಂದಲೂ ಇಂಗ್ಲಿಷರ ದಂಡು ಬರುತ್ತದೆಂದು ಸುದ್ದಿ ಬಂದುದರಿಂದಲೂ ಸುಲ್ತಾನನು ಮರಳಿ **ಪಾಲಘಾಟಿಗೆ** ಬಂದನು.

ಸುಲ್ತಾನನು ತ್ರಾವಣಕೋರಂದ ಗೋಡೆಯ ಮೇಲೆ ಬಿದ್ದನೆಂಬ ಸುದ್ದಿಯನ್ನು ಕೇಳಿ, ಕಾರ್ನವಾಲೀಸ ದೊರೆಯು ಅವನ ಸೊಕ್ಕುಮುರಿಯುವ ಉದ್ದೇಶದಿಂದ ಪೇಶ್ವೇ-ನಿಜಾಮರ ದಂಡಿನ ಸಹಾಯತೆಗೆದುಗೊಂಡು, ಮದ್ರಾಸದ ಹೊಸ ಅಧಿಪತಿಯ ಒಪ್ಪಿಗೆಯಿಂದ ಜನರಲ್ **ಮೆಡೋಸನನ್ನು** ಎಲ್ಲ ಕೂಡಿದ ದಂಡಿನ ಮುಖ್ಯ ದಳವಾಯಿಯನ್ನು ಮಾಡಿದನು. ಈ ಕಾಲಕ್ಕೆ ಸುಲ್ತಾನನು ಕೊಯಿಮುತ್ತೂರಿನಲ್ಲಿದ್ದನು. ಅವನು ಈಸುದ್ದಿಯ ಕೇಳಿ ಅವಸರದಿಂದ **ಕೊಯಿಮುತ್ತೂರನ್ನು** ಬಿಟ್ಟು, ಶ್ರೀರಂಗಪಟ್ಟಣಕ್ಕೆ ಹೋಗಿ ಯುದ್ಧದ ಸಿದ್ಧತೆಯನ್ನು ಮಾಡಲಾರಂಭಿಸಿದನು. ಅದ